ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ

# ಅಮಾತ್ಯ ನಂದಿನಿ.

( ಒಂದು ಕಾದಂಬರಿ )

ಬರೆದವರು:—

ಭಾರತೀಸುತ.

( "ನನ್ನ ಅತ್ತಿಗೆ"ಯನ್ನು ಬರೆದವರು )



ಅಗಸ್ಟ 1938

ಬೆಲೆ ೧-೪-೦

# ಬರೆಹಗಾರನ ವಿನಂತಿ



ಈ ಕಥಾವಸ್ತುವು ಪೌರಾಣಿಕವಾದದ್ದು. ಜೈಮಿನೀ ಭಾರತದಲ್ಲಿ ಹಲವರು ಚಂದ್ರಹಾಸನ ಉಪಾಖ್ಯಾನವನ್ನು ಓದಿರಬಹುದು; ಈ ಕೃತಿಯು ಪೌರಾಣಿಕವಾದ ಆ ಕತೆಗಿಂತ ವಿಭಿನ್ನವಾಗಿದೆ. ಅದು ಅಮಾನುಷ ಕತೆಯಿಂದ ತುಂಬಿಪ್ಪರೆ, ನಾನು ಈ ಕತೆಯನ್ನು ಈಗಿನ ಜನರ ಮನೋಧರ್ಮಕ್ಕನುಗುಣವಾಗಿ ಮಾರ್ಪಡಿಸಿದ್ದೇನೆ. ಆದುದರಿಂದ ಇದು ವಾಚಕರ ಮನಸ್ಸನ್ನು ಸಂತೃಪ್ತಿಪಡಿಸಬಹುದೆಂದು ನನ್ನ ನಂಬಿಕೆಯು.

ಕನ್ನಡಿಗರು ನನ್ನ ಈ ಉದ್ಯಮಗಳಿಗೆ ಪ್ರೋತ್ಸಾಹವನ್ನು ನೀಡಿ, ಸಾಹಿತ್ಯರಂಗದಲ್ಲಿ ಇನ್ನು ಹೆಚ್ಚಿನ ಪ್ರಯತ್ನಗಳಿಗೆ ನನಗೆ ದಾರೀ ತೋರಿಸುವರೆಂದು ನನ್ನ ವಿಶ್ವಾಸವು!

ಈ ಕೃತಿಯನ್ನು ರಚಿಸಲು ನನ್ನನ್ನು ಪ್ರೋತ್ಸಾಹಿಸಿದ ಶ್ರೀಯುತ ಭಿ. ಪ. ಕಾಳಯ್ಯನವರಿಗೆ ನನ್ನ ವಂದನೆಗಳು. ಅವರ ಪ್ರೋತ್ಸಾಹದ ಫಲವಾಗಿದೆ ಈ ಕೃತಿಯೆಂದರೆ ತಪ್ಪಾಗಲಾರದು. ಅವರು ಇದನ್ನು ಶ್ರೀಶೇಷಾಚಲ ಗ್ರಂಥಮಾಲೆಯ ಕುಸುಮವಾಗಿ ಪ್ರಕಟಿಸಲೊಪ್ಪಿದುದುದಕ್ಕೆ ಕೃತಜ್ಞನಿರುತ್ತೇನೆ

ಕೊಟ್ಟಿಪೇಟೆ (ಕೊಡಗು)
14-5-1938

ಕನ್ನಡಿಗರ ಚರಣ ಸೇವಕ,
**ಭಾರತೀಸುತ.**



# ವಿಷಯಾನುಕ್ರಮಣಿಕೆ.

# ಅಮಾತ್ಯ-ನಂದಿನಿ.

## ಮದನನ ಪ್ರೇಮಭಿಕ್ಷೆ.

"ರಾಜಕುಮಾರಿ?"

"ಏನು ಮದನ?"

"ನಿನ್ನಲ್ಲಿ ಪ್ರೇಮ ಭಿಕ್ಷೆಯನ್ನು ಯಾಚಿಸಲು ನಾನು ಬಂದಿರುವೆನು; ನಿನ್ನ ಎದೆಯಲ್ಲಿ ನನಗೆ ಒಂದು ಸ್ಥಾನವನ್ನು ನೀಡಬೇಕೆಂಬುದೇ ನನ್ನ ಯಾಚನೆಯು!"

"ಮದನಾ, ಒಬ್ಬ ಸಹೋದರನಂತೆ ನೀನು ಯಾವಾಗಲೂ ನನ್ನ ಎದೆಯಲ್ಲಿ ಪ್ರಕಾಶಿಸುತ್ತಿರುವೆ. ವಿಧಾತನು ಭ್ರಾತೃಸುಖದ ಸವಿಯನ್ನು ಆಸ್ವಾದಿಸುವ ಭಾಗ್ಯವನ್ನು ನನ್ನ ಹಣೆಯಲ್ಲಿ ಬರೆಯಲಿಲ್ಲ; ಆದರೆ ನಾನು ನಿಷ್ಕಲಂಕವಾದ ಸಹೋದರ ಪ್ರೇಮದ ರುಚಿಯನ್ನು ನಿನ್ನ ಮೂಲಕ ಹೀರುತ್ತಿರುವೆನು "

"ರಾಜಕುಮಾರಿ, ನಾನು ನಿನ್ನ ಬಿಂಬವನ್ನು ನನ್ನ ಎದೆಯಲ್ಲಿ ಪ್ರತಿಷ್ಠಾಪಿಸಿರುವೆನು. ನಿನ್ನ ದಾಸನಂತೆ ಈ ಬದುಕನ್ನು ವ್ಯಯಗೊಳಿಸಲು ಸನ್ನದ್ಧನಾಗಿರುವೆನು; ಈ ಜೀವನದ ಯಾತ್ರೆಯಲ್ಲಿ ನೀನು ನನ್ನ ಸಹಭಾಗಿನಿಯಾಗಬೇಕೆಂಬುದೇ ನನ್ನ ಆಗ್ರಹವು!'

"ಮಂತ್ರೀಕುಮಾರ, ಆ ನಿನ್ನ ಹಂಬಲವನ್ನು ನಿನ್ನ ಮೆದುಳಿನಿಂದ ದೂರ ಮಾಡಬೇಕೆಂಬುದೇ ನಿನ್ನ ತಂಗಿಯು ನಿನಗೆ ನೀಡುತ್ತಿರುವ ಉಪದೇಶವು. ಇದು ವಿಷಯಾಕುಮಾರಿಯ ಉಪದೇಶವೆಂದು ವಿಚಾರಿಸು."

"ಹೃದಯಪೂರ್ವಕವಾಗಿ ನಿನ್ನನ್ನು ಆರಾಧಿಸುತ್ತಿರುವ ಈ ನನ್ನ ಮನೋಭಾವನೆಯ ಪರಿಚಯವನ್ನು ನಾನು ನಿನಗೆ ಯಾವುದರ ಮೂಲಕ ಮಾಡಿಕೊಡಲಿ? ನಾನೆಷ್ಟು ಪ್ರಯತ್ನಿಸಿದರೂ, ನಿನ್ನ ಮೋಹನಾಕಾರವು ಒಂದು ವಟದ್ರುಮದಂತೆ ನನ್ನ ಹೃದಯದಲ್ಲಿ ಬೆಳೆದು ವ್ಯಾಪಿಸಿರುವುದು. ಅದನ್ನು ಕೀಳುವುದು ಅಸಾಧ್ಯವಾಗಿ ಪರಿಣಮಿಸಿದೆ! ಅನುರಾಗದ ಬೆಂಕಿಯು ನನ್ನ ಎದೆಯನ್ನು ಸುದುತ್ತಲಿರುವುದು; ಅದು ಸಹನಾತೀತವಾಗಿ ಪರಿಣಮಿಸಿರುವುದರಿಂದ ನನ್ನ ಹಂಬಲವನ್ನು ನಿನಗೆ ನಾನು ವ್ಯಕ್ತಪಡಿಸಿದೆನು."

"ಅಮಾತ್ಯನಂದನಾ, ನಮ್ಮ ಬಾಲ್ಯವನ್ನು ಒಮ್ಮೆ ವಿಚಾರಿಸು; ನಿಷ್ಕಲಂಕವಾದ ಪ್ರೇಮದ ಸಿಹಿನೀರನ್ನು ಕುಡಿದು, ಸಹೋದರ-ಸಹೋದರಿಯರಂತೆ ಆಚಾರ್ಯರ ಚರಣಗಳ ಬಳಿಯಲ್ಲಿ ಕುಳಿತು ವರ್ಣಮಾಲೆಯ ಪ್ರಥಮಾಕ್ಷರಗಳನ್ನು ಕಲಿತ ಚಿತ್ರವನ್ನು ಒಮ್ಮೆ ಹಿಂದಿರುಗಿ ನೋಡು. ನಾವು ಬಾಲ್ಯದಲ್ಲ ಈ ಅರಮನೆಯ ಅಂಗಣದಲ್ಲಿ ಚಂಡಾಡಿದ ದೃಶ್ಯವನ್ನು ಒಮ್ಮೆ ನಿನ್ನ ಮನಶ್ಚಕ್ಷುಸ್ಸುಗಳನ್ನು ತೆರೆದು ಅವಲೋಕಿಸು. ಆ ಮೃದು ಮಧುರ ಸವಿಯನ್ನೇ ನಾನಿಂದು ಬಯಸುತ್ತಿರುವೆನು ನಮ್ಮಿಬ್ಬರ ನಡುವೆ ರಾಗಶೂನ್ಯವಾದ ಪ್ರೇಮದ ನದಿಯು ಸದಾ ಹರಿಯುತ್ತಿರಲಿ! ಜಗತ್ತಿನಲ್ಲಿ ಅದಕ್ಕಿಂತಲೂ ಉಜ್ವಲವಾದ ಪ್ರೇಮವು ಬೇರೊಂದಿಲ್ಲ."

"ಬಾಲ್ಯದಿಂದಲೇ ನಿನ್ನ ಪರಿಣಾಮವು ಅದೆಷ್ಟು ಮಹತ್ತಾಗಿ ನನ್ನ ಮೇಲೆ ಆಗಿದೆ ಎಂಬದನ್ನು ಆಲೋಚಿಸಲು, ನೀನಿಲ್ಲದ ಬದುಕು ವ್ಯರ್ಥವೆಂಬ ಭಾವನೆಯು ನನ್ನ ಮೆದುಳಿನಲ್ಲಿ ಬೇರೂರಿದೆ. ಅನುರಾಗದ ಸಿಹಿ ನೀರನ್ನು ಕುಡಿದು ಶಾಂತಿಯನ್ನು ಹೊಂದಲು ನಾನು ನಿನ್ನ ಬಳಿಗೆ ಬಂದಿರುವೆನು. ಈ ದಾಸನನ್ನು ನಿರಾಕರಿಸದಿರು."

"ಮದನ, ನಿನ್ನಂಥ ವಿದ್ಯಾಸಂಪನ್ನನು ವ್ಯಾಮೋಹಗಳ ತಿಮಿರರಾಶಿಯಿಂದ ಆವೃತನಾಗಿ ಹೋಗುವುದು ಆಶ್ಚರ್ಯಕರವೇ ಸರಿ. ಈಗ ನೀನು ನಾನೊಬ್ಬ ದೇವತೆಯಾಗಿರುವೆನೆಂದು ಭಾವಿಸಿ ಆರಾಧಿಸುತ್ತಲಿರುವೆ. ಈ ಚಂಪೆಯು-ಯೌವನಧನರೂಪಸಂಪನ್ನಳಾದ ನಾನು-ಕೇವಲ ದರಿದ್ರಳೂ ಕುರೂಪಿಯೂ ಆಗಿದ್ದರೆ ನೀನು ನನ್ನನ್ನು ಯಾಚಿಸುತ್ತಿದ್ದೆಯೊ? ಎಂದಿಗೂ ಇಲ್ಲ; ನಿನಗೆ ಬೇಕಾದವುಗಳು ರೂಪ, ಧನ, ಯೌವನಗಳು ಮಾತ್ರವಾಗಿವೆ! ನನ್ನ ರೂಪವು ನಿನ್ನ ಲೋಚನಗಳ ಶಕ್ತಿಯನ್ನು ಲೋಪವಾಗುವಂತೆ ಮಾಡಿರುವುದು ನಿಜ; ಆದುದರಿಂದಲೇ ನೀನು ನನ್ನ ರೂಪವನ್ನೂ ಧನವನ್ನೂ ಆರಾಧಿಸುತ್ತಲಿರುವೆ; ಆದರೆ "ನನ್ನನ್ನು" ಆರಾಧಿಸುವ ಉದಾರತೆಯು ನಿನ್ನ

ಹೃದಯದಲ್ಲಿ ಇಲ್ಲವೆಂಬುದನ್ನು ನಾನು ಬಲ್ಲೆನು. ಮದನ, ಒಂದು ಭೃಂಗಕ್ಕೆ ಅರಳಿದ ಹೂವಿನಲ್ಲಿ ಇರುವ ಆಸಕ್ತಿಗಿಂತ ಮಿಗಿಲಾದುದು ಯಾವುದೂ ನಿನ್ನಲ್ಲಿ ಇಲ್ಲ. ಕೇವಲ ಅನುರಾಗವೆಂಬ ಸುರಾಪಾನದಿಂದ ನನ್ನ ಬಾಳು ಪೂರ್ಣತೆಯನ್ನು ಹೊಂದುವುದೆಂದು ನಾನು ವಿಚಾರಿಸುವದಿಲ್ಲ. ಎಲ್ಲದಕ್ಕೂ ಮಿಗಿಲಾದ ಒಂದು ಸತ್ಯವನ್ನು ದರ್ಶಿಸಲು ನಾನು ಬಯಸುತ್ತಿರುವೆನು. ಆ ಬೆಳಕಿನ ಕಡೆಗೆ ಒಯ್ಯುವ ಸಂಗಾತಿಯನ್ನು-ನನ್ನ ಬದುಕಿನ ಕದಗಳನ್ನು ತೆರೆಯುವ ಒಬ್ಬ ಸಹಯಾತ್ರಿಕನನ್ನು-ನಾನು ಬಹು ಹುಡುಕುತ್ತಿರುವೆನು. ನಾನು ಮನಸ್ಸಿನಲ್ಲಿ ನಿರ್ಧರಿಸಿರುವ ಸಂಗಾತಿಯಲ್ಲಿ ಇರಬೇಕಾದ ಯಾವ ಯೋಗ್ಯತೆಗಳೂ ನಿನ್ನಲ್ಲಿ ಇಲ್ಲ. ನನ್ನ ರೂಪ, ಧನ, ಯೌವನ ಇವುಗಳನ್ನು ಮಾತ್ರ ನೀನು ಬಯಸುತ್ತಿರುವೆ ಎಂಬುದೇ ಇದಕ್ಕಿರುವ ಕಾರಣಗಳು! ಆದುದರಿಂದ ಸಚಿವನಂದನಾ, ನಾವು ಸಹೋದರ-ಸಹೋದರಿಯರಂತೆ ಜೀವನದ ಯಾತ್ರೆಯನ್ನು ಮುಂದುವರಿಸೋಣ."

"ರಾಜಕುಮಾರಿ, ನಿನ್ನ ಕೋಮಲವಾದ ಎದೆಯಿಂದ ಈ ನಿಷ್ಠುರದ ಮಾತುಗಳು ಹೊರಸೂಸುವುವು ಎಂಬುದಾಗಿ ನಾನು ಭಾವಿಸಿರಲಿಲ್ಲ."

"ನಿಷ್ಠುರದ ಮಾತುಗಳಲ್ಲ ಅವು; ನಿನ್ನ ಮೇಲಿರುವ ಅನಿರ್ವಚನೀಯ ಸಹೋದರ ಸ್ನೇಹದ ಮೂಲಕ ಈ ನುಡಿಗಳನ್ನು ಆಡಿದೆನು."

ರಾಜಕುಮಾರಿಯ ವಚನಶ್ರವಣದಿಂದ ಅಮಾತ್ಯನಂದನನು ಚಿಂತಾಮಗ್ನನಾಗಿ ನಿಂತನು. ಅವನ ಮನಸ್ಸು ಚಿಂತೆಗಳ ಗರಡೀಮನೆಯಾಗಿ ಹೋಗಿದ್ದಿತು ಆಹ್ಲಾದವನ್ನು ನೀಡುತ್ತಿರುವ ಸುಂದರವಾದ ಆ ಉಪವನವು ಅವನ ಹೃದಯದಲ್ಲಿ ಹರ್ಷವನ್ನು ತುಂಬಲಿಲ್ಲ. ಒಬ್ಬ ಮೂಢನಂತೆ ವಿಚಾರಚಿತ್ತನಾಗಿ ಅವನು ರಾಜಕುಮಾರಿಯ ವದನಮಂಡಲವನ್ನು ಈಕ್ಷಿಸುತ್ತ ನಿಂತನು.

"ರಾಜನಂದಿನಿ! ನಾನು ಯಾವ ತಪ್ಪನ್ನು ಮಾಡಿರುವೆನು?"

"ಯಾವ ತಪ್ಪನ್ನೂ ಮಾಡಿರುವುದಿಲ್ಲ!"

"ಹಾಗಾದರೆ ನನ್ನನ್ನೇಕೆ ಈ ರೀತಿ ಪೀಡಿಸುತ್ತಿರುವೆ?"

"ಅಮಾತ್ಯ ಕುಮಾರ! ಇದು ತಪ್ಪು ಗ್ರಹಿಕೆಯು. ತನ್ನ ಅಣ್ಣನನ್ನು ಪೀಡಿಸಲು ತಂಗಿಯ ಮನವು ಎಂದಾದರೂ ಒಪ್ಪುವುದೆ? ಮದನ, ಕಳೆದುದನ್ನು ಮರೆತು ಬಿಡು; ನಾವು ಲೋಕದಲ್ಲಿ ಅಣ್ಣ-ತಂಗಿಯರಂತೆ ಬಾಳೋಣ; ಆದರೆ ನಿನ್ನನ್ನು ನನ್ನ ಪ್ರಾಣಾಧಿಕನನ್ನಾಗಿ ಸ್ವೀಕರಿಸಲು ನನ್ನ ಮನವು ಒಪ್ಪದು. ನಿಜವಾಗಿಯೂ ವಿಕಾರಪರಿಪೂರ್ಣವಾದ ಅದಕ್ಕಿಂತಲೂ ಇದೇ ಮೇಲು!',

“ರಾಜನಂದಿನಿ! ಈಗಲಿರುವ ರಾಜ್ಯದ ಸ್ಥಿತಿಗತಿಗಳನ್ನು ನೀನು ಅರಿತಿರುವೆಯಾ?”

“ಚೆನ್ನಾಗಿ ಬಲ್ಲೆನು; ಶತ್ರುಗಳ ಆಕ್ರಮಣದ ಸುದ್ದಿಯನ್ನು ಕೇಳಿರುವೆನು. ರಾಜಕಾರಣವಿಶಾರದನಾದ ನಿನ್ನ ತಂದೆಯೂ, ರಣಪಟುವಾದ ನೀನೂ ಇರುವಾಗ ಯಾವ ಭಯಕ್ಕೆ ತಾನೇ ಅವಕಾಶವಿದೆ?”

“ಆದರೆ ಯಾವ ಫಲಾಪೇಕ್ಷೆಯೂ ಇಲ್ಲದೆ ನಾವು ದೇಶವನ್ನು ರಕ್ಷಿಸುವುದಕ್ಕಾಗಿ ಕಾದುವೆವೆಂದು ನೀನು ನೆನೆದಿರುವೆಯಾ?”

“ನಮ್ಮ ದೇಶದ ಆಧಾರಸ್ಥಂಭಗಳಾಗಿ ನಿಂತಿರುವ ನಿಮ್ಮಗಳ ಕರ್ತವ್ಯವಲ್ಲವೇ ಅದು?”

“ಆದರೆ ಈ ಮದನನು ವೃಥಾ ಪ್ರಾಣವನ್ನು ಬಲಿಯೊಡ್ಡಿ ಶತ್ರುಗಳೊಡನೆ ಕಾದಾಡಲು ಸಿದ್ಧನಾಗಿರುವುದಿಲ್ಲ. ಅದಕ್ಕೆ ಸರಿಯಾದ ಪ್ರತಿಫಲವನ್ನು ನಾನು ಬಯಸುತ್ತಿರುವೆನು. ಅದು ದೊರಕದೆ ನಾನು ಕಾದಲಾರೆನು.”

“ಯಾವ ಪ್ರತಿಫಲವದು?” “ನಿನ್ನನ್ನು”

ಮಂತ್ರೀ ಕುಮಾರನ ಈ ನುಡಿಗಳನ್ನು ಆಶ್ರಾವಿಸಿ ರಾಜಕುಮಾರಿಯ ಕಪೋಲಗಳು ಕೆಂಪಾಗಿ ಹೋದುವು. ಬೆಂಕಿಯ ಕಿಡಿಗಳು ಕಣ್ಣುಗಳಲ್ಲಿ ಹೊರಸೂಸಿದುವು; ಅವಳ ಮನಸ್ಸು ಪ್ರಕ್ಷುಬ್ಧವಾಗಿ ಹೋಯಿತು. ಅವಳು ಎರಡು ನಿಮಿಷಗಳವರೆಗೆ ಮೌನವನ್ನು ಅವಲಂಬಿಸಿದ್ದು, ಅನಂತರ “ಮಂತ್ರೀ ಕುಮಾರ! ನನ್ನ ಊಹೆಯು ಸತ್ಯವಾಗಿ ಪರಿಣಮಿಸಿತು. ನಾನು ನೆನೆದಂತೆ ಅಷ್ಟು ಶ್ರೇಷ್ಠತರಗತಿಯ ಪುರುಷನು ನೀನಲ್ಲ; ನನ್ನನ್ನು ನಿನ್ನ ಪತ್ನಿಯನ್ನಾಗಿ ಮಾಡಿ, ಸಿಂಹಾಸನವನ್ನು ಆಕ್ರಮಿಸುವುದಾಗಿದೆ ನಿನ್ನ ಉದ್ದೇಶವು. ಪರರ ಆಕ್ರಮಣದಿಂದ ದೇಶವನ್ನು ಸಲಹಲು-ನಾನು ನಿನ್ನ ಅಭೀಷ್ಟಕ್ಕೆ ಒಪ್ಪದಿದ್ದರೆ-ನೀನು ಸನ್ನದ್ಧನಾಗುವುದಿಲ್ಲವೆಂಬ ಭೀತಿಯನ್ನು ತೋರಿಸುತ್ತಿರುವೆ; ಆದರೆ ಮದನ, ಬೇಕಾದರೆ ನಾನು ಸಿಂಹಾಸನದ ಅಧಿಕಾರವನ್ನು ತ್ಯಜಿಸುವೆನು; ದಾರಿದ್ರ್ಯಪೂರ್ಣವಾದ ಬದುಕನ್ನು ಸ್ವಸಂತೋಷಪೂರ್ವಕ ಸ್ವೀಕರಿಸುವೆನು! ಆದರೆ ನನ್ನ ಮನಸ್ಸಿಗೆ ಬಾರದ ಪುರುಷನನ್ನು ಮಾತ್ರ ನಾನು ಎಂದಿಗೂ ಸ್ವೀಕರಿಸಲಾರೆನು! ಅನುರಾಗವಿಲ್ಲದ ಯಜ್ಞಕುಂಡದಲ್ಲಿ ಧುಮುಕಲಾರೆನು!”

“ರಾಜನಂದಿನಿ, ನಿನ್ನ ನಿರ್ಧರವು ಫಲಪ್ರದವಾಗುವಂತಿಲ್ಲ!”

“ಅದೇಕೆ?”

“ನಿನ್ನ ತಂದೆಯು ನಮ್ಮ ಕೈಗಳೊಳಗಿರುವ ಗೊಂಬೆಯೆಂದು ತಿಳಿ!”

“ಆದರೆ ತಂದೆಯು ಎಂದಿಗೂ ತನ್ನ ಮಗಳ ಇಷ್ಟಕ್ಕೆ ವಿಪರೀತವಾಗಿ ವರ್ತಿಸಲಾರನು.”

“ನೀನು ಒಂದು ವೇಳೆ ನಿನ್ನ ತಂದೆಯೇ ರಾಜನೆಂಬುದಾಗಿ ಭಾವಿಸಿರ ಬಹುದು; ಆದರೆ ಅವನು ನಾಮಮಾತ್ರಕ್ಕೆ ಅರಸನಾಗಿರುವನು. ನಮ್ಮ ಇಷ್ಟಕ್ಕೆ ವಿಪರೀತವಾಗಿ ಅವನು ವರ್ತಿಸಿದರೆ, ಅವನ ಅರಸುತನವು ಉಳಿಯ ಲಾರದು. ಆದುದರಿಂದ ನೀನು ನನ್ನನ್ನು ಸ್ವಮನಸ್ಸಿನಿಂದ ಸ್ವೀಕರಿ ಸಿದರೆ ಮಾತ್ರ ದುಃಖಕ್ಕೆ ಅವಕಾಶವಿಲ್ಲ; ಹಾಗಲ್ಲದಿದ್ದರೆ ನಿನಗೆ ಅದೆಷ್ಟು ವಿಷಾದದಾಯಕವಾಗಿದ್ದರೂ ನಾನು ನನ್ನ ಹಂಬಲವನ್ನು ಸಾಧಿಸಿಕೊಳ್ಳುವೆ ನೆಂಬುದನ್ನು ನೀನು ತಿಳಿದುಕೋ!”

“ಮದನ, ನೀನೂ ನಿನ್ನ ತಂದೆಯೂ ಅಪ್ಪನನ್ನು ಸೆರೆಯಾಳಿನಂತೆ ಮಾಡಿರುವಿರೆಂಬುದನ್ನು ನಾನು ಬಲ್ಲೆನು. ಶಾಸನಚಕ್ರದ ಚಲನೆಯು ಅಮಾತ್ಯರ ಇಷ್ಟಕ್ಕನುಸಾರವಾಗಿ ಸುತ್ತುತ್ತಿರುವುದೆಂಬದನ್ನು ಅರಿತಿರುವೆನು; ಆದರೆ ಈ ಚಂಪೆಯು ನಿಮ್ಮ ತಂತ್ರಗಳಿಗೂ ಭಯ-ಭೀತಿಗಳಿಗೂ ತನ್ನ ಶಿರ ವನ್ನು ಬಾಗಿಸಲಾರಳು.”

ಮಂತ್ರೀಕುಮಾರನು ಮರುಮಾತಾಡಲಿಲ್ಲ; ನಾಲ್ಕು ನಿಮಿಷಗಳ ವರೆಗೆ ಮೌನವನ್ನವಲಂಬಿಸಿ ನಿಂತಿದ್ದು, ಅನಂತರ “ರಾಜನಂದಿನಿ, ಯಾರ ಛಲವು ವಿಜಯಪ್ರದವಾಗುವುದೆಂಬುದನ್ನು ಈಕ್ಷಿಸೋಣ” ಎಂದು ಹೇಳಿ, ಉಪವನವನ್ನು ತ್ಯಜಿಸಿ ಹೊರಟು ಹೋದನು.

ರಾಜನಂದಿನಿಯು ವದನಮಂಡಲವು ಚಿಂತಾಮಗ್ನವಾಯಿತು; ಊರನ್ನು ಆಳುವ ದೊರೆಯ ಮಗಳು ತನ್ನ ಎದೆಯಲ್ಲಿ ತುಂಬಿ ತುಳುಕು ತ್ತಿರುವ ವ್ಯಸನತರಂಗಗಳನ್ನು ಬಾಷ್ಪಗಳ ಮೂಲಕ ಹೊರಸೂಸಿದಳು. ಉಪವನದಲ್ಲಿ ರಾಜಿಸುತ್ತಿರುವ ಸುಂದರವಾದ ಹೂಗಳು ಅವಳ ಮನಸ್ಸಿಗೆ ಶಾಂತಿಯನ್ನು ನೀಡಲಿಲ್ಲ. ಕೊಳಗಳಲ್ಲಿ ಚಲಿಸುತ್ತಿರುವ ಹಂಸಗಳು ಅವಳ ಎದೆಗೆ ತಂಪನ್ನು ನೀಡಲಿಲ್ಲ.

ಮಂತ್ರಿನಂದನನ ಪ್ರೇಮ ಭಿಕ್ಷೆ-ಅಲ್ಲ ಪ್ರೇಮದ ಧಿಃಕಾರ-ಅವಳನ್ನು ಚಿಂತಾಸಾಗರದಲ್ಲಿ ತಳ್ಳಿತು. ಅವನ ಮಾತುಗಳೆಂಬ ಮುಳ್ಳುಗಳು ಆ ಹಕ್ಕಿಯ ಎದೆಯಲ್ಲಿ ಗಾಯವನ್ನುಂಟು ಮಾಡಿದುವು. ಅವಳು ಎಷ್ಟು ಸಮ ಯದ ವರೆಗೆ ಈ ರೀತಿ ದುಃಖತಲ್ಲೀನಳಾಗಿದ್ದಳೋ ಎಂಬುದನ್ನು ಹೇಳಲು ಬರುವಂತಿಲ್ಲ. ಅವಳು ಒಂದು ಶಿಲಾಸನದ ಮೇಲೆ ಕುಳಿತು ದುಃಖದಿಂದ ಶಿರವನ್ನು ಬಾಗಿಸಿದಳು.

---

## ದುಷ್ಟಬುದ್ಧಿ.

ಕುಂತಳ ದೇಶದ ಅರಸನಿಗೆ ಗಂಡುಮಕ್ಕಳಿರಲಿಲ್ಲ; ಚಂಪಕಮಾಲಿನಿಯೇ ಅವನ ಏಕಮಾತ್ರ ಸಂತಾನವು. ಕುಂತಳೇಂದ್ರನಿಗೆ ತನ್ನ ಕಾಲಾನಂತರ ಸಿಂಹಾಸನದಲ್ಲಿ ಮಂಡಿಸಲು ಪುತ್ರರಿಲ್ಲದುದರಿಂದ ಅನಲ್ಪವಾದ ಶೋಕವು ಅವನ ಎದೆಯಲ್ಲಿ ಹರಿದಾಡುತ್ತಿತ್ತು. ಯೌವನಭರಿತಳಾದ ಚಂಪಕಮಾಲಿನಿಗೆ ಅನುರೂಪನಾದ ವರನನ್ನು ಹುಡುಕಿ, ಅವಳು ದಾಂಪತ್ಯ ಜೀವನವನ್ನು ಕೈಕೊಳ್ಳುವಂತೆ ಮಾಡಬೇಕೆಂಬಚಿಂತೆಯು ರಾಜನ ಮೆದುಳನ್ನು ತಿನ್ನುತ್ತಲಿದ್ದಿತು. ಸಿಂಹಾಸನದಲ್ಲಿ ಮಂಡಿಸಿ ವಿರಾಜಿಸುತ್ತಿರುವ ಅರಸನ ಹೃದಯವನ್ನು ಸಹ ಆ ಚಿಂತೆಯು ಯಾವ ಭಯವೂ ಇಲ್ಲದೆ ಪೀಡಿಸುತ್ತಲಿದ್ದಿತು.

ರಾಜಕಾರಣದಲ್ಲಿ ಅರಸನ ಕೈವಾಡಕ್ಕಿಂತಲೂ ಮಂತ್ರಿಯಾದ ದುಷ್ಟಬುದ್ಧಿಯ ಕೌಶಲ್ಯವೇ ಹೆಚ್ಚಿಗೆ ಪ್ರಕಾಶಿಸುತ್ತಲಿದ್ದಿತು. ಇದಕ್ಕೆ ಕಾರಣಗಳು ಅರಸನ ವಾರ್ಧಕ್ಯ, ಶಾರೀರಿಕ ಅಸೌಖ್ಯ ಮತ್ತು ಮನಸ್ಸನ್ನು ಪೀಡಿಸುತ್ತಿರುವ ಚಿಂತೆಗಳಾಗಿದ್ದುವು. ಅರಸನು ತನ್ನನ್ನು ಆವರಿಸಿರುವ ಚಿಂತೆಯ ಪಾಶಗಳಿಂದ ವಿಮುಕ್ತನಾಗುವದಕ್ಕಾಗಿ ಆಧ್ಯಾತ್ಮಿಕ ಜ್ಞಾನಾರ್ಜನೆಯಲ್ಲಿ ತನ್ನ ಹೆಚ್ಚಿನ ಸಮಯವನ್ನು ವಿನಿಯೋಗಿಸುತ್ತಲಿದ್ದನು. ಅವನ ಹೃದಯದಲ್ಲಿ ಲೋಕದ ಬಾಳು ಶೋಕಪರಿಪೂರ್ಣವಾದುದೆಂದೂ, ಅದರಿಂದ ಆತ್ಮಸಂತೃಪ್ತಿಯನ್ನು ಪಡೆಯುವದು ಅಸಾಧ್ಯವೆಂದೂ ಮುಂತಾದ ವಿಚಾರತರಂಗಗಳು ಉದಯವನ್ನು ಹೊಂದಲಾರಂಭಿಸಿದವು. ರಾಜ್ಯಕಾರ್ಯಗಳಲ್ಲಿ ಹೆಚ್ಚಿನ ಶ್ರಮವನ್ನು ವಹಿಸದೆ, ಅವುಗಳನ್ನು ಅಮಾತ್ಯನಾದ ದುಷ್ಟಬುದ್ಧಿಗೆ ವಹಿಸಿದ ನಂತರ, ಅರಸನು ಅರಮನೆಯಲ್ಲಿ ಕುಳಿತು ಈಶ್ವರಚಿಂತನೆಯಲ್ಲಿ ತನ್ನ ಸಮಯವನ್ನು ವ್ಯಯಗೊಳಿಸಲಾರಂಭಿಸಿದನು.

ಈ ಆಧ್ಯಾತ್ಮಿಕ ಚಿಂತನೆಗಳು ಅತ್ಯುತ್ತಮವಾದವುಗಳೆಂಬುದು ನಿಜ; ಆದರೆ ಈ ವಿಧದ ಜೀವನವು ಅರಸನಿಗೆ ಹೇಳಿದುದಾಗಿರಲಿಲ್ಲ. ಅದು ತನ್ನ ಶಿರದ ಮೇಲಿರುವ ಕರ್ತವ್ಯಗಳಿಂದ ವಿಮುಖವಾಗಲಿರುವ ಒಂದು ದಾರಿಯು ಮಾತ್ರವಾಗಿದ್ದಿತು. ಈ ಅರಸನ ಈ ವರ್ತನದ ಫಲವಾಗಿ ಅವನು ಮಾತ್ರವಲ್ಲದೆ, ಕುಂತಳದ ನಗರವಾಸಿಗಳೂ ಸಹ ಸೀಮಾತೀತವಾದ ಸಂಕಟಗಳನ್ನು ಅನುಭವಿಸಬೇಕಾಗಿ ಬಂದಿತು.

ದುಷ್ಟಬುದ್ಧಿ-ಇದು ಅವನ ಗುಣಗಳ ಮೂಲಕ ಸಿದ್ಧಿಸಿದ ಹೆಸರೋ ಅಥವಾ ಜನ್ಮನಾಮವೋ ಎಂಬುದನ್ನು ನಾನರಿಯೆನು. ಆ ವಿಷಯವನ್ನು

ಕುರಿತು ಹೆಚ್ಚಿನ ಸಂಶೋಧನೆಗಳನ್ನು ನಡೆಯಿಸಿ ನನ್ನ ವೇಳೆಯನ್ನು ದುರುಪಯೋಗಪಡಿಸಲು ನಾನು ಆಗ್ರಹಿಸುತ್ತಿರುವದಿಲ್ಲ. ನಾನೂ ಅವನನ್ನು ಈ ಕತೆಯಲ್ಲಿ ದುಷ್ಟಬುದ್ಧಿ ಎಂದು ಸಂಬೋಧಿಸುವೆನು. ಈ ದುಷ್ಟಬುದ್ಧಿಯು ಕುಂತಳದೇಶದ ಪ್ರಧಾನ ಅಮಾತ್ಯನಾಗಿದ್ದನು. ಅವನು ತಾನು ಸ್ವಯಂ ಅಧಿಕಾರಪ್ರತಾಪಸಂಪನ್ನನಾಗಬೇಕೆಂಬ ಅತಿಕಾಂಕ್ಷೆಯ ಮನುಷ್ಯನಾಗಿದ್ದನು. ಈ ಅತಿಕಾಂಕ್ಷೆಯಲ್ಲದೆ ಹೆಚ್ಚಿನ ದುರ್ಗುಣಗಳು ಯಾವವೂ ಅವನಲ್ಲಿರಲಿಲ್ಲ. ರಾಜ್ಯಶಾಸನ ಮೀಮಾಂಸೆಯಲ್ಲಿ ಅವನಷ್ಟು ಚತುರನಾದ ಬೇರೊಬ್ಬ ಅಮಾತ್ಯನು ಆ ಕಾಲದಲ್ಲಿ ಭಾರತವರ್ಷದಲ್ಲಿರಲಿಲ್ಲ. ಅವನ ಭೇದೋಪಾಯಕ್ಕೆ ಕುಂತಳ ಸಾಮ್ರಾಜ್ಯದ ಶತ್ರುಗಳು ಶಿರಗಳನ್ನು ಬಾಗಿಸಿದ್ದರು. ಸಾಮಂತ ಅರಸರನ್ನು ಸಾಮ-ದಾನಗಳಿಂದ ವಶಪಡಿಸಿಕೊಂಡು, ದುಷ್ಟಬುದ್ಧಿಯು ರಾಜ್ಯದಲ್ಲಿ ಬಂಡಾಯಗಳಿಗೆ ಅವಕಾಶವಿಲ್ಲದಂತೆ ನೋಡಿಕೊಳ್ಳುತ್ತಿದ್ದನು. ಅವನ ತಂತ್ರಗಳು ಎಷ್ಟು ಕೌಶಲ್ಯಪೂರ್ಣವಾದವುಗಳು ಎಂಬುದನ್ನು ಅರಿತವರೇ ಬಲ್ಲರು.

ಎಲ್ಲ ರತ್ನಗಳ ಶೋಭೆಯನ್ನು ಒಂದು ಚಿಕ್ಕ ಕಪ್ಪು ಕಲೆಯು ನುಂಗಿತು; ಎಂಬ ಗಾದೆಯಿದೆ. ಅದರಂತೆ ಈ ಅಮಾತ್ಯವರ್ಯನ ಶ್ರೇಷ್ಠ ಗುಣಗಳಿಗೆ ಅವನ ಅತಿಕಾಂಕ್ಷೆ, ಪ್ರತಾಪ-ಅಧಿಕಾರಗಳಿಗಿರುವ ಅವನ ಹಂಬಲ ಇವುಗಳು ದೊಡ್ಡ ಕಲಂಕಗಳಾಗಿ ಪರಿಣಮಿಸಿದುವು. ಈ ವ್ಯಾಮೋಹವು ಅವನನ್ನು ಮಾಡಬಾರದ ಕೆಲಸಗಳನ್ನು ಮಾಡಲು ಪ್ರೇರೇಪಿಸಿತು; ಸಿಂಹಾಸನಕ್ಕೆ ಎರಡನ್ನು ಬಗೆಯುವ ದ್ರೋಹಚಿಂತನೆಯು ಅವನ ಎದೆಯಲ್ಲಿ ಜನಿಸುವಂತೆ ಈ ಅತಿಕಾಂಕ್ಷೆಯ ಹೆಂಡವು ಅವನನ್ನು ಉನ್ಮತ್ತನನ್ನಾಗಿ ಮಾಡಿತು.

ಕುಂತಳ ಸಾಮ್ರಾಜ್ಯದ ಸಿಂಹಾಸನದ ಮೇಲೆ ದುಷ್ಟಬುದ್ಧಿಯು ತನ್ನ ದೃಷ್ಟಿಗಳನ್ನಿಟ್ಟಿದ್ದನು; ಚಾಣಾಕ್ಷನಾದ ಅವನ ತೀಕ್ಷ್ಣಮತಿಯು ಆ ಕಾರ್ಯಸಾಧನೆಗಿರುವ ಮಾರ್ಗಗಳನ್ನು ಕಂಡುಹಿಡಿದಿದ್ದಿತು. ಅರಸುಮಗಳು ಚಂಪೆಯು ತನ್ನ ಮಗನನ್ನು ವರಿಸುವಂತೆ ಮಾಡಿ, ತನ್ನ ಪುತ್ರನನ್ನು ಸಿಂಹಾಸನದಲ್ಲಿ ಮಂಡಿಸುವ ಹಾಗೆ ಮಾಡಬೇಕೆಂಬುದು ಅವನ ವಿಚಾರವಾಗಿದ್ದಿತು. ಆ ಕಾರ್ಯಸಾಧನೆಗೆ ಯಾವ ಬೆಲೆ ನೀಡಲೂ ಅವನು ಸನ್ನದ್ಧನಾಗಿದ್ದನು. ಪೌರಪ್ರಧಾನಿಗಳಲ್ಲಿ ಮಿಕ್ಕವರೆಲ್ಲರೂ ದುಷ್ಟಬುದ್ಧಿಯ ಈ ಹಂಬಲವನ್ನು ಅರಿತಿದ್ದರು. ಇದಲ್ಲದೆ ಪ್ರಜೆಗಳಲ್ಲಿಯೂ ಪೌರಪ್ರಧಾನಿಗಳಲ್ಲಿಯೂ ಅರಸನ ಪ್ರಕಾಶಕ್ಕಿಂತ ದುಷ್ಟಬುದ್ಧಿಯ ವರ್ಚಸ್ಸು ಅಧಿಕವಾಗಿ ಬೇರೂರಿದ್ದಿತು. ತನ್ನ ಪ್ರಭೆಯು ಪ್ರಜಾಗಣಗಳಲ್ಲಿ ಬೇರೂರುವಂತೆ ಅಮಾತ್ಯನು

ಹೆಚ್ಚು ಲಕ್ಷ್ಯವನ್ನು ಇಡುತ್ತಲಿದ್ದನು; ಪ್ರಜಾನುರಾಗವನ್ನು ಸಂಪಾದಿಸಲು ದುಷ್ಟಬುದ್ಧಿಯು ತನ್ನ ಶ್ರದ್ಧೆಯನ್ನು ಪತಿಸುತ್ತಿದ್ದನು.

ಸಾಮಾನ್ಯ ಪ್ರಜೆಗಳಲ್ಲಿ ದುಷ್ಟಬುದ್ಧಿಯ ವರ್ಚಸ್ಸು ಸದಾ ಶೀವಾ ಶೀತವಾಗಿದ್ದಿತು ಅವನು ಅವರ ಮಧ್ಯದಲ್ಲಿ ಬೆರೆತು ಅವರ ಸುಖ-ದುಃಖ ಗಳಲ್ಲಿ ಭಾಗವನ್ನು ವಹಿಸುತ್ತಲಿದ್ದನು ಅವರ ಸಂಕಟ ಪರಿಹಾರಕ್ಕಾಗಿ ಅಮಾತ್ಯನು ಬೇಕಾದ ಯೋಜನೆಗಳನ್ನು ರಚಿಸಿ, ಅವರ ದುರಿತಗಳನ್ನು ಪರಿಹರಿಸುತ್ತಲಿದ್ದನು ಅವನು ಪ್ರಜೆಗಳಿಗೆ ಇಂದ್ರತುಲ್ಯವಾಗಿ ತೋರತೊಡ ಗಿದನು. ಅವರ ಮಧ್ಯದಲ್ಲಿ ತನ್ನ ಅಧಿಕಾರ ಹಾಗೂ ಪ್ರತಾಪಗಳನ್ನು ಪ್ರದರ್ಶಿಸದೆ, ಕೇವಲ ಸಾಮಾನ್ಯನಂತೆ ನಟಿಸಿ ಅವನು ತನ್ನ ಮುಗುಳ್ನಗೆ ಯಿಂದ ಅವರ ಹೃದಯಗಳನ್ನು ಕದಿಯುತ್ತಲಿದ್ದನು. ಅವನ ಈ ಗುಣಗಳ, ಈ ವರ್ತನೆಗಳ ಅಡಿಯಲ್ಲಿ ಒಂದು ದುರುದ್ದೇಶವು ನಿಂತಿರುವುದನ್ನು ಪ್ರಜಾ ವರ್ಗದಲ್ಲಿಯ ಅತ್ಯಂತ ಮೇಧಾವಿಗಳಲ್ಲದೆ, ಇನ್ನಾರೂ ಅದನ್ನು ತಿಳಿದು ಕೊಳ್ಳಲಿಲ್ಲ.

ದುಷ್ಟಬುದ್ಧಿಯ ಶಾಸನತಂತ್ರವಾದರೂ ಅದ್ವಿತೀಯವಾದುದೇ ಸರಿ; ಸಮ್ರಾಜ್ಯದ ಪ್ರತಿಯೊಂದು ಭಾಗದಲ್ಲಿಯೂ ಅವನ ಅಧಿಕಾರವು ತಾಂಡವ ವಾಡುತ್ತಲಿದ್ದಿತು. ಎಲ್ಲ ಉದ್ಯಮಗಳ ಹಿಂದೆ ಅವನ ಬೆರಳುಗಳು ಇದ್ದೇ ಇರುತ್ತಿದ್ದುವು. ಕುಂತಳ ನಗರದಲ್ಲಿ ಒಂದು ಚಿಕ್ಕ ಸದನದಲ್ಲಿ ವಾಸಿಸುತ್ತಾ, ಅವನು ತನ್ನ ಹೇಳಿಕೆಯಂತೆ ದೇಶದ ಶಾಸನಶಕಟವು ಚಲಿಸುವಂತೆ ಮಾಡುತ್ತಲಿದ್ದನು. ಇದಲ್ಲದೆ ದುಷ್ಟ ಬುದ್ಧಿಯು ತನ್ನ ಬಳಿಯಲ್ಲಿ ಅತ್ಯಂತ ಕುಶಾಗ್ರಬುದ್ಧಿ ಸಂಪನ್ನರಾದ ಚಾರರನ್ನು ಇಟ್ಟುಕೊಂಡಿದ್ದನು. ದೇಶದ ಪ್ರತಿ ಯೊಂದು ಮೂಲೆಯಲ್ಲಿ ಸಂಭವಿಸುತ್ತಿರುವ ಕಾರ್ಯಕಲಾಪಗಳು ಆ ಚಾರರ ಮೂಲಕ ಅಮಾತ್ಯನ ಕಿವಿಗಳಿಗೆ ಬೀಳುತ್ತಲಿದ್ದವು ನೆರೆಹೊರೆಯ ಅರಸರ ಉದ್ಯಮಗಳೂ, ಅವರ ರಾಜ್ಯತಂತ್ರಗಳೂ ಯಾವ ಪ್ರಯಾಸವೂ ಇಲ್ಲದೆ ಬಂದು ದುಷ್ಟಬುದ್ಧಿಯ ಕಿವಿಗಳಲ್ಲಿ ಪತಿಸುತ್ತಿದ್ದವು. ದೇಶದಲ್ಲಿ ತನ್ನ ವಿದ್ವೇಷಿಗಳು ಯಾರೆಂಬುದನ್ನೂ, ತನ್ನ ಬೆಂಬಲಕ್ಕಿರುವವರಾರೆಂಬುದನ್ನೂ ಅವನು ಅರಿತಿದ್ದನು. ತನ್ನ ವಿದ್ವೇಷಿಗಳನ್ನು ಸಾಮದಾನಗಳಿಂದ ವಶಪಡಿಸಿ ಕೊಳ್ಳಲು ಪ್ರಯತ್ನಿಸುತ್ತಿದ್ದನು. ಅದು ಅಸಾಧ್ಯವೆಂದು ತೋರಿದರೆ ಕೊನೆಯ ದಾದ ದಂಡೋಪಾಯದಿಂದ ಅವರನ್ನು ನಿಗ್ರಹಿಸಿ, ಅವನು ತನ್ನ ದಾರಿಯಲ್ಲಿ ರುವ ಮುಳ್ಳುಗಳನ್ನು ನಾಶಪಡಿಸುತ್ತಿದ್ದನು. ತನಗೆ ಆಗದಿದ್ದವರನ್ನು ನಿರ್ಮೂಲ ಮಾಡಬೇಕಾಗಿ ಬಂದ ಸಂದರ್ಭಗಳಲ್ಲಿ ಅವುಗಳ ಕಾರ್ಯಕರ್ತನು

ತಾನೆಂಬುದನ್ನು ತೋರಿಸಿಕೊಳ್ಳದೆ, ಬಾಹ್ಯದಲ್ಲಿ ತನಗೂ ಅವುಗಳಿಗೂ ಯಾವ ಬಂಧನವೂ ಇಲ್ಲದಂತೆ ನಟಿಸಿ, ಅವನು ದೂರ ನಿಲ್ಲುತ್ತಿದ್ದನು.

ಈ ಅಮಾತ್ಯವರ್ಯನನ್ನು ಕುರಿತು ಆ ಕಾಲದಲ್ಲಿ ಒಂದು ಕತೆಯು ಬರೆದಿತ್ತು; ಅದೇನೆಂಬುದನ್ನು ನಾನಿಲ್ಲಿ ಸಂಕ್ಷಿಪ್ತವಾಗಿ ಹೇಳಿಬಿಡುವೆನು. ಒಂದು ದಿನ ಅಮಾತ್ಯನ ಗೃಹದಲ್ಲಿ ಒಂದು ಔತನವು ಅತ್ಯಂತ ವಿಜೃಂಭಣೆಯಿಂದ ನಡೆಯಿತು. ನೂರಾರು ಮಂದಿ ಏಕೆ, ಸಹಸ್ರಾರು ಮಂದಿ ಬ್ರಾಹ್ಮಣರು ಅಮಾತ್ಯಗೃಹದಲ್ಲಿ ಆ ದಿನ ನೆರೆದರು. ಇವರೆಲ್ಲರೂ ಭೋಜನವನ್ನು ತೀರಿಸಿಕೊಂಡು, ಮಂತ್ರಿವರ್ಯನ ಸದನದ ಕಟ್ಟದಲ್ಲಿ ಕುಳಿತುಕೊಂಡು, ವಿಶ್ರಾಮವನ್ನು ಹೊಂದಿ ವಿನೋದದ ಮಾತುಗಳನ್ನು ಆಡುತ್ತಲಿದ್ದರು. ಈ ವೇಳೆಯಲ್ಲಿ ಕೆಲವು ಮಂದಿ ಬಾಲಕರು ಅಮಾತ್ಯಗೃಹದ ಮುಂದೆ ಒಂದು ಮೈದಾನದಲ್ಲಿ ಆಡುವುದರಲ್ಲಿ ನಿರತರಾಗಿದ್ದರು. ಈ ಆಟಗಳಲ್ಲಿ ಸಾಧಾರಣವಾಗಿ ಅವರ ಪೈಕಿ ಅತ್ಯಂತ ತೇಜಸ್ವಿಯಾದ ಬಾಲಕನೊಬ್ಬನು ವಿಜಯವನ್ನು ಹೊಂದುತ್ತಲಿದ್ದನು. ಮಂತ್ರಿಸದನದಲ್ಲಿ ನೆರೆದಿರುವ ಬ್ರಾಹ್ಮಣ ಸಮೂಹದ ಪರಿವೆಯೇ ಇಲ್ಲದೆ, ಇತರ ಬಾಲಕರನ್ನು ಈ ಹುಡುಗನು ಪುನಃ ಆಡುವುದಕ್ಕಾಗಿ ಕರೆಯುತ್ತಲಿದ್ದನು. ಈ ಬಾಲಕನನ್ನೂ ಹುಡುಗರ ಆಟಗಳನ್ನೂ ಸಚೀವನಿಕೇತನದಲ್ಲಿ ನೆರೆದಿದ್ದ ಜನರ ಪೈಕಿ ಒಬ್ಬನು ಅತ್ಯಾಸಕ್ತಿಯಿಂದ ಈಕ್ಷಿಸುತ್ತಿದ್ದನು. ಈ ಭೂಸುರನು ಆ ಬಾಲಕನಲ್ಲಿ ಏನು ವಿಶೇಷತೆಯನ್ನು ಕಂಡನೆಂಬುದನ್ನು ತಿಳಿಯುವದಕ್ಕೆ ಕುತೂಹಲಭರಿತನಾಗಿ ದುಷ್ಟಬುದ್ಧಿಯು ಆ ವಿಪ್ರನ ಸಮೀಪಕ್ಕೆ ಬಂದು, ವಿನಯಪೂರ್ವಕವಾಗಿ "ಏನು ಮಹಾಸ್ವಾಮಿ, ತಾವು ಇಷ್ಟು ಕುತೂಹಲಭರಿತರಾಗಿ ನೋಡುತ್ತಿರುವದೇನು?" ಎಂದು ಪ್ರಶ್ನಿಸಿದನು.

'ಅಮಾತ್ಯರೇ, ಆ ಬಾಲಕನು ಯಾರು?' ಎಂದು ಆಡುತ್ತಿರುವ ಆ ಬಾಲಕನ ಕಡೆಗೆ ಬೆರಳು ತೋರಿಸಿ, ವಿಪ್ರವರ್ಯನು ಅಮಾತ್ಯನನ್ನು ಪ್ರಶ್ನಿಸಿದನು.

"ಅವನೊಬ್ಬ ಅನಾಥ ಬಾಲಕನು; ತಂದೆ-ತಾಯಿಗಳಿಲ್ಲ. ಭಿಕ್ಷಾಟನೆಯಿಂದ ಉಪಜೀವನವನ್ನು ನಡೆಯಿಸುತ್ತಿರುವನು."

"ಸಚಿವರೆ! ಅವನ ಮುಖದ ಮೇಲೆ ಅವನೊಬ್ಬ ಮಹಾತ್ಮ ಹಾಗು ಪ್ರತಾಪಶಾಲಿಯಾಗಿ ಬಾಳಲಿರುವ ಲಕ್ಷಣಗಳಿವೆ."

"ಅದು ಹೇಗೆ? ಅವನೊಬ್ಬ ತಿರುಪೆಯ ಹುಡುಗನು!"

"ಸಚಿವವರ್ಯರೇ, ಅವನೊಬ್ಬ ತಿರುಪೆಯವನೇ? ಅರಸುತನವನ್ನು ಅನುಭವಿಸುವ ಲಕ್ಷಣಗಳನ್ನು ಅವನ ಅಂಗೋಪಾಂಗಗಳು ಸೂಚಿಸುತ್ತ

ಲಿರುವನು. ರಾಜ್ಯವನ್ನಾಳುವ ಭಾಗ್ಯವು ಅವನ ಲಲಾಟದಲ್ಲಿ ಹೊಳೆಯುತ್ತಿರುವುದು. ಸಾಮುದ್ರಿಕಾ ಶಾಸ್ತ್ರವು ಎಂದಿಗೂ ಸುಳ್ಳಾಗಲಾರದು'' ಎಂದು ವಿಪ್ರೋತ್ತಮನು ನುಡಿದನು

“ವಿಧಿಯ ಲೀಲಾವಿಲಾಸದ ಮಹಿಮೆಯನ್ನು ಅರಿತವರಾರು?” ಎಂದು ನುಡಿದು, ದುಷ್ಟಬುದ್ಧಿಯು ಒಂದು ನಗುವನ್ನು ಹೊರಚೆಲ್ಲಿದನು. ಆ ನಗುವಿನ ಹಿಂಬದಿಯಲ್ಲಿ ಚಿಂತನೆಯ ಕೆಂಬಣ್ಣವು ಮಿನುಗುತ್ತಿತ್ತು

ಮಂತ್ರಿವರ್ಯನೊಡನೆ ಆ ಸಾಮುದ್ರಿಕಾ ಶಾಸ್ತ್ರಜ್ಞನು ಈ ನುಡಿಗಳನ್ನು ಆಡಿದ ಮರುದಿನವೇ ಕುಂತಳ ನಗರದಲ್ಲಿ ಆ ಬಾಲಕನು ಕಾಣಲಿಲ್ಲವಂತೆ ಕೆಲವರು ಈ ಬಾಲಕನನ್ನು ಅಮಾತ್ಯನೇ ವಧಿಸಿದನೆಂದು ಹಲವು ದಿನಗಳವರೆಗೆ ಆಡಿಕೊಳ್ಳುತ್ತಿದ್ದರಂತೆ

ಇದಾಗಿತ್ತು ಆ ಹಳೆಯ ಕತೆಯು; ಇದೆಷ್ಟು ವಾಸ್ತವವೆಂಬುದನ್ನು ನಾನು ಹೇಳಲಾರೆ. ಒಂದು ವೇಳೆ ಸಾಮುದ್ರಿಕಾ ಶಾಸ್ತ್ರದಲ್ಲಿ ನಂಬಿಗೆಯನ್ನಿಟ್ಟಿದ್ದ ದುಷ್ಟಬುದ್ಧಿಯು ತನ್ನ ಅತಿಕಾಂಕ್ಷೆಯೆಂಬ ತಿಮಿರರಾಶಿಯಿಂದಾವೃತನಾಗಿ ಶಿಶುಹತ್ಯೆಯ ಕೃತ್ಯವನ್ನು ಎಸಗಿರಬಹುದು; ಅಥವಾ ಅವನ ಶತ್ರುಗಳು ಜನಮಧ್ಯದಲ್ಲಿ ಹರಡಿರುವ ವರ್ಚಸ್ಸನ್ನು ಹಾಳು ಮಾಡುವುದಕ್ಕಾಗಿ ಹೊರಡಿಸಿದ ವೃಥಾ ಆರೋಪವೂ ಆದಾಗಿರಬಹುದು.

ತನ್ನನ್ನು ಕುರಿತು ಜನರಾಡಿಕೊಳ್ಳುವ ಮಾತುಗಳು ಸಚಿವನ ಕರ್ಣಗಳಲ್ಲಿ ಪತಿಸದೇ ಇರಲಿಲ್ಲ ಅವನ ಆಪ್ತೇಷ್ಟರು ಜನರಾಡಿಕೊಳ್ಳುವ ಈ ದುರ್ವಾರ್ತೆಯನ್ನು ಕುರಿತು ಅವನೊಡನೆ ನುಡಿದರು.

“ನನ್ನನ್ನು ನಿಂದಿಸುವುದರಿಂದ ಜನರು ಸಂತೋಷವನ್ನು ಪಡುವುದಾದರೆ ಅವರು ಸಂತೋಷಿಸಲಿ! ನಾನು ಅವರ ಹರ್ಷವನ್ನೇಕೆ ಹಾಳು ಮಾಡಬೇಕು? ಆದರೆ ಸಿಂಹಾಸನದಲ್ಲಿ ನನಗೆ ಆಗ್ರಹವಿದ್ದರೆ ಇದಕ್ಕಿಂತ ಮುಂಚೆಯೇ ಯಾವ ಪ್ರಯಾಸವೂ ಇಲ್ಲದೆ ಆ ಆಗ್ರಹವನ್ನು ನಾನು ಸಾಧಿಸುತ್ತಿದ್ದೆನು. ನಾನು ಪ್ರಯತ್ನಿಸುತ್ತಿರುವುದು ಮಹಾರಾಜರ ಹಾಗೂ ಪ್ರಜೆಗಳ ಹಿತವನ್ನು ಕುರಿತಾಗಿದೆ! ಸಿಂಹಾಸನದ ಆಗ್ರಹಕ್ಕಾಗಿ ನನ್ನ ಕೈ-ಗಳನ್ನು ಶಿಶುವಧೆಯ ನೆತ್ತರಿನಿಂದ ಕಲಂಕಪಡಿಸಿಕೊಳ್ಳಲಾರೆನು.” ಎಂದು ದುಷ್ಟಬುದ್ಧಿಯು ನಗುತ್ತ ಹೇಳಿಬಿಡುತ್ತಿದ್ದನು ಅವನ ಈ ಸರಳವಾದ ಮಾತುಗಳು ಜನರಲ್ಲಿ ಹೆಚ್ಚಿನ ಪರಿಣಾಮವನ್ನುಂಟುಮಾಡಿದುವು ದುಷ್ಟಬುದ್ಧಿಯ ವರ್ಚಸ್ಸು ಎಂದಿನಂತೆ ಪ್ರಜಾಗಣಗಳ ಮಧ್ಯದಲ್ಲಿ ಬೆಳೆಯು ತೊಡಗಿತು

ಈ ಅಮಾತ್ಯನಿಗೆ ಇಬ್ಬರು ಮಕ್ಕಳಿದ್ದರು; ಮದನಕುಮಾರನೆಂಬ ಪುತ್ರನೂ ವಿಷಯಾಕುಮಾರಿಯೆಂಬ ಪುತ್ರಿಯೂ ಅವನ ವಂಶವನ್ನು ಅಭಿವೃದ್ಧಿ ಪಡಿಸಲಿರುವ ಹೂಗಳಾಗಿದ್ದರು.

## ಚಂಪೆಗೆ ಬಂದ ವಿಪತ್ತು.

ಮದನನು ಭೀಷಣಪೂರ್ವಕವಾದ ಧಿಕ್ಕಾರದ ನುಡಿಗಳನ್ನು ನುಡಿದ ನಂತರ ಎರಡು-ಮೂರು ದಿನಗಳು ಕಳೆದವು. ಒಂದು ದಿನ ಸಂಧ್ಯಾವೇಳೆಯಲ್ಲಿ ಚಂಪಕಮಾಲಿನಿಯು ತನ್ನ ಉಪವನದಲ್ಲಿ ವಿಹರಿಸುತ್ತಿದ್ದಳು; ಅವಳ ಸೌಂದರ್ಯವನ್ನು ಕವೀಶ್ವರನಾದ ಲಕ್ಷ್ಮೀಶನು ತನ್ನ ಜೈಮಿನಿ ಭಾರತದಲ್ಲಿ ಬಣ್ಣಿಸಿರುವನು. ಇಂಬಾಗಿ ನಗುತ್ತಿರುವ ಪೂರ್ಣಚಂದ್ರನ ಮುಖಮಂಡಲದಲ್ಲಿ ನಾವು ಕಲಂಕವನ್ನು ನೋಡಬಲ್ಲೆವು; ಆದರೆ ಚಂಪೆಯ ವದನಮಂಡಲವು ಕಲಂಕಶೂನ್ಯವಾದುದರಿಂದ ನಾನು ಅವಳ ವದನಾರವಿಂದವನ್ನು ಶಶಿಬಿಂಬಕ್ಕೆ ಹೋಲಿಸುವದು ಅನುಚಿತವಾಗಿದೆ. ಆ ನಗೆಮೊಗದಿಂದ ಹೊರಬೀಳುತ್ತಿರುವ ಕಿರಣಗಳು ಮಾನುಷ ಹೃದಯಕ್ಕೆ ಹರ್ಷರಸವನ್ನು ನೀಡಲು ಪರ್ಯಾಪ್ತವಾದವುಗಳಾಗಿರುತ್ತವೆ. ಸೌಂದರ್ಯವು ಮೂರ್ತಿಮತ್ತಾಗಿ ಆ ಹೆಣ್ಣಿನ ಶರೀರದಲ್ಲಿ ಬೆಳಗುತ್ತಿರುವದು. ಯೌವನದ ಸುಗ್ಗಿಯ ಕಾಲದಲ್ಲಿ ಆ ಹೂವು ಅರಳಿ ತನ್ನ ಇನಿಯನನ್ನು ಹುಡುಕುತ್ತಲಿರುವದರಿಂದ ಆ ಮೊಗವು ಚಿಂತಾಪ್ಲುತವಾಗಿರುವುದು. ಆ ಚಿಂತೆಯು ಅವಳ ವದನಕ್ಕೆ ಅದೊಂದು ಅಪೂರ್ವ ಬಣ್ಣವನ್ನು ಬಳಿಯುತ್ತಿರುವುದು.

ನೀವು ಚಂಪೆಯ ಸೌಂದರ್ಯರಾಶಿಯನ್ನು ನೋಡುವದರಲ್ಲಿ ಉತ್ಸಾಹಭರಿತರಾಗಿರಬಹುದು; ಆದರೆ ಸೌಂದರ್ಯವು ಸತ್ಯದ ರೂಪವನ್ನು ಹೊರಚೆಲ್ಲುವ ಮುತ್ತಾಗಿದೆ. ಹೂದೋಟದಲ್ಲಿ ಅರಳಿ ನಿಂತಿರುವ ಕಮಲಗಳನ್ನು ನೋಡಿ ಆನಂದಿಸುವಂತೆ ನೀವು ಕಾಮಿನಿಯರ ಸೌಂದರ್ಯವಾರಿಧಿಯನ್ನು ನಿಷ್ಕಲಂಕ ಹೃದಯರಾಗಿ ಅವಲೋಕಿಸಿರಿ; ಆದರೆ ಆ ಹೂಗಳನ್ನು ಕೀಳುವ ಹವ್ಯಾಸಕ್ಕೆ ಮಾತ್ರ ಬೀಳಬೇಡಿರಿ. ಅದು ನಮ್ಮಲ್ಲಿರುವ ಪೈಶಾಚಿಕತೆಯನ್ನು ಮಾತ್ರ ತೋರಿಸುವುದು. ಪ್ರಸಿದ್ಧ ತತ್ವಶಾಸ್ತ್ರಜ್ಞನಾದ ವಿವೇಕಾನಂದನು ಹೇಳಿದ ಹಾಗೆ "ಸೌಂದರ್ಯವನ್ನು ಕಂಡು ಆನಂದಿಸುವದಕ್ಕಾಗಿ ದೇವರು ನಮಗೆ ನೇತ್ರಗಳನ್ನು ದಯಪಾಲಿಸಿರುತ್ತಾನೆ" ನಿಷ್ಕಲಂಕ ಮನಸ್ಸಿನೊಡನೆ ಚೆಲುವನ್ನು ಕಂಡು ಆನಂದಿಸೋಣ; ಆದರೆ ಆ ನಮ್ಮ ಸೌಂದರ್ಯಸ್ವಾದವು ವಿಕಾರಶೂನ್ಯವಾಗಿರಲಿ!

ಚಂಪಕಮಾಲಿನಿಗೆ ೧೬-೧೭ ವರ್ಷ ಪ್ರಾಯವಿರಬಹುದು. ಅವಳು ನವಯೌವನವೆಂಬ ಹೂದೋಟದ ಬಾಗಿಲುಗಳನ್ನು ಒಳಹೊಗುತ್ತಿರುವಳು; ಕಿಶೋರಾವಸ್ಥೆಯನ್ನು ಪರಿತ್ಯಜಿಸಿ ನವತಾರುಣ್ಯದಲ್ಲಿ ಪಾದಾರ್ಪಣ ಮಾಡುತ್ತಿರುವಳು. ಬಾಲ್ಯಕಾಲದ ವಿನೋದಗಳು ಮಾಯವಾಗಿ, ಆ ಸ್ಥಾನವನ್ನು ಹೊಸ ಆಶೆ, ಹೊಸ ಹುರುಪು, ಹೊಸ ಬಾಳು ಇವುಗಳು ಆಶ್ರಯಿಸಲು ಪ್ರಾರಂಭಿಸಿರುವವು. ಬಾಳಿನಲ್ಲಿ ತುಂಬಿರುವ ನವಮಧುವನ್ನು ಆಸ್ವಾದಿಸಲು ಆ ಹೆಣ್ಣಿನ ಹೃದಯದೊಳಗಿಂದ ಒಂದು ಕಾತರತೆಯ ಸ್ವರವು ಹೊರಬೀಳಲಾರಂಭವಾಯಿತು. ತಾರುಣ್ಯವೆಂಬ ಮೋಹನಪ್ರಭಾತದಲ್ಲಿ ಈ ಬಗೆಯ ಮೋಹನಾಲಾಪ ಧ್ವನಿಯು ತುಂಬಿ ಹರಿಯತೊಡಗಿತು.

ಚಂಪಕಮಾಲಿನಿಯು ಮೊದಲೇ ಸೌಂದರ್ಯಶಾಲಿನಿಯು. ತಾರುಣ್ಯವು ಆ ರೂಪವಾರಿಧಿಗೆ ಹೊಸ ತೇಜಸ್ಸನ್ನು ನೀಡಿತು. ಕೋಮಲವಾದ ಆ ಶರೀರವು ತಾವರೆಯ ಬಳ್ಳಿಯಂತೆ ಮನೋಹರವಾದುದೇ ಸರಿ; ಆದರೆ ಈ ಹೂವಿನ ಗಂಧವನ್ನು ಆಘ್ರಾಣಿಸುವ ಭಾಗ್ಯಶಾಲಿಯು ಯಾರು?

ಚಿಂತೆಯು ಆ ಹೆಣ್ಣಿನೊಡಲನ್ನು ಸುಡುತ್ತಲಿತ್ತು; ಎದೆಯು ಭಾರವಾಗಿ ತೋರತೊಡಗಿತು. ಎರಡು ದಿನಗಳ ಹಿಂದೆ ಮಂತ್ರಿನಂದನನು ಆಡಿದ ಮಾತುಗಳು ಅವಳ ಜ್ಞಾಪಕಕ್ಕೆ ಬಂದುವು. ತನ್ನನ್ನು ಆತನ ವಿಷಯ ಸುಖಗಳ ಸಂತೃಪ್ತಿಗಾಗಿರುವ ದಾಸಿಯನ್ನಾಗಿ ಮಾಡುವೆನೆಂದು ಆಡಿದ್ದ ಆ ಕಠೋರ ವಚನಗಳು ಅವಳ ಎದೆಯನ್ನು ತೀಕ್ಷ್ಣವಾಗಿ ಚುಚ್ಚುತ್ತಲಿದ್ದುವು. ತನ್ನ ತಂದೆಯು ಅವನ ಕೈಯೊಳಗಿನ ಒಂದು ಗೊಂಬೆಯೆಂಬುದು ಅವಳ ಜ್ಞಾಪಕಕ್ಕೆ ಬಂದಿತು. ತನ್ನ ತಂದೆಯು ಈ ಶೋಚನೀಯ ಅವಸ್ಥೆಯು ತನ್ನನ್ನು ಈ ನರರಾಕ್ಷಸನಿಂದ ರಕ್ಷಿಸಲು ಹೇಗೆ ಪರ್ಯಾಪ್ತವಾಗುವುದು? ಮಂತ್ರಿಯಾದರೋ ಸರ್ವಶಕ್ತನಾಗಿರುವನು; ಅವಳಿಗೆ ಶಾಸನ ತಂತ್ರಗಳ ಪರಿಜ್ಞಾನವಿರಲಿಲ್ಲ; ಆದರೂ ಮದನನಾಡಿದ ಮಾತುಗಳಿಂದ ಅಮಾತ್ಯನ ಶಕ್ತಿ ಹಾಗೂ ದರ್ಪಗಳು ಅಷ್ಟು ಉಜ್ವಲವಾಗಿದ್ದು ತನ್ನ ತಂದೆಯ ಪ್ರಭೆಯನ್ನು ಮೂಲೆಗೂಡಿಸಿರುವುವೆಂಬದನ್ನು ಆ ಹುಡುಗಿಯು ಊಹಿಸಿದಳು. ಈ ವಿಚಾರಗಳು ಅವಳ ಕೋಮಲ ಹೃದಯದಲ್ಲಿ ಅಸ್ಲೋಲಕಲ್ಲೋಲವಾಗುವಂತೆ ಮಾಡಿದುವು, ಎಂಬುದನ್ನು ಇಲ್ಲಿ ವಿವರಿಸಬೇಕಾದುದಿಲ್ಲ. ಅವಳು ಅರಸನ ಮಗಳೆಂಬುದು ನಿಜ; ಆದರೆ ಒಬ್ಬ ದರಿದ್ರಬಾಲಕಿಗಿರುವ ಮನಶ್ಯಾಂತಿಯಾಗಲೀ ಆಹ್ಲಾದವಾಗಲೀ ಅವಳಿಗಿರಲಿಲ್ಲ

ಆಶೆಯು ಮನುಷ್ಯನಿಗೆ ಹೊಸ ಉತ್ಸಾಹವನ್ನು ನೀಡುತ್ತಿರುವುದು;

ತನಗೆ ಸೋಲು ಲಭಿಸಿದಾಗಲೂ ಮನುಷ್ಯನು ಹೊಸ ಆಶೆಗಳನ್ನು ತಾಳಿ ಸಂತಸವನ್ನು ಹೊಂದಲು ಪ್ರಯತ್ನಿಸುತ್ತಾನೆ. ಸದಾ ಪರಾಜಯದ ಕಡಲಿನಲ್ಲಿ ಮುಳುಗೇಳುತ್ತಿರುವ ನರಜೀವಿಯು ಗಾಳಿಯ ಗೋಪುರಗಳನ್ನು ತನ್ನ ಮನೋರಾಜ್ಯದಲ್ಲಿ ನಿರ್ಮಿಸುತ್ತ ಅವನು ಶಾಂತಿಯನ್ನು ಹೊಂದಲು ಪ್ರಯತ್ನಿಸುವ ಚಿತ್ರಗಳನ್ನು ನಾವು ಈ ವಿಶ್ವದಲ್ಲಿ ಧಾರಾಳಾಗಿ ನೋಡಬಲ್ಲೆವು. ಈ ಆಶೆಯೆಂಬ ಅಮೃತವೇ ಮನುಷ್ಯನ ಬೆಂದ ಹೃದಯವು ಪುನಃ ಚಿಗುರುವಂತೆ ಮಾಡುತ್ತಿರುವುದು. ಜೀವನದಲ್ಲಿ ಈ ಆಶೆಯು ಇಲ್ಲದಿದ್ದರೆ ಮನುಷ್ಯನ ಬಾಳು ನಾಯಿ ಪಾಡು ಆಗಿ ಹೋಗುತ್ತಿತ್ತೋ ಏನೋ!

ಚಂಪೆಯ ಹೃದಯದಡಿಯಲ್ಲಿಯಾದರೂ ಈ ಆಶೆಯ ಮೊಳಕೆಯು ಜನಿಸಿತು; ಆದಿಲ್ಲದಿದ್ದರೆ ದಾರಿಗಾಣದೆ ತನ್ನ ಜೀವನದ ಯಾತ್ರೆಯನ್ನು ಒಂದು ವೇಳೆ ಅವಳು ಆತ್ಮಹತ್ತೆಯ ಮೂಲಕ ಸಮಾಪ್ತಿಗೊಳಿಸುತ್ತಲಿದ್ದಳು; ಆದರೆ ಈ ಆಶೆಯು ಅವಳನ್ನು ಆ ಮಾರ್ಗದಿಂದ ರಕ್ಷಿಸಿತು. ಅವಳ ಹೃದಯದಂತರಾಳದಲ್ಲಿ ಮದನನ ಭೀಷಣ ವಚನಗಳನ್ನು ಎದುರಿಸಲಿರುವ ಚೈತನ್ಯವು ಸಂಜಾತವಾದಂತೆ ಭಾಸವಾಯಿತು. "ನಾನೆಷ್ಟು ಬಲಹೀನೆಯಾದರೂ ಆಪ್ಪುಗಳನ್ನು ಎದುರಿಸುವೆನು" ಎಂದು ತನ್ನೊಳಗೆ ತಾನೇ ಅವಳು ನುಡಿದುಕೊಂಡಳು. ಈ ರೀತಿ ವಿಚಾರಸಾಗರದಲ್ಲಿ ಮುಳುಗಿ ಅವಳೆಷ್ಟು ಹೊತ್ತು ಉಪವನದಲ್ಲಿ ಸಂಚರಿಸುತ್ತಿದ್ದಳೆಂಬುದು ಹೇಳಲು ಬರುವಂತಿಲ್ಲ.

ದಿನಮಣಿಯು ಯಾರನ್ನೂ ಕಾಯುವಂತಿಲ್ಲ; ಒಂದು ನಿಮಿಷದ ವಿಶ್ರಾಂತಿಯನ್ನು ಹೊಂದಿ ತನ್ನ ಪ್ರವಾಸವನ್ನು ನಡುದಾರಿಯಲ್ಲಿ ನಿಲ್ಲಿಸುವಂತಿಲ್ಲ ಅವನ ರಥದ ಗಾಲಿಗಳು ಒಂದೇಸಮನೆ ಬೆಳಗಿನಿಂದ ಸಂಜೆಯವರೆಗೆ ಸುತ್ತುತ್ತಲಿರುವುವು. ಅವನು ತನ್ನ ಆ ದಿನದ ಯಾತ್ರೆಯನ್ನು ಪರಿಸಮಾಪ್ತಿಗೊಳಿಸಿ ವಿಶ್ವರಂಗದಿಂದ ಮಾಯವಾದನು. ಕತ್ತಲೆಯ ಹೆಣ್ಣು ಕಪ್ಪು ಹಚ್ಚಡವನ್ನು ಲೋಕಕ್ಕೆ ಹೊದೆಯಿಸಲಾರಂಭಿಸಿದಳು.

ಸಂಧ್ಯೆಯಾಗುತ್ತಿರುವುದನ್ನು ಅವಲೋಕಿಸಿ, ಚಂಪಕಮಾಲಿನಿಯು ಉಪವನವನ್ನು ಪರಿತ್ಯಜಿಸಿ ರಾಜಗೃಹಕ್ಕೆ ತೆರಳಲು ಉದ್ಯುಕ್ತಳಾದಳು. ಅವಳು ಹಲವು ಸಂಗತಿಗಳನ್ನು ನೆನೆಯುತ್ತ ಉಪವನದ ಬಾಗಿಲ ಬಳಿಗೆ ಬಂದಳು. ಅಲ್ಲಿ ನಾಲ್ಕು ಮಂದಿ ಕರಾಳರೂಪದ ಗಂಡಸರು ನಿಂತಿರುವುದು ಅವಳ ದರ್ಶನೇಂದ್ರಿಯಗಳಲ್ಲಿ ಪತಿಸಿತು. ಅರಸು ಮನೆಯ ಹುಡುಗಿ; ಹೊರಗಿನ ಪುರುಷಲೋಕದ ಪರಿಚಯವು ಅವಳಿಗಿರಲಿಲ್ಲ. ಭಯಂಕರ ರೂಪದ ಈ ಆಳುಗಳು ಅವಳ ನೇತ್ರಗಳಿಗೆ ಯಮದೂತರಂತೆಯೇ ತೋರಿ

ಗರು. ಎಂದು ಹೇಳಬಹುದು. ಅವಳ ಮೈಯು ಭಯದಿಂದ ಕಂಪಿಸಿತು; ಧಮನಿಗಳಲ್ಲಿ ಹರಿದಾಡುತ್ತಿರುವ ನೆತ್ತರು ತಣ್ಣಗಾಗಿ ಹೋಯಿತು. ಅರುಣ ಬಣ್ಣದ ಆ ಚೆಲುಮೊಗವು ಧವಳ ವರ್ಣದಿಂದ ಆಚ್ಛಾದಿತವಾಯಿತು.

"ನೀವು ಯಾರು?" ಎಂದು ನಡುಗುವ ಸ್ವರದಲ್ಲಿ ರಾಜನಂದಿನಿಯು ಯಮದೂತರಂತೆ ಉಪವನದ ದ್ವಾರದಲ್ಲಿ ನಿಂತಿರುವ ಗಂಡಸರನ್ನು ಪ್ರಶ್ನಿಸಿದಳು.

"ತಾಯೀ, ನೀವು ನಮ್ಮೊಡನೆ ಬರಬೇಕು."

"ಎಲ್ಲಿಗೆ?"

"ನಾವು ಕರೆದೊಯ್ಯುವಲ್ಲಿಗೆ!"

"ಏಕೆ?"

"ಅದನ್ನು ನಾವು ಹೇಳುವವರಲ್ಲ!"

"ನಾನು ನಿಮ್ಮೊಡನೆ ಬರಲಾರೆನು."

"ಹಾಗಾದರೆ, ನಾವು ನಿಮ್ಮನ್ನು ಹಿಡಿದು ಒಯ್ಯುವೆವು!!"

ಈ ಮಾತುಗಳನ್ನು ಆಶ್ರಾವಿಸಿದ ಮೇಲಂತೂ ಅವಳ ಜೀವವು ಹಾಹಾರಿತು. ತಾನು ಓರ್ವ ಅಬಲೆ-ಹುಡುಗಿ. ಈ ಗಂಡಸರ ಕರಗಳಿಂದ ಪಾರಾಗುವ ಬಗೆ ಹೇಗೆ? ಜನಶೂನ್ಯವಾದ ಈ ಉಪವನದಲ್ಲಿ ತನ್ನನ್ನು ರಕ್ಷಿಸಲು ಯಾರಿರುವರು? ಇವರೇಕೆ ತನ್ನನ್ನು ಪೀಡಿಸಲು ಬಂದಿರುವರು? ಎಂಬಿತ್ಯಾದಿ ಹಲವು ವಿಚಾರಗಳು ಅವಳ ಮೆದುಳಿನಲ್ಲಿ ಮಿಂಚಿನಂತೆ ಹೊಳೆದು ಇನ್ನೊಂದು ಕ್ಷಣದಲ್ಲಿ ಮಾಯವಾದುವು. ಒಂದು ಶಿಲಾಪ್ರತಿಮೆಯಂತೆ ರಾಜನಂದಿನಿಯು ಅಲ್ಲಿ ನಿಂತಳು; ಒಂದು ಹೆಜ್ಜೆ ಸಹ ಮುಂದಿಡಲು ಅವಳಲ್ಲಿ ಚೈತನ್ಯವಿರಲಿಲ್ಲ.

"ತಾಯೀ, ಭಯಪಡಬೇಕಾದುದಿಲ್ಲ; ನಿಮ್ಮ ಕೂದಲಿಗೆ ಧಕ್ಕೆ ತಗಲದು. ನಮ್ಮೊಡನೆ ಬನ್ನಿ!" ಎಂದು ಓರ್ವ ವೃದ್ಧ ಘಾತುಕನು ನುಡಿದನು.

"ಹೊನ್ನನ್ನು ಬೇಕಾದರೆ ಕೊಡುವೆನು; ಆದರೆ ಮಹಾರಾಯರೆ! ನನ್ನನ್ನು ಪೀಡಿಸಬೇಡಿರಿ" ಎಂದು ರಾಜಕುಮಾರಿಯು ಬಿಕ್ಕಿ ಬಿಕ್ಕಿ ಅಳುತ್ತ ನುಡಿದಳು.

"ತಾಯೀ, ಒದರಬೇಡಿರಿ; ನಾವು ಹೇಳಿದಂತೆ ವರ್ತಿಸದಿದ್ದರೆ, ಅನಾವಶ್ಯಕವಾಗಿ ನೀವು ಹೆಚ್ಚಿನ ಸಂಕಟವನ್ನು ಅನುಭವಿಸಬೇಕಾಗ ಬಂದೀತು!"

ಅರಸು ಮಗಳು ಮಾತಾಡಲಿಲ್ಲ.

ಈ ದುಷ್ಟರು ರಾಜಕುಮಾರಿಯ ಕೈಕಾಲುಗಳನ್ನು ನಿರ್ದಯರಾಗಿ ಬಂಧಿಸಿದರು; ರಾಜನಂದಿನಿಯು ಭಯವಿಹ್ವಲಳಾಗಿ ಒಂದು ಬಾರಿ ಚೀರಿ, ಅನಂತರ ಪ್ರಜ್ಞಾರಹಿತಳಾದಳು. ಆ ತಸ್ಕರರು ಆ ಕತ್ತಲೆಯಲ್ಲಿ ರಾಜಕುಮಾರಿಯನ್ನು ಅಪಹರಿಸಿಕೊಂಡು ಎತ್ತ ತೆರಳಿದರೆಂಬುದು ತಿಳಿಯಲಾಗಲಿಲ್ಲ.

---

## ಅರಮನೆಯಲ್ಲಿ.

ಕುಂತಳೇಂದ್ರನ ಅರಮನೆಯು ರಾಜನಿವಾಸಕ್ಕೆ ಬೇಕಾದ ವೈಭವಗಳಿಂದ ನಿಬಿಡವಾಗಿದೆ. ರಾಜಗೃಹದ ಉನ್ನತವಾದ ಗೋಪುರಗಳು ಅದು ಅರಸನ ನಿವಾಸಸ್ಥಾನವೆಂಬುದನ್ನು ನೋಡುವವರಿಗೆ ತಮ್ಮ ಎತ್ತರದಿಂದ ಸೂಚಿಸುತ್ತಿರುವವು. ಕುಂತಳೇಂದ್ರನ ವಿಜಯಪತಾಕೆಯು ಅರಮನೆಯ ಗೋಪುರದ ತುದಿಯಲ್ಲಿ ಹಾರಾಡುತ್ತಲಿದ್ದು, ನಾಡಿನ ಜೀವವು ಅಲ್ಲಿ ನೆಲೆಸಿದೆ, ಎಂಬುದನ್ನು ಸೂಚಿಸುತ್ತಲಿದ್ದಿತು. ಅರಮನೆಯು ಪ್ರಾಚೀನ ಕಾಲದ ಭಾರತೀಯ ನರಪತಿಗಳ ನಿವಾಸಸ್ಥಾನಗಳಂತೆ ಅತ್ಯಂತ ವೈಭವ ಹಾಗು ಶಿಲ್ಪಿಚಾತುರ್ಯನಿಬಿಡವಾಗಿರುವುದು. ಪ್ರಾಸಾದದ ತುದಿಯಲ್ಲಿ ವಿರಾಜಮಾನವಾಗಿರುವ ಚಿನ್ನದ ಕಳಸವು ಸುತ್ತಲೂ ಹತ್ತೊಂದು ಗಾವುದಗಳ ದೂರದಿಂದಲೇ ಕಂಡುಬರುವುದು. ರಾಜನಿಕೇತನದ ನಾಲ್ಕನೆಯ ಮಹಡಿಯಲ್ಲಿ ನಿಂತು ನೋಡುವಾಗ, ಕುಂತಳ ನಗರವು ಪೂರ್ಣವಾಗಿ ಪ್ರೇಕ್ಷಕನ ವೀಕ್ಷಣೇಂದ್ರಿಯಗಳಲ್ಲಿ ಪತಿಸುವದು. ಅರಮನೆಯ ಗೋಡೆಗಳ ಮೇಲೆ ಬೆಳಗುವ ಸುಂದರ ಚಿತ್ರಗಳು ಪ್ರಾಚೀನ ಭಾರತೀಯ ಚಿತ್ರಕಲಾಕೋವಿದರ ಕರಕೌಶಲ್ಯದ ಚೆಲುವನ್ನು ಹೊರಚೆಲ್ಲುತ್ತಲಿರುವವು.

ಅರಮನೆಯು ರಾಜಧಾನಿಯ ಮಧ್ಯದಲ್ಲಿ ನಿಂತಿರುವುದು. ಓಲಗಶಾಲೆ, ಅಂತಃಪುರ, ರಾಜ್ಯಕಾರ್ಯಾಲೋಚನೆಯ ಮಂದಿರ, ರಾಜನಿವಾಸಸ್ಥಾನ ಎಂಬಿತ್ಯಾದಿ ವಿವಿಧ ಭಾಗಗಳಿಂದ ಕೂಡಿದ ಒಂದು ಚಿಕ್ಕದಾದ ಪಟ್ಟಣವೇ ಅದಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಅರಮನೆಯು ದಾಸ-ದಾಸಿಯರು, ಮಹಾರಾಜನ ಅಂಗರಕ್ಷಕರು, ವಿಲಾಸವಾಸಿಯರು ಎಂಬಿತ್ಯಾದಿ ವಿವಿಧ ತರಗತಿಯ ಜನರಿಂದ ಭರಿತವಾಗಿರುವದು.

ನೇರವು ಸಾಯಂಕಾಲವಾಗುತ್ತಬಂದಿತು; ಉಪವನಕ್ಕೆ ತೆರಳಿದ ರಾಜನಂದಿನಿಯು ಇನ್ನೂ ರಾಜಗೃಹಕ್ಕೆ ಹಿಂದಿರುಗಿ ಬಂದಿಲ್ಲ. ಆಕೆಯು ತನ್ನ ಗೆಳತಿಯನ್ನು ಸಹ ತನ್ನೊಡನೆ ಉಪವನಕ್ಕೆ ಕರೆದುಕೊಂಡು ಹೋಗಿರಲಿಲ್ಲ.

ಅವಳು ಏಕಾಂಗಿನಿಯಾಗಿ ತೆರಳಿದ್ದುದರಿಂದ, ಮಹಾರಾಣಿಯ ಹೃದಯದಲ್ಲಿ ಒಂದು ಬಗೆಯ ದಿಗಿಲು ಆವಿರ್ಭವಿಸಿತು. ತನ್ನ ಮುದ್ದುಗೂಸಿಗೆ ಎಲ್ಲಿ ವಿಪತ್ತು ಬಂದೊದಗುವದೋ, ಎಂದು ಆ ತಾಯಿಯ ಹೃದಯವು ಚಿಂತಾಮಯ ವಾಗಿದ್ದಿತು.

ಮಹಾರಾಣಿಗೆ ೪೦-೪೫ ವರ್ಷ ಪ್ರಾಯವಿರಬಹುದು; ಯೌವನವು ಕಳೆದು ಮುಪ್ಪು ಆ ಮೊಗದಲ್ಲಿ ತನ್ನ ಚರಣಗಳನ್ನು ಇಡಲು ಪ್ರಾರಂಭಿಸಿರು ವುದು; ಆದರೂ ಆ ವದನದಲ್ಲಿ ಬೆಳಗುತ್ತಿರುವ ಒಂದು ಅಪೂರ್ವ ತೇಜಸ್ಸು ಆ ಆನನಕ್ಕೆ ಶೋಭೆಯನ್ನು ನೀಡುತ್ತಿರುವದು ಕುಂತಳ ಸಾಮ್ರಾಜ್ಯದ ಮಹಾರಾಣಿಯಾಗಿ ಬಾಳುವ ಭಾಗ್ಯವು ಅವಳಿಗೆ ಲಭಿಸಿದ್ದರೂ ಚಿಂತೆಯಿಂದ ದೂರವಾಗಿರಲು ಅವಳಿಗೆ ಸಾಧ್ಯವಾಗಲಿಲ್ಲವು.

ಸಂಧ್ಯೆಯಾದರೂ ಮಗಳು ಹಿಂದಿರುಗಿ ಬರಲಿಲ್ಲ. ರಾಜಕುಮಾರಿಯು ದೃಗ್ಗೋಚರವಾಗದಿರುವದರಿಂದ ಹಲವು ಶಂಕೆಗಳು ರಾಜ್ಞಿಯ ಮಿದುಳಿ ನಲ್ಲಿ ಸ್ಥಳವನ್ನು ಹಿಡಿದುವು ವಿಷಯಾಕುಮಾರಿಯೊಡನೆ ವಿನೋದವಾಡುತ್ತ ಇದ್ದುದರಿಂದ ಕಾಲವಿಳಂಬಕ್ಕೆ ಕಾರಣವೆಂದು ಅವಳು ತನ್ನ ಮನಸ್ಸಿನಲ್ಲಿಯೇ ಸಂತಸವನ್ನು ತಾಳುವಳು; ಆದರೆ ಚಂದ್ರೋದಯವಾದರೂ ರಾಜನಂದಿನಿ ಯು ಬರಲಿಲ್ಲ. ಮಹಾರಾಣಿಯ ಎದೆಯಲ್ಲಿ ಭಯ-ಶಂಕೆಗಳ ಭೂತಗಳು ಸ್ಥಳವನ್ನು ಆಕ್ರಮಿಸಿದುವು. ಅವಳು ಕಂಪಿಸುತ್ತ ಮಹಾರಾಜನ ವಸತಿಗೆ ತೆರಳಿದಳು.

ಹಿಂದೆ ಹೇಳಿದಂತೆ ಆ ಕಾಲದಲ್ಲಿ ಕುಂತಳೇಂದ್ರನಿಗೆ ಲೌಕಿಕಕಾರ್ಯ ಗಳಲ್ಲಿ ಹೆಚ್ಚು ಆಸಕ್ತಿಯಿರಲಿಲ್ಲ. ಅವನು ತನ್ನ ಹೆಚ್ಚಿನ ಸಮಯವನ್ನು ಈಶ್ವರಚಿಂತನೆಯಲ್ಲಿ ವಿನಿಯೋಗಿಸುತ್ತಲಿದ್ದನು. ಅವನ ಪ್ರಾಯವು ೬೦ ಇರಬಹುದು. ವಾರ್ಧಕ್ಯವು ಅವನನ್ನು ಬಾಧಿಸಿದ್ದಿತು. ಕೂದಲುಗಳು ನೆರೆತು ಬಿಳಿಯಬಣ್ಣವನ್ನು ತಾಳಿದ್ದುವು. ವಿಶಾಲವಾದ ಲಲಾಟವು ಅವನೊಬ್ಬ ಶ್ರೇಷ್ಠ ತರಗತಿಯ ಪುರುಷನೆಂಬುದನ್ನು ಸೂಚಿಸುತ್ತಿರುವುದು. ದೀರ್ಘವೂ, ಬಲಯುತವೂ ಆದ ಅವನ ಬಾಹುಗಳು ಹರೆಯದಲ್ಲಿ ಅವನೊಬ್ಬ ಅಪ್ರ ತಿಮ ಶೂರನಾಗಿದ್ದನೆಂಬುದನ್ನು ತಿಳಿಸುತ್ತಿರುವುವು. ಗೌರವನಿಬಿಡವಾದ ಮುಖಭಾವವು ಅವನೊಬ್ಬ ದೃಢಮನಸ್ಕನೆಂಬುದರ ಗುರುತಾಗಿದ್ದಿತು.

ಮಹಾರಾಜನು ಹರೆಯದಲ್ಲಿ ಅಪ್ರತಿಮ ಬಲಶಾಲಿಯಾಗಿದ್ದನು. ಸ್ವಂತ ಬಾಹುಗಳ ಬಲದಿಂದ ನೆರೆಹೊರೆಯ ಅರಸರನ್ನು ಬೆದರಿಸಿ, ಅವರನ್ನು ಪಾದಾಕ್ರಾಂತರನ್ನಾಗಿ ಮಾಡಿ ತನ್ನ ಸಾಮ್ರಾಜ್ಯದ ಎಲ್ಲೆಗಳನ್ನು ಹೆಚ್ಚು

ದೂರದವರೆಗೆ ವಿಸ್ತರಿಸಿದ್ದನು. ದೇಶದಲ್ಲಿ ನೀತಿ-ನ್ಯಾಯಗಳು ಸ್ಥಿರವಾಗಿ ನೆಲೆಸುವಂತೆ ಕುಂತಳೇಂದ್ರನು ರಾಜ್ಯಪರಿಪಾಲನೆಯನ್ನು ಮಾಡುತ್ತಲಿದ್ದನು; ಆದರೆ ವಾರ್ಧಕ್ಯದಲ್ಲಿ ಕಾಲಿಡಲು, ಅವನ ತಾರುಣ್ಯದಲ್ಲಿ ನಲಿದಾಡುತ್ತಿದ್ದ ಹುರುಪು-ಉತ್ಸಾಹಗಳು ಅವನನ್ನು ಬಿಟ್ಟು ಮಾಯವಾಗ ತೊಡಗಿದ್ದವು. ಚಿಂತೆಯು ಅವನ ಮನೋವಲಯವನ್ನು ವ್ಯಾಪಿಸಿತು. ಜೀವನವು ಕ್ಲೇಶದಾಯಕವು ಎಂಬ ವೇದಾಂತಿಗಳ ಮನಃಸ್ಥಿತಿಯನ್ನು ಅರಸನು ಹೊಂದಿದನು ಆದರ ಪರಿಣಾಮವಾಗಿ ಕುಂತಳೇಂದ್ರನು ರಾಜ್ಯಕಾರಣಗಳಲ್ಲಿ ಹೆಚ್ಚಿನ ಶ್ರದ್ಧೆಯನ್ನು ಪ್ರಕಟಿಸದೆ, ಈಶ್ವರಚಿಂತನೆಯಲ್ಲಿಯೂ, ಅಧ್ಯಾತ್ಮಿಕ ಸಾಧನಗಳಲ್ಲಿಯೂ, ವೇದ ಮತ್ತು ಪುರಾಣಗಳ ಪಾರಾಯಣದಲ್ಲಿಯೂ ತನ್ನ ದಿನಗಳನ್ನು ವಿನಿಯೋಗಿಸತೊಡಗಿದನು.

ಕುಂತಳೇಂದ್ರನಲ್ಲಿ ಈ ಪರಿವರ್ತನೆಯು ಆವಿರ್ಭವಿಸಲು ಕಾರಣಗಳು ಇಲ್ಲದೆ ಇರಲಿಲ್ಲ. ಸಿಂಹಾಸನವನ್ನು ಅವನ ಅನಂತರ ಆರೋಹಣ ಮಾಡಲು ಒಂದೇ ಒಂದು ಪುರುಷ ಸಂತಾನವು ಅವನಿಗೆ ಲಭಿಸಿರಲಿಲ್ಲ. ತನಗೆ ಅಂತ್ಯದಲ್ಲಿ ಪಿಂಡೋದಕಗಳನ್ನು ನೀಡುವ ಒಬ್ಬ ಮಗನನ್ನು ವಿಧಿಯು ದಯಪಾಲಿಸದುದರಿಂದ ಅವನ ಜೀವನವು ನಿರಾಶಾಮಯವಾಗಿ ಪರಿಣಮಿಸಿತು. ಅವನ ವಂಶವರ್ಧನೆಗಾಗಿ ವಿಧಾತನು ನೀಡಿದುದು ಓರ್ವ ನಂದಿನಿಯನ್ನಾಗಿದ್ದಿತು. ಅವಳನ್ನು ಕುರಿತೂ ಅವನ ಮನಸ್ಸು ಚಿಂತೆಯನ್ನು ತಾಳದೆ ಇರಲಿಲ್ಲ. ಅವನು ತನ್ನ ಮಗಳಿಗೆ ಯೋಗ್ಯರೀತಿಯ ವಿದ್ಯಾಭ್ಯಾಸವನ್ನೂ ಲೌಕಿಕ ಪರಿಜ್ಞಾನವನ್ನೂ ಒದಗಿಸಿಕೊಟ್ಟಿದ್ದನು; ಅವನ ಹೃದಯದಲ್ಲಿ ಹರಿಯುತ್ತಿರುವ ಸ್ನೇಹದ ನದಿಯು ಅವಳಲ್ಲಿ ಸಂಗಮವನ್ನು ಹೊಂದುತ್ತಲಿದ್ದಿತು.

ಮಗಳ ವಿವಾಹಾಲೋಚನೆಯು ಅವನ ಮನಸ್ಸನ್ನು ಆಗಾಗ ಕೊರೆಯುತ್ತಲಿತ್ತು; ಪ್ರಧಾನ ಅಮಾತ್ಯನಾದ ದುಷ್ಟಬುದ್ಧಿಯು ತನ್ನ ಮಗನಾದ ಮದನಕುಮಾರನಿಗೆ ರಾಜನಂದಿನಿಯನ್ನು ಕೊಡಬೇಕೆಂಬ ಅಭಿಪ್ರಾಯವನ್ನು ತನ್ನ ಮಾತುಗಳ ಮೂಲಕ ಕುಂತಳೇಂದ್ರನಿಗ ಸೂಚಿಸಿದ್ದನು; ಆದರೆ ಅಮಾತ್ಯನ ಅಭಿಪ್ರಾಯವು ಕುಂತಳೇಂದ್ರನಿಗೆ ಸಮರ್ಪಕವಾಗಿ ತೋರಲಿಲ್ಲ. ಅರಸನು ಪ್ರತಾಪಶಾಲಿಯಾದ ಒಬ್ಬ ರಾಜಕುಮಾರನನ್ನು ಹುಡುಕಿ ಅವನಿಗೆ ತನ್ನ ಮಗಳನ್ನು ಕೊಡಬೇಕೆಂದು ಬಗೆದಿದ್ದನು.

ಈ ಎಲ್ಲಾ ಸಂಗತಿಗಳಿಂದ ಅರಸನ ಮನಸ್ಸು ಚಿಂತೆಗಳ ಸಂತೆಯಾಗಿ ಪರಿಣಮಿಸಿತು. ಅದರಿಂದ ನಿವಾರಣೆಯನ್ನು ಹೊಂದಲೂ, ಆತ್ಮಶಾಂತಿಯನ್ನು ಅನುಭವಿಸಲೂ ಬೇಕಾಗಿ, ಅರಸನು ರಾಜ್ಯಕಾರ್ಯಗಳನ್ನು

ಅಮಾತ್ಯನಾದ ದುಷ್ಟಬುದ್ಧಿಯ ಕರಗಳಿಗೆ ವಹಿಸಿ ಕುಂತಳೇಂದ್ರನು ಆಧ್ಯಾತ್ಮಿಕ ಚಿಂತನೆಯೆಂಬ ದ್ರುಮಚ್ಛಾಯೆಯನ್ನು ಶರಣು ಹೊಂದಿದನು. ರಾಜ್ಯ ಶಾಸನದಿಂದ ಪರಾಙ್ಮುಖವಾದ ಈ ಕೃತ್ಯವು ಭವಿಷ್ಯದಲ್ಲಿ ಅನೇಕ ವಿಪತ್ತುಗಳಿಗೆ ಕಾರಣವಾಗುವುದೆಂಬದನ್ನು ಅರಸನು ಅರಿತಿರಲಿಲ್ಲ

ಮಹಾರಾಜ್ಞಿಯು ಕುಂತಳೇಂದ್ರನ ಕೋಣೆಯಲ್ಲಿ ಪ್ರವೇಶಿಸಿದಾಗ ನೋಡಿದ ದೃಶ್ಯವು ಇದಾಗಿದ್ದಿತು. ಶಾಸ್ತ್ರಿಗಳೊಬ್ಬರು ವಿವರಿಸಿ ಹೇಳುತ್ತಲಿದ್ದ ವಾಮನಾವತಾರದ ಕತೆಯನ್ನು ಅರಸನು ಭಕ್ತಿರಸದಲ್ಲಿ ತಲ್ಲೀನನಾಗಿ ಆಶ್ರಾವಿಸುತ್ತಲಿದ್ದನು ಶಾಸ್ತ್ರಿಗಳು ತಮ್ಮ ಮೃದುಮಧುರವಾದ ಕಂಠದಲ್ಲಿ ಓಲೆಯ ಗರಿಗಳಲ್ಲ ಲಿಖಿತವಾದ ಸಂಸ್ಕೃತ ಶ್ಲೋಕಗಳನ್ನು ಓದಿ ಹೇಳುತ್ತ ಅವುಗಳ ತಾತ್ಪರ್ಯವನ್ನು ಕುಂತಳೇಂದ್ರನಿಗೆ ವಿವರಿಸಿ ಹೇಳುತ್ತಲಿದ್ದರು. ಅರಸನು ತನ್ನ ಸಕಲ ಚಿಂತೆಗಳನ್ನು ಮರೆತು, ವಾಮನನು ಬಲಿಯನ್ನು ಜೈಸಿದ ಆ ಪುಣ್ಯಕತೆಯನ್ನು ಹರ್ಷಚಿತ್ತನಾಗಿ ಕೇಳುತ್ತಲಿದ್ದನು. ಆ ವಸತಿಯಲ್ಲಿ ಭಗವತ್‌ಚಿಂತನೆಯಲ್ಲದೆ ಬೇರೆ ಯಾವ ವಿಚಾರಗಳಿಗೂ ಅವಕಾಶವಿರಲಿಲ್ಲ.

ಅಲ್ಲಿ ವ್ಯಾಪಿಸಿದ್ದ ಶಾಂತತೆಯ ವಾತಾವರಣವನ್ನು ತನ್ನ ವಚನಗಳಿಂದ ಭಂಗಪಡಿಸಿ ರಾಜನ ಚಿತ್ತವೃತ್ತಿಯನ್ನು ಅಲ್ಲೋಲ ಕಲ್ಲೋಲ ಮಾಡುವುದು ಉಚಿತವೆಂದು ರಾಣಿಯು ಭಾವಿಸಲಿಲ್ಲ. ತನ್ನ ವಾರ್ತೆಯನ್ನು ಅರಸನಿಗೆ ಅರುಹುವುದಕ್ಕಾಗಿ ಅವಸರವನ್ನು ಕಾದು ರಾಣಿಯು ಕೋಣೆಯ ಒಂದು ಮೂಲೆಯಲ್ಲಿ ಸ್ಥಳವನ್ನು ಹಿಡಿದಳು. ಕೋಣೆಯೊಳಗೆ ಬಂದು ರಾಜ್ಞಿಯು ನಿಂತಿರುವುದು ಮಹಾರಾಜನ ಲೋಚನಗಳಿಗೆ ದೃಗ್ಗೋಚರವಾಯಿತು. ಅರಸನು ಶಿರವನ್ನೆತ್ತಿ ಪ್ರಶ್ನಿಸಿದನು: ''ರಾಣೀ, ಏಕೆ ಬಂದಿರುವೆ?'' ಎಂಬುದಾಗಿ.

''ಪ್ರಭೂ, ಚಂಪೆಯು ಅರಮನೆಗೆ ಹಿಂದಿರುಗಿ ಬಂದಿರುವುದಿಲ್ಲ.''

''ಸ್ವಲ್ಪ ಭಯಮನಸ್ಕನಾಗಿ ಅರಸನು, ''ಅವಳೆಲ್ಲಿ ತೆರಳಿದಳು?'' ಎಂದನು.

''ಎಂದಿನಂತೆ ಸಂಚಾರಾರ್ಥವಾಗಿ ಉಪವನಕ್ಕೆ ತೆರಳಿದ್ದಳು; ಸಂಜೆಯಾದರೂ ಹಿಂದಿರುಗಿ ಬಂದಿರುವುದಿಲ್ಲ''

''ಸಂಗಡ ದಾಸಿಯನ್ನು ಕರೆದುಕೊಂಡು ಹೋಗಲಿಲ್ಲವೇ?''

''ಇಲ್ಲ!''

''ರಾಣೀ! ನೋಡಿದೆಯಾ? ಅದು ಪ್ರಮಾದವಾಯಿತು; ಒಂದು ವೇಳೆ

ಆ ವಿಷಯಾಕುಮಾರಿಯನ್ನು ಕಾಣುವುದಕ್ಕಾಗಿ ಅವಳು ಅಮಾತ್ಯನಿಕೇತನಕ್ಕೆ ತೆರಳಿರಬಹುದು."

"ಆದರೆ ಅಮಾತ್ಯಗೃಹದಲ್ಲಿ ಇಷ್ಟು ಹೊತ್ತಿನವರೆಗೆ ಅವಳು ನಿಲ್ಲತಕ್ಕವಳಲ್ಲ; ಯಾವುದೋ ಒಂದು ವಿಪತ್ತು ಅವಳಿಗೆ ಸಂಭವಿಸಿತೆಂಬ ಶಂಕೆಯು ನನ್ನನ್ನು ಪೀಡಿಸುತ್ತಿರುವುದು."

"ರಾಣೀ, ಭಯಪಡಬೇಡ; ಜಗದೀಶ್ವರನ ಕೃಪಾಕಟಾಕ್ಷದಿಂದ ರಾಜಕುಮಾರಿಗೆ ಯಾವ ಅಪಾಯವೂ ಸಂಭವಿಸದು." ಎಂದು ಇದುವರೆಗೆ ಶಿಲಾಪ್ರತಿಮೆಯಂತೆ ಕುಳಿತು ರಾಜದಂಪತಿಗಳ ಸಂವಾದವನ್ನು ಆಶ್ರಾವಿಸುತ್ತಲಿದ್ದ ಶಾಸ್ತ್ರಿಗಳು ನಡುವೇ ಬಾಯಿಹಾಕಿ ಹೇಳಿದರು.

"ಶಾಸ್ತ್ರಿಗಳು ನುಡಿದುದು ನಿಜ; ಈಶ್ವರಚರಣಗಳಲ್ಲಿ ನಂಬಿಕೆಯಿರುವವರಿಗೆ ವಿಪತ್ತುಗಳು ಸಂಭವಿಸಲಾರವು. ರಾಣಿ, ಚಿಂತೆಯನ್ನು ಬಿಡು. ಅಮಾತ್ಯಗೃಹದಲ್ಲಿ ಚಂಪೆಯು ಇರುವಳೇ ಎಂಬುದನ್ನು ತಿಳಿಯಲು ದಾಸಿಯನ್ನು ಓಡಿಸು." ಎಂದು ತನ್ನ ಮನಸ್ಸಿನಲ್ಲಿ ವ್ಯಾಪಿಸಿದ್ದ ಭಯವನ್ನು ಹೊರದೂಡುತ್ತಾ ಕುಂತಳೇಂದ್ರನು ನುಡಿದನು.

ರಾಣಿಯು ಮರುಮಾತಾಡಲಿಲ್ಲ; ಪತಿದೇವನ ಆದೇಶದಂತೆ ವರ್ತಿಸಲು ಆ ಕೋಣೆಯನ್ನು ತ್ಯಜಿಸಿ ತನ್ನ ವಸತಿಗೆ ಬಂದಳು. ಅನಂತರ ರಾಣಿಯು "ಮಾಲತಿ" ಎಂದು ಕೂಗಿದಳು.

"ಏನು ತಾಯಿ!' ಎಂದು ಕೈ ಮುಗಿಯುತ್ತ ದಾಸಿಯೊಬ್ಬಳು ಬಂದು ಅವಳ ಮುಂದೆ ನಿಂತಳು.

"ಮಾಲತಿ, ನೀನು ಅಮಾತ್ಯರ ನಿಕೇತನಕ್ಕೆ ಹೋಗಿ ಬರಬೇಕು."

"ಹಾಗೆಯೇ ಆಗಲಿ ತಾಯಿ!"

"ಚಂಪೆಯು ಅಮಾತ್ಯಗೃಹದಲ್ಲಿರುವಳೇ ಎಂಬುದನ್ನು ಅರಿತುಕೊಂಡು ಬಾ."

"ಅಪ್ಪಣೆ!" ಎಂದು ರಾಣಿಗೆ ನಮಿಸುತ್ತ ಮಾಲತಿಯು ರಾಣಿಯ ಆಜ್ಞೆಯನ್ನು ಶಿರಸಾವಹಿಸುವದಕ್ಕಾಗಿ ಹೊರಟು ಹೋದಳು.

ಮಹಾರಾಣಿಯು ತನ್ನ ಎದುರಿಗಿರುವ ಗೋಡೆಯಲ್ಲಿ ನಿಂತಿದ್ದ ಶ್ರೀರಾಮನ ಚಿತ್ರವನ್ನು ನೋಡುತ್ತ ಚಿಂತಾಮಗ್ನಳಾದಳು. ಅವಳ ಮನಸ್ಸಿನಲ್ಲಿ ಹಲವು ವಿಚಾರಗಳು ತುಂಬಿತುಳುಕುತ್ತಲಿದ್ದವು. 'ಚಂಪೆಯು ಮಂತ್ರೀಗೃಹದಲ್ಲಿ ಇಲ್ಲದಿದ್ದರೆ?' ಎಂಬಿತ್ಯಾದಿ ಹಲವು ಸಂಶಯಗಳ ಭೂತಗಳು ಬಂದು ಅವಳ ಮನಸ್ಸನ್ನು ಪೀಡಿಸಲು ಪ್ರಾರಂಭಿಸಿದುವು. ಎದುರಿಗೆ ನಿಂತಿರುವ ಶ್ರೀ

ರಾಮಚಂದ್ರನ ದಿವ್ಯಚಿತ್ರವನ್ನು ದರ್ಶಿಸುತ್ತ "ಹೇ ರಘುಪತಿ, ನನ್ನ ಕಂದಮ್ಮಳನ್ನು ವಿಪತ್ತುಗಳಿಂದ ರಕ್ಷಿಸು!" ಎಂದು ಪ್ರಾರ್ಥಿಸಿದಳು. ಅವಳ ಪ್ರಾರ್ಥನೆಯನ್ನು ರಘುಪತಿಯು ಲಾಲಿಸಿರಬಹುದೇ?

ನೇರವು ಒಂದು ಗಳಿಗೆಯು ಗತಿಸಲು ಸಚಿವೋತ್ತಮನ ನಿವಾಸ ಸ್ಥಾನಕ್ಕೆ ತೆರಳಿದ್ದ ಮಾಲತಿಯು ಹಿಂದಿರುಗಿ ಬಂದಳು. ಅವಳ ಬಿಳುಪೇರಿದ ಮೊಗವು ಯಾವುದೋ ಒಂದು ಅನಾಹುತದ ಲಾಂಛನವನ್ನು ಹೊರ ಸೂಸುತ್ತಲಿತ್ತು. ಅವಳು ರಾಣಿಯ ಮುಂದೆ ಹೋಗಿ ಒಂದು ಸಾಲ ಭಂಜಿಕೆಯಂತೆ ನಿಂತಳಲ್ಲದೆ ಮಾತಾಡಲಿಲ್ಲ. "ಮಾಲತಿ, ಚಂಪೆಯು ಎಲ್ಲಿ?" ಎಂದು ರಾಣಿಯು ಅವಳನ್ನು ಪ್ರಶ್ನಿಸಿದಳು.

ಮಾಲತಿಯು ಮಾತಾಡಲಿಲ್ಲ. ಅವಳ ನೇತ್ರಗಳಿಂದ ಬಾಷ್ಪಗಳು ಹೊರಚಲ್ಲಿದುವು; ಆ ಅಶ್ರುಕಣಗಳು ಚಂಪೆಗೆ ಯಾವದೋ ಒಂದು ವಿಪತ್ತು ಸಂಭವಿಸಿರುವದೆಂಬ ಭೀತಿಯು ರಾಣಿಯ ಮನಸ್ಸಿನಲ್ಲಿ ಸಂಜಾತ ವಾಗುವಂತೆ ಮಾಡಿದುವು. ರಾಣಿಯು ಉಸಿರುಬಿಡದೆ, ಪ್ರಶ್ನಿಸಿದಳು; ಚಂಪೆಯು ಅಮಾತ್ಯನಿಕೇತನದಲ್ಲಿ ಇರುವಳೇ?" ಎಂಬುದಾಗಿ.

"ಇಲ್ಲ ತಾಯಿ!" ಎಂದು ಕುಗ್ಗಿದ ಸ್ವರದಲ್ಲಿ ಮಾಲತಿಯು ನುಡಿದಳು.

"ಅಮಾತ್ಯಮಂದಿರದಲ್ಲಿ ಚಂಪೆಯಿಲ್ಲವೆ?" ಎಂದು ಬಿಳುಪೇರಿದ ಮೊಗ ದೊಡನೆ ಮಹಾರಾಣಿಯು ಪುನಃ ಪ್ರಶ್ನಿಸಿದಳು.

"ಇಲ್ಲ ತಾಯೀ, ಅವರಲ್ಲಿಲ್ಲ." ಎಂದು ಮಾತ್ರವಾಗಿತ್ತು ಮಾಲತಿಯ ಉತ್ತರ.

"ಹಾಗಾದರೆ ಚಂಪೆಯೆಲ್ಲಿ? ನನ್ನ ಕಂದಮ್ಮಳೆಲ್ಲಿ?" ಎಂದು ತಾನು ತೆರೆ ದಿದ್ದ ಕಣ್ಣುಗಳ ರೆಪ್ಪೆಯನ್ನು ಮುಚ್ಚದೆ ರಾಣಿಯು ಕನಸಿನಲ್ಲಿರುವವಳ ಹಾಗೆ ಮಾತಾಡಿದಳು.

ಮಾಲತಿಯು ತನ್ನ ತುಟಿಗಳನ್ನು ತೆರೆಯಲಿಲ್ಲ.

"ಚಂಪೆ! ನನ್ನ ಕಂದಾ! ನನ್ನನ್ನು ಪರಿತ್ಯಜಿಸಿ ನೀನೆತ್ತ ತೆರಳಿದೆ? ನಾನು ನಿನಗಾವ ದ್ರೋಹವನ್ನು ಬಗೆದೆನು!" ಎಂದು ಚೀರುತ್ತಾ ಮಹಾ ರಾಣಿಯು ಭೂಮಿಯಲ್ಲಿ ಪತಿಸಿದಳು. ಮಾಲತಿಯು ಅವಳನ್ನು ಸ್ಪರ್ಶಿಸಿ ನೋಡಲು, ರಾಣಿಯು ಪ್ರಜ್ಞಾಶೂನ್ಯಳಾಗಿದ್ದುದು ಕಂಡು ಬಂದಿತು.

ಅರಮನೆಯು ಕೋಲಾಹಲ ಪರಿಪೂರ್ಣವಾಯಿತು. ಅರಸನು ತನ್ನ ಕಥಾಶ್ರವಣವನ್ನು ಸಾಕು ಮಾಡಿ, ಮಹಾರಾಣಿಯ ವಸತಿಗೆ ಓಡಿಬಂದನು. ಪ್ರಜ್ಞಾರಹಿತಳಾಗಿ ಬಿದ್ದಿದ್ದ ತನ್ನ ಮಡದಿಯ ಶರೀರವು ಅವನ ಲೋಚ

ನೇಂದ್ರಿಯಗಳಲ್ಲಿ ಪತಿಸಿತು. ಕುಂತಳೇಂದ್ರನು ಚಂಪೆಯು [illegible]ವಾದ ವಾರ್ತೆಯನ್ನು ಅರಿತನು; ತೀವ್ರವಾದ ಮನೋಯಾತನೆಯು ಅವನ ಎದೆಯನ್ನು ಚುಚ್ಚಲು ಪ್ರಾರಂಭಿಸಿತು.

ಆಕಸ್ಮಿಕವಾಗಿ ಸಂಭವಿಸಿದ ಈ ವಿಚಿತ್ರ ಘಟನೆಯು ಅವನ ಚಿತ್ತಶಾಂತಿಯನ್ನು ಭಂಗಗೊಳಿಸಿತು. ತನ್ನ ಮುದ್ದಿನ ಕಂದ-[illegible] ವಂಶದ ಆಧಾರಸ್ಥಂಭ-ಮಾಯವಾದುದು, ಕುಂತಳೇಂದ್ರನು ಸಹಿಸಲಶಕ್ಯವಾದ ಒಂದು ದಾರುಣ ಪ್ರಹಾರವಾಗಿದ್ದಿತು. ಕೆಲವು ನಿಮಿಷಗಳ ಪರ್ಯಂತ ವಿಚಾರ ಶೂನ್ಯನಾಗಿ ಒಂದು ಪುತ್ಥಳಿಯಂತೆ ಅರಸನು ಕುಳಿತುಬಿಟ್ಟನು.

ದಾಸಿಯರ ಶೈತ್ಯೋಪಚಾರಗಳಿಂದ ರಾಣಿಯು ಮೂರ್ಛೆಯನ್ನು ತಿಳಿದೆದ್ದಳು; ಆದರೆ ಆಗಲಿನ ಪರಿಸ್ಥಿತಿಯು ಅತ್ಯಂತ ಶೋಚನೀಯವಾಗಿದ್ದು, ನೋಡುವವರ ಮನಸ್ಸನ್ನು ಕರಗಿಸುತ್ತಲಿತ್ತು. [illegible] ಉನ್ಮಾದಿನಿಯಂತೆ "ಚಂಪೆ, ನನ್ನ ಕಂದಾ!" ಎಂದು ಮಾತ್ರ [illegible]. ಕಣ್ಣುಗಳಿಂದ ಏಕಪ್ರಕಾರವಾಗಿ ಕಂಬನಿಗಳು [illegible]. ಮುಖವು ಅತ್ಯಂತ ಮ್ಲಾನಭಾವವನ್ನು ಹೊಂದಿತ್ತು [illegible] ನೇತ್ರಗಳಿಂದ ಹೊರಬೀಳುತ್ತಲಿದ್ದಿತು.

ಅರಸನು ಮಂತ್ರೀಕುಮಾರನನ್ನು ಕರೆದುಕೊಂಡು [illegible] ಕಳುಹಿಸಿದನು. ಚಂಪೆಯ ಶೋಧವನ್ನು ಕುರಿತು: [illegible] ಚಿಸತೊಡಗಿದನು. ದೂತನು ಅಮಾತ್ಯನಂದನನೊಡನೆ ಹಿಂದಿರುಗಿದನು. ಮದನನು ಪದ್ಧತಿಯಂತೆ ಪ್ರಭುವಾದ ರಾಜನಿಗೆ ವಂದಿಸಿ [illegible] ನಿಂತನು. ಕುಂತಳೇಂದ್ರನು ಮಾತಾಡಲಿಲ್ಲ. ಕೆಲವು ನಿಮಿಷಗಳವರೆಗೆ ಮೌನವನ್ನು ಅವಲಂಬಿಸಿದ್ದ ಅನಂತರ: "ಅಮಾತ್ಯನಂದನಾ, ಮಂತ್ರಿ[illegible]ದಿಂದ ಹಿಂದಿರುಗಿ ಬರಲಿಲ್ಲವೆ?" ಎಂದು ಅರಸನು ಪ್ರಶ್ನಿಸಿದನು.

"ಮಹಾಪ್ರಭೂ, ಪೂಜ್ಯ ತಂದೆಯವರು [illegible] ಹಿಂದಿರುಗಿ ಬಂದಿರುವುದಿಲ್ಲ. ಒಂದು ವೇಳೆ ಹೆಚ್ಚು ಕಾಲ ವಿಲಂಬವಾಗಬಹುದು!"

"ಅಮಾತ್ಯನಂದನಾ, ನೀವೆಲ್ಲರೂ ಇರುವಾಗ, ನನ್ನ ಜೀವನದ ರತ್ನವನ್ನು ಕಾಪಾಡಲು ಅಸಮರ್ಥರಾಗಿ ಹೋದಿರಲ್ಲಾ!" ಎಂದು ಮಹಾರಾಜನು ದೀರ್ಘವಾದ ಒಂದು ನಿಟ್ಟುಸಿರನ್ನು ಬಿಟ್ಟು ಶೋಕಪರಿಪೂರ್ಣವಾದ ಸ್ವರದಲ್ಲಿ ನುಡಿದನು.

"ಮಹಾರಾಜ!" ಎಂದು ಬಿಳುಪೇರಿದ ಮೊಗದೊಡನೆ ಮದನ ಕುಮಾರನು ನುಡಿದನು: "ಮಹಾಸ್ವಾಮಿಯವರಿಗೆ ಯಾವ ಅನರ್ಥವು ಒದಗಿತು?"

"ಸಚಿವಕುಮಾರ!" ಎಂದು ಅರಸನು:—"ನನ್ನ ಮಗಳು-ಕುಂತಳೇಂದ್ರನ ವಂಶದ ಕಲ್ಪತರು-ಇಂದು ಸಂಚಾರಾರ್ಥವಾಗಿ ಉಪವನಕ್ಕೆ ತೆರಳಿದವಳು ಹಿಂದಿರುಗಿ ಬಂದಿರುವದಿಲ್ಲ!"

"ಮಹಾಸ್ವಾಮಿಯವರು ಶೋಕವಿಹ್ವಲರಾಗಬಾರದು; ನಮ್ಮ ಚಾರರು ಅತ್ಯಂತ ಕಾರ್ಯದಕ್ಷರಿರುವರು. ರಾಜನಂದಿನಿಯ ಶೋಧವನ್ನು ಅವರು ನಡೆಸಿಯೇ ನಡೆಯಿಸುವರು." ಎಂದು ಮಹಾರಾಜನ ಹೃದಯದಲ್ಲಿ ತುಂಬಿತುಳುಕುತ್ತಲಿದ್ದ ಶೋಕ-ಸಂತಾಪಗಳನ್ನು ಶಾಂತಗೊಳಿಸುವದಕ್ಕಾಗಿ ಅಮಾತ್ಯನಂದನನು ಭರವಸೆಪೂರ್ಣವಾದ ಈ ನುಡಿಗಳನ್ನು ಆಡಿದನು.

"ಅಮಾತ್ಯಪುತ್ರಾ, ನಮ್ಮ ಚಾರರು," ಎಂದು ತಿರಸ್ಕಾರಮಯವಾಣಿಯಲ್ಲಿ ಅರಸು ಹೇಳಿದನು:—"ಅತ್ಯಂತ ಕಾರ್ಯದಕ್ಷರಾದುದರ ಪರಿಣಾಮವಾಗಿ ಈ ಅನರ್ಥವು ಆವಿರ್ಭವಿಸಿತು. ಈ ವಾರ್ಧಕ್ಯ ಕಾಲದಲ್ಲಿ ಈ ಯಾತನೆಯನ್ನು ಸಹಿಸುವ ತ್ರಾಣವು ನನ್ನ ಎದೆಗಿರುವುದಿಲ್ಲ."

ರಾಜ್ಯಪಾಲಕರಾದ ಅಧಿಕಾರಿಗಳ ಕಾರ್ಯದಕ್ಷತೆಯ ಲೋಪವನ್ನು ಕುರಿತು ರಾಜನಾಡಿದ ನುಡಿಗಳು ಅಮಾತ್ಯನಂದನನಿಗೆ ರುಚಿಸಲಿಲ್ಲ. ತನ್ನನ್ನು ಅವಮಾನಿಸಲು ಪರ್ಯಾಪ್ತವಾದ ನುಡಿಗಳು ಅವುಗಳೆಂದು ಅವನು ಬಗೆದನು. ಮಂತ್ರಿಯೂ ಮಗನೂ ರಾಜನನ್ನು ತಮ್ಮ ಕೈಯೊಳಗಿನ ಗೊಂಬೆಯನ್ನಾಗಿ ಮಾಡಿ, ತಮ್ಮ ನಿರಂಕುಶಾಧಿಕಾರದ ದರ್ಪಜ್ವಾಲೆಯನ್ನು ದೇಶದಲ್ಲಿ ಪಸರಿಸಲು ಪ್ರಯತ್ನಿಸುತ್ತಲಿದ್ದರು. ಅವರ ಈ ಪ್ರಯತ್ನದಲ್ಲಿ ಅಲ್ಪ ವಿಜಯವು ಪ್ರಾಪ್ತವಾದಂದಿನಿಂದ ಅವರಿಗೆ ಅರಸನಲ್ಲಿದ್ದ ಭಕ್ತಿ, ಭಯ, ವಿಶ್ವಾಸಗಳು ಕ್ಷಯಿಸತೊಡಗಿದ್ದವು. ಅವರ ಲೋಚನಗಳಿಗೆ ಅರಸನು ತೃಣಪ್ರಾಯನಾಗಿ ತೋರತೊಡಗಿದ್ದನು. ಪರಿಸ್ಥಿತಿಯು ಈ ತರಹದ್ದಾಗಿರಲು, ಅರಸನು ಅಧಿಕಾರವರ್ಗದವರನ್ನು ಆಕ್ಷೇಪಿಸಿದುದರಲ್ಲಿ, ಮದನನು ಸಂತಾಪವ್ಯಕ್ತಗೊಳಿಸಿದುದರಲ್ಲಿ ಅತಿಶಯವೇನೂ ಇಲ್ಲ.

"ಮಹಾರಾಜ!" ಎಂದನು ಅಮಾತ್ಯನಂದನನು: "ತಾವು ಶೋಕವಿಹ್ವಲರಾಗಬಾರದು. ಕಾರ್ಯವು ಮಿಂಚಿತು; ಇನ್ನು ಚಿಂತಿಸಿ ಫಲವಿಲ್ಲ. ತಕ್ಕ ಪ್ರಯತ್ನಗಳನ್ನು ಮಾಡಿ ರಾಜನಂದಿನಿಯನ್ನು ರಕ್ಷಿಸಬೇಕಾಗಿದೆ. ಅದಕ್ಕಾಗಿ ಕೊತವಾಲನಿಗೆ ಬೇಕಾದ ಆಜ್ಞೆಗಳನ್ನು ನೀಡಬೇಕಾಗಿದೆ."

"ಮದನಕುಮಾರ, ನೀನು ಈಗಲಿನ ಪರಿಸ್ಥಿತಿಯನ್ನು ಅರಿತಿರುವೆ. ವಾರ್ಧಕ್ಯಕಾಲದಲ್ಲಿ ಬೆಂದು ನೊಂದ ಎದೆಗೆ ಅಮೃತದ ಶೀತಲ ಜಲವನ್ನು ಸಿಂಪಡಿಸಲು ವಿಧಾತನು ದಯಪಾಲಿಸಿದ ಆ ಕಲ್ಪತರುವು ನನ್ನ ಕರಗಳನ್ನು

ತ್ಯಜಿಸಿ ಹೊರಟು ಹೋದರೆ, ನನ್ನ ಬದುಕು ಮಸಣದ ಬೀಡಾಗಿ ಪರಿಣಮಿಸುವುದು; ಶೋಕವು ಜೀವವನ್ನು ದಹಿಸುವುದು. ಅವಳಿಲ್ಲದೆ ಬಾಳಲು ನನಗೆ ಸಾಧ್ಯವಿಲ್ಲ. ಆದುದರಿಂದ ಆದಷ್ಟು ಬೇಗನೆ ಚಂಪೆಯ ಶೋಧವನ್ನು ನಡೆಯಿಸಬೇಕು."

"ಮಹಾರಾಜ, ತಮ್ಮ ನುಡಿಗಳನ್ನು ಶಿರಸಾವಹಿಸಿದೆನು. ನಾಳೆ ಸಂಜೆಯಾಗುವುದಕ್ಕೆ ಮುಂಚೆಯೇ ಚಂಪೆಯು ಪ್ರಾಸಾದಕ್ಕೆ ತಲುಪುವಳೆಂಬ ನನ್ನ ನುಡಿಗಳಲ್ಲಿ ತಾವು ಭರವಸೆಯನ್ನಿಡಿರಿ" ಎಂದು ಅಮಾತ್ಯನಂದನನು ನುಡಿದನು.

"ಮಂತ್ರಿಕುಮಾರ, ನಿನ್ನ ಪ್ರಯತ್ನಗಳು ವಿಜಯವನ್ನು ಹೊಂದಲಿ!" ಎಂದು ನೇತ್ರದಿಂದ ಒಂದು ಬಾಷ್ಪಕಣವನ್ನು ಚೆಲ್ಲಿ, ಕುಂತಳೇಂದ್ರನು ನುಡಿದನು. ಅಮಾತ್ಯನಂದನನು ಅರಸನಿಗೆ ಪ್ರಣಾಮಗಳನ್ನರ್ಪಿಸಿ ರಾಜನಿಕೇತನವನ್ನು ತ್ಯಜಿಸಿ ಹೊರಟು ಹೋದನು.

---

## ಒಂದು ಒಪ್ಪಂದ

"ಅಮಾತ್ಯರೇ! ನೀವು ಹೇಳುವ ಮಾತುಗಳು ಸರಿಯೇ; ಆದರೆ ಫಲಾಪೇಕ್ಷೆಯಿಲ್ಲದೆ ಇಷ್ಟು ದ್ರವ್ಯವನ್ನು ವ್ಯಯಗೊಳಿಸಲು ಮನುಷ್ಯ ಸ್ವಭಾವವು ಒಪ್ಪದು, ಎಂಬ ತತ್ವವನ್ನು ತಾವು ಬಲ್ಲಿರಷ್ಟೆ?"

"ವ್ಯಾಪಾರಿಗಳೆ, ತತ್ವಶಾಸ್ತ್ರಗಳನ್ನು ಕುರಿತು ವಾದ-ವಿವಾದಗಳನ್ನು ನಡೆಯಿಸಲು ನಾನು ಹೊರಟಿಲ್ಲ" ಎಂದು ಶಶಾಂಕಶೇಖರನ ನೇತ್ರಗಳನ್ನು ವೀಕ್ಷಿಸುತ್ತ ಆ ಕಣ್ಣುಗಳಲ್ಲಿ ಬೆಳಗುತ್ತಿರುವ ಕಿಡಿಗಳಿಂದ ಶಶಾಂಕಶೇಖರನ ಎದೆಯಲ್ಲಿ ತುಂಬಿರುವ ವಿಚಾರಗಳನ್ನು ಗ್ರಹಿಸಲುದ್ಯುಕ್ತನಾದವನ ಹಾಗೆ ದುಷ್ಟಬುದ್ಧಿಯು ನುಡಿದನು.

"ಅಮಾತ್ಯರೆ!" ಎಂಬ ಕಿರುನಗೆಯೊಡನೆ ಶಶಾಂಕಶೇಖರನು "ತತ್ವಶಾಸ್ತ್ರವಿವೇಚನೆಯಲ್ಲ; ಈಗ ತಾವು ಅವಶ್ಯಪಡುತ್ತಿರುವಷ್ಟು ಹಣವನ್ನು ನೀಡಲು ನಾನು ಹೊರಟಿರುವಾಗ, ಅದಕ್ಕೆ ಸರಿಯಾದ ಒಂದು ಪ್ರತಿಫಲವನ್ನು ಬಯಸುವುದು ಲೌಕಿಕವಿಚಾರಗಳ ಮನುಷ್ಯ ಸ್ವಭಾವವಷ್ಟೆ?"

"ಅದು ಸರಿಯಾದ ಮಾತು; ಯಾರೂ ಫಲವನ್ನು ಬಯಸದೆ ದುಡಿಯುವದಿಲ್ಲ. ಈ ಬಯಕೆಯಿಂದಲೇ ಪ್ರಪಂಚವು ನಿಂತಿರುವುದು. ನೀವು ಕೊಡುವ ಹಣಕ್ಕೆ ನೀವು ಹೇಳುವಷ್ಟು ಬಡ್ಡಿಯನ್ನು ನಾನು ಕೊಡುವೆನು."

ಎಂದು ತನ್ನ ದಾರಿಯನ್ನು ಸುಗಮವಾಗಿ ಮಾಡಲು ಅಮಾತ್ಯನು ಹೇಳಿದನು.

"ನಿಮ್ಮಂಥ ಮಹಾನುಭಾವರಿಂದ ಬಡ್ಡಿಯನ್ನು ವಸೂಲಿ ಮಾಡಿದರೆ?" ಎಂದು ತನ್ನ ಸಂಕೋಚವನ್ನು ಸೂಚಿಸುತ್ತ ವ್ಯಾಪಾರಿಯು:—"ನನ್ನ ಈ ಸಮಯದ ಸಹಾಯಕತ್ವವೆಲ್ಲಿ ಉಳಿಯುವದು? ನೀವು ಬಡ್ಡಿಯನ್ನು ನೀಡಲು ಉದ್ಯುಕ್ತರಾದರೂ ಸ್ವೀಕರಿಸಲಿಕ್ಕೆ ನಾನು ಸನ್ನದ್ಧನಾಗಿರುವುದಿಲ್ಲ. ಬಡ್ಡಿಯಿಂದ ಹಣವನ್ನು ಗಳಿಸುವ ಕೆಲಸ ಮಾಡಬೇಕಾದರೆ, ಅನ್ಯರಿಗೆ ನನ್ನ ಧನವನ್ನು ಸಾಲ ಕೊಟ್ಟು ಸಂಪಾದಿಸಬಹುದು."

"ನಿಮ್ಮ ಮನಸ್ಸಿನ ಭಾವನೆಗಳಲ್ಲಿ ಅಡಗಿರುವ ಒಡಪು ನನಗೆ ತಿಳಿಯಲಿಲ್ಲ; ನಿಮ್ಮ ನಿರ್ಧಾರವನ್ನು ಸ್ವಲ್ಪ ಸ್ಪಷ್ಟವಾಗಿ ಉಸುರಬಾರದೆ?"

"ನನ್ನಲ್ಲಿ ನಿಮ್ಮ ವಿಶ್ವಾಸವಿರುವದೋ ಇಲ್ಲವೋ ಎಂಬ ಸಂದೇಹವು ನನ್ನನ್ನು ಬಾಧಿಸುತ್ತಿರುವದು."

"ನಿಮ್ಮ ವಿಚಾರದಂತೆ ಅದಕ್ಕೆ ಸಾಧಕವಾಗಿರುವುದೇನು?"

"ಅದನ್ನು ತಾವೆ ವಿಚಾರಿಸಿದರೆ ಸುಲಭಸಾಧ್ಯ!"

"ಹೇಳಿದರೆ! ನಾನು ತಿಳಿಯದೆ ಅವುಗಳಿಗೆ 'ಹೂಂ' ಅನ್ನುವುದು ಹೇಗೆ?"

"ನಾನು ನಿಮ್ಮ ಮಿತ್ರತ್ವವನ್ನು ಸ್ವೀಕರಿಸಿರುವುದಿಲ್ಲವೆಂಬುದನ್ನು ತಾವು ಬಲ್ಲಿರಷ್ಟೆ!"

"ಹೌದು."

"ನಾನು ರಾಜಕೀಯ ಜೀವನವನ್ನು ಕೈಕೊಳ್ಳಲು ಬಯಸುತ್ತಿರುವೆನು. ತಮ್ಮ ಸಹಾಯವು ಈ ಕಾರ್ಯದಲ್ಲಿ ಅವಶ್ಯವಿದೆ."

"ವ್ಯಾಪಾರಿಗಳೆ!" ಎಂದು ಗಹಗಹಿಸಿ ನಗುತ್ತಾ ಅಮಾತ್ಯನು ಹೇಳಿದನು: "ನಿಮ್ಮ ಕನ್ಯೆಯನ್ನು ಅನ್ವೇಷಿಸುತ್ತ ರಾಜಕಾರಣದಲ್ಲಿ ಹಣ್ಣಾಗಿ ಹೋದ ನನ್ನ ಭಾರತವರ್ಷದಲ್ಲೆಲ್ಲ ಸಂಚರಿಸಬೇಕೆಂದು ನೀವು ಬಯಸುತ್ತಿರುವಿರಾ?"

"ರಾಜತಂತ್ರದಿಂದ ಸುಡುತ್ತಿರುವ ಅಮಾತ್ಯಶಿರಸ್ಸಿನ ಮೇಲೆ ಕನ್ಯಾನ್ವೇಷಣದ ಮಹಾಭಾರವನ್ನು ಹೊರಿಸಿ ಬಳಲಿಸಬೇಕೆಂಬ ಆಗ್ರಹವು ನನಗಿರುವುದಿಲ್ಲ" ಎಂದು ಶಶಾಂಕನು ನುಡಿದು, ಒಂದು ಕಿರುನಗೆಯನ್ನು ಬೀರಿ, ಚಿಂತಾಮಗ್ನನಾದ ಅಮಾತ್ಯನ ವದನಮಂಡಲವನ್ನು ಅವಲೋಕಿಸಿದನು. ತನ್ನ ಬಲೆಯಲ್ಲಿ ಅಮಾತ್ಯನು ಸಿಕ್ಕಿ ಬೀಳುವನೆಂಬ ಆತ್ಮವಿಶ್ವಾಸದ ಕಿಡಿಗಳು ಶಶಾಂಕನ ಕಣ್ಣುಗಳಿಂದ ಹೊರಬೀಳುತ್ತಲಿದ್ದುವು.

"ನಿಮ್ಮ ಉಪಾಯವು ಯಾವುದು ವ್ಯಾಪಾರಿಗಳೆ?"

"ತಮಗೆ ಒಬ್ಬ ಕುಮಾರಿಯಿರುವಳೆಂಬುದನ್ನು ನಾನು ಕೇಳಿರುವೆನು."

"ಅದು ಸರಿ, ನನ್ನ ಮಗಳನ್ನು...." ಎಂದು ಚಿಂತಾನಿಬಿಡನಾಗಿ ದುಷ್ಟ ಬುದ್ಧಿಯು ನುಡಿಯಲು ಪ್ರಾರಂಭಿಸಿದನು; ಆದರೆ ಅಮಾತ್ಯನ ವಚನಗಳು ಪೂರೈಸುವುದರೊಳಗಾಗಿ ಶಶಾಂಕಶೇಖರನು ನಡುವೇಬಾಯಿ ಹಾಕಿ ಮಾತಾಡ ತೊಡಗಿದನು:

"ತಮ್ಮ ಮಗಳನ್ನು ನನಗೆ ಲಗ್ನಮಾಡಿಕೊಡುವುದಾದರೆ ತಾವು ಆವಶ್ಯಪಡುವ ದ್ರವ್ಯಸಹಾಯವನ್ನು ಮಾಡುವೆನು."

ವ್ಯಾಪಾರಿಯ ಈ ಸ್ಪಷ್ಟವಾದ ನುಡಿಗಳನ್ನು ಶ್ರವಿಸಿ ಮಂತ್ರಿವರ್ಯನು ಆಶ್ಚರ್ಯದಿಂದ ಹೌಹಾರಿಹೋದನು.

ಇಲ್ಲಿ ಶಶಾಂಕಶೇಖರನ ಸ್ವಭಾವ, ಗುಣ, ದೋಷಗಳ ಪರಿಚಯವನ್ನು ವಾಚಕರಿಗೆ ನೀಡುವುದು ಅಸ್ಥಾನದಲ್ಲಾಗಲಿಕ್ಕಿಲ್ಲ ಶಶಾಂಕಶೇಖರನು ಕುಳಿಂದಪುರದಲ್ಲಿ ಅತ್ಯಂತ ವಿಖ್ಯಾತಿಯನ್ನು ಸಂಪಾದಿಸಿದ ಒಬ್ಬ ವಣಿಕನಾಗಿದ್ದನು. ಅವನ ವಿಕೃತರೂಪವು ನಾವಿಂದು ಹಲವು ಯಮಲೋಕದ ಚಿತ್ರಗಳನ್ನು ನೋಡುವ ಕಾಲವೂತರ ಆ ಸುಂದರರೂಪವನ್ನು ನಮ್ಮ ನೆನಪಿಗೆ ತರುತ್ತಲಿರುವದು. ಸದಾ ಕಪ್ಪಿನ ದೇಹ. ಗುರಕ್ಕಂತನ ಕೊಕ್ಕಿನಂತೆ ಡೊಂಕಾದ ನಾಶಿಕವು ವದನಮಂಡಲದಲ್ಲಿ ವಿರಾಜಿಸುತ್ತಿರುವುದು. ಐರಾವತದ ದರ್ಶನೇಂದ್ರಿಯಗಳಂತೆ ಅವನ ನೇತ್ರಗಳು ಅತ್ಯಂತ ಸುಂದರವಾಗಿರುವುವು. ತುಟಿಗಳು ದಪ್ಪವಾಗಿದ್ದು ಬಾಯಿಯ ಹೊರಗೆ ನೇತಾಡುತ್ತಿದ್ದುವು. ಒರಟಾದ ಶರೀರದ ಮೇಲೆ ಕಾಡುಹಂದಿಯ ಮುಳ್ಳುಗಳಂತಿರುವ ರೋಮಗಳು ಎದ್ದು ನಿಂತಿರುವುವು. ಈ ಸುಂದರಾಂಗನಿಗೆ ಅಮಾತ್ಯವರ್ಯನ ಮಗಳ ಮೇಲೆ ವ್ಯಾಮೋಹವು ಬಿದ್ದಿದ್ದಿತು.

ಈ ಶಶಾಂಕ ಮಹಾಶಯನನ್ನು ಕುರಿತು ಹಲವು ಕತೆಗಳು ಆ ಕಾಲದಲ್ಲಿ ಹರಡಿದ್ದುವು. ಅವನ ದುರ್ಗಂಧ ಪರಿಪೂರ್ಣವಾದ ವೈಚಿವರಿನ ವಾಸನೆಯನ್ನು ಹೇಸಿಕೊಂಡು, ಅವನು ತಾರುಣ್ಯದಲ್ಲಿ ಮದುವೆಯಾದ ಮಡದಿಯೋರ್ವಳು ಹಿತ್ತಲಿನ ಬಾವಿಯಲ್ಲಿ ನೆಗೆದು ಯಮಲೋಕದ ದಾರಿಯನ್ನು ಹಿಡಿದಳಂತೆ. ಎರಡನೆಯ ಬಾರಿ ವಿವಾಹಮಾಡಿಕೊಳ್ಳಲು, ಆ ಅರ್ಧಾಂಗಿಯು ಅವನ ಒರಟಾದ ತುಟಿಗಳ ಚುಂಬನಕ್ಕೆ ಹೇಸಿಕೊಂಡು, ಯಾವನೋ ಒಬ್ಬ ಆಳುಮಗನೊಡನೆ ಫರಾರಿಯಾದಳು ಈ ಮಹಾಶಯನು ಓವ್ಮತ್ತಾದವನಿತೆಯ ಬಳಿಗೆ ತೆರಳಲು, ಆ ನಾರಿಯು ಈ ಮಹಾರಾಯನ ಹಣದ

ಗಂಟನ್ನು ತಿಪ್ಪೆಗೆ ಎಸೆಯಲಿ; ಹಂದಿಗೆ ಇಲ್ಲಿ ಸ್ಥಳವಿಲ್ಲ, ಎಂದು ನುಡಿದು, ಅರ್ಧಚಂದ್ರ ಪ್ರಯೋಗವನ್ನು ಮಾಡಿ ಮನೆಯ ಹೊರಗಿನ ದಾರಿಯನ್ನು ತೋರಿಸಿಕೊಟ್ಟಳಂತೆ ಈ ಎಲ್ಲ ಕತೆಗಳು ಅವನ ಸೌಂದರ್ಯ, ರೂಪರಾಶಿ, ರಸಿಕತೆ ಇವುಗಳ ಪರಿಚಯಗಳನ್ನು ನಿಮಗೆ ಮಾಡಿಕೊಡಬಹುದು.

ಈ ನರಪ್ರಾಣಿಯ ಮೇಲೆ ಭಾಗ್ಯದೇವತೆಯು ತನ್ನ ವರದ ಹಸ್ತವನ್ನಿಟ್ಟಿದ್ದಳು. ಈ ಅತ್ಯಂತ ಅಭಾಸಪರಿಪೂರ್ಣ ಮನುಷ್ಯನು ರಮಾದೇವಿಯ ಕೃಪಾಕಟಾಕ್ಷ ವೀಕ್ಷಣಕ್ಕೆ ಪಾತ್ರೀಭವಿಸಿ, ಭಾಗ್ಯದೇವತೆಯ ನಿವಾಸಸ್ಥಾನವೇ ಅವನಾಗಿದ್ದನು. ಚಿನ್ನದ ಹೊಳೆಯು ಆ ಬಡಕಲು ಮನುಷ್ಯನಲ್ಲಿ ನದಿಯಾಗಿ ಹರಿಯುತ್ತಲಿತ್ತು. ಕುಳಿಂದ ನಗರದ ಶ್ರೇಷ್ಠಿಗಳಲ್ಲಿ ಅಗ್ರಸ್ಥಾನವನ್ನು ಭಾಗ್ಯದೇವತೆಯು ಅವನಿಗೆ ದಯಪಾಲಿಸಿದ್ದಳು. ಧನಸಂಪನ್ನನಾಗಿದ್ದುದರಿಂದ ನಾಡಿನಲ್ಲಿ ಅವನಿಗೆ ಮಾನ್ಯತೆಯು ಲಭಿಸಿದ್ದಿತು ಹಲವು ಮಾನ್ಯರೂ ಇವನ ಆಶ್ರಯವನ್ನು ಮರೆಹೊಗುವಂತೆ ಅವನ ಭಾಗ್ಯಲಕ್ಷ್ಮಿಯು ಪ್ರೇರಿಪಿಸುತ್ತಲಿದ್ದಳು. ಕುಂತಳದೇಶದ ಅಮಾತ್ಯಶ್ರೇಷ್ಠನಾದ ದುಷ್ಟಬುದ್ಧಿಯಾದರೂ ಧನದ ಆವಶ್ಯಕ್ಕಾಗಿ ಈ ಅಸಭ್ಯಜೀವಿಯನ್ನು ಶರಣು ಹೊಂದಬೇಕಾಗಿ ಬಂದಿತು

ಶಶಾಂಕ ಮಹಾಶಯನಿಗೆ ಈಗ ನಲವತ್ತು ವರ್ಷ ಪ್ರಾಯವಿರಬಹುದು; ಅವನಿಗೆ ಹತ್ತಿರದ ಬಂಧು-ಬಳಗದವರು ಯಾರೂ ಇರಲಿಲ್ಲ ದೂರದ ಒಬ್ಬನೆಂಟನಾದ ಬಾಲಕನೇ ಶಶಾಂಕನ ಅಪಾರವಾದ ಸಂಪತ್ತುಸಾಗರಕ್ಕೆ ಉತ್ತರಾಧಿಕಾರಿಯಾಗಿದ್ದನು. ಅವನ ಸಹಧರ್ಮಿಣಿಯಾಗಿ ನಿಲ್ಲಲು ಯಾವ ಮಹಿಳೆಯೂ ಒಪ್ಪುತ್ತಿರಲಿಲ್ಲ ಅವನ ಹಣೆಯಲ್ಲಿ ದಾಂಪತ್ಯ ಜೀವನದ ಸುಖವನ್ನು ಸವಿಯಲು ವಿಧಾತನು ಬರೆದಿಲ್ಲವೆಂಬುದಕ್ಕೆ ಅವನ ಮೊದಲಿನ ಎರಡು ಮಂದಿ ಮಡದಿಯರ ವಿಯೋಗಗಳೇ ಸಾಕ್ಷಿಗಳಾಗಿದ್ದವು; ಆದರೆ ತನ್ನ ಹತವಿಧಿಯನ್ನು ಚಿಂತಿಸದೆ, ಚಿತ್ತಶಾಂತಿಯನ್ನು ತಾಳುವ ಸ್ವಭಾವವು ಶಶಾಂಕನಿಗಿರಲಿಲ್ಲ ದಾಂಪತ್ಯಜೀವನದ ರಸವನ್ನು ಹೀರಬೇಕೆಂಬ ಪ್ರಬಲವಾದ ಹಂಬಲವು ಅವನ ಎದೆಯಲ್ಲಿ ಸದಾ ಕುದಿಯುತ್ತಲಿತ್ತು. ಹಲವು ಸ್ವಪ್ನಸಾಧನಗಳನ್ನು ರಚಿಸುತ್ತ, ಅವನು ತನ್ನ ಮನಸ್ಸಿನಲ್ಲಿ ಮಂಡಿಗೆಯನ್ನು ತಿನ್ನುತ್ತಲಿದ್ದನು.

ಹೀಗಿರುವ ಆಗಿನ ಸಂದರ್ಭದಲ್ಲಿ ಕುಂತಳ ಸಮ್ರಾಜ್ಯದ ಅಮಾತ್ಯನಿಗೆ ೧೨ ಲಕ್ಷ ವರಗಳ ಆವಶ್ಯಕತೆಯು ಬಿಕ್ಕಟ್ಟು ಒದಗಿದುದು. ಇಷ್ಟು ಹಣದ ಆವಶ್ಯಕತೆಯೇನೆಂಬುದನ್ನು ನಾನರಿತವನಲ್ಲ. ಕುಂತಳದ ರಾಜ್ಯಪರಿಪಾಲನೆಯ ಕೆಲಸಕ್ಕೆ ಹಣದ ಅಡಚಣೆಯಿರಲಿಲ್ಲ, ಏಕೆಂದರೆ, ರಾಜಭಂಡಾರದಲ್ಲಿ

ವಿಪುಲವಾದ ಧನವು ತುಂಬಿದ್ದಿತು. ಆದುದರಿಂದ ಅದು ಮಂತ್ರಿಯ ಸ್ವಂತ ಆವಶ್ಯಕ್ಕಾಗಿಯಾಗಿದ್ದಿತೆಂದು ಹೇಳಬಹುದು. ಇಷ್ಟು ಅಪಾರವಾದ ದ್ರವ್ಯವನ್ನು ಸಾಲಕೊಡಲು ಶಶಾಂಕಶೇಖರನಿಗಲ್ಲದೆ ಇನ್ನಾರಿಗೂ ಸಾಧ್ಯವಿರಲಿಲ್ಲ. ಆದುದರಿಂದಲೇ ದುಷ್ಟಬುದ್ಧಿಯು ಈ ನರಪಿಶಾಚದ ಚರಣತಲಗಳನ್ನು ಆಶ್ರಯಿಸಬೇಕಾಗಿ ಬಂದಿತು

ಶಶಾಂಕನ ಸೂಚನೆಗಳನ್ನು ಕೇಳಿ ಅಮಾತ್ಯನು ಮೂಕನಾಗಿ ಹೋದನು; ಅವನ ವದನಮಂಡಲದಿಂದ ನುಡಿಗಳು ಹೊರಬೀಳಲಿಲ್ಲ. ಈ ನರಪಿಶಾಚಕ್ಕೆ, ಈ ವೇತಾಳ ಸ್ವರೂಪನಿಗೆ, ತನ್ನ ಮುದ್ದುಗೂಸು ವಿಷಯಾ ಕುಮಾರಿಯನ್ನು ಲಗ್ನಮಾಡಿಕೊಡುವುದೆಂದು ವಿಚಾರಿಸುವಾಗ, ಮಂತ್ರಿವರ್ಯನ ನೇತ್ರರು ಹೆಪ್ಪುಗಟ್ಟತೊಡಗಿತು. ತನ್ನ ಅತಿಕಾಂಕ್ಷೆಯನ್ನು ಸಫಲಮಾಡುವದಕ್ಕಾಗಿ ನಿಷ್ಕಲಂಕಳೂ, ಪಾವನಸ್ವರೂಪಳೂ ಆದ ತನ್ನ ನಂದಿನಿಯನ್ನು ಬಲಿಯನ್ನಾಗಿ ನೀಡಬೇಕೆಂದು ನೆನೆಯುವಾಗ, ಆ ಪಿತೃಹೃದಯವು ಅದೆಷ್ಟು ಕಠಿಣವಾಗಿದ್ದರೂ, ಆ ರಾಜ್ಯತಂತ್ರಜ್ಞನ ಮನೋನಭವು ಅದೆಷ್ಟು ಅತ್ಯಾಗ್ರಹದ ಮೇಘರಾಶಿಗಳಿಂದ ನಿಬಿಡವಾಗಿದ್ದರೂ ಅದೊಂದು ಬಾರಿ ಮಿಡುಕದೆ ಇರಲಿಲ್ಲ. ತಾನು ರಚಿಸಬಯಸುತ್ತಿರುವ ಸುಖದ ಗೋ-ಪುರವು ತನ್ನ ಮಗಳ ನೇತ್ರರಿನಿಂದ ರಚಿಸಬೇಕಾಗಿ ಬಂದರೆ, ಆ ಕೋಟೆಯು ಎತ್ನ ಹೃದಯಕ್ಕೆ ಯಾವ ಶಾಂತಿಯನ್ನು ತಾನೇ ನೀಡುವುದು? ಮುಂದಕ್ಕೆ ಹಳ್ಳ, ಹಿಂದಕ್ಕೆ ಬೆಂಕಿ ಎಂಬ ಗಾದೆಯಂತೆಯಾಯಿತು ದುಷ್ಟಬುದ್ಧಿಯ ಆಗಲಿನ ಪರಿಸ್ಥಿತಿಯು! ತಾನು ಇದುವರೆಗೆ ಹಿಡಿದಿದ್ದ ದಾರಿಯನ್ನು ಪರಿತ್ಯಜಿಸಿ, ಇದ್ದುದರಲ್ಲಿ ತೃಪ್ತಿಪಡಲು ಆ ಶಾಸನತಂತ್ರಜ್ಞನ ಮನಸ್ಸು ಒಡಂಬಡಲಿಲ್ಲ. ಅದರಂತೆಯೇ ಆ ಎದೆಯು ತನ್ನ ಅಧಿಕಾರ ಹಾಗು ಪರಾಕ್ರಮ ಲಾಲಸೆಗಳ ಸಂತೃಪ್ತಿಗಾಗಿ ಮುದ್ದುಗೂಸನ್ನು ಬಲಿಯರ್ಪಿಸಲು ಒಪ್ಪಲಿಲ್ಲ. ಅವನ ಮನಸ್ಸು ಕುಂತಳ ದೇಶದ ಸರ್ವಾಧಿಕಾರಿಯೇ ತಾನಾಗಿ, ತನ್ನ ದರ್ಪವನ್ನು ಸರ್ವತ್ರ ಹರಡುತ್ತಲಿರುವ ಕನಸನ್ನು ದರ್ಶಿಸುತ್ತಲಿದ್ದಿತು. ಅವನ ಹೃದಯವು ಕೇವಲ ಬಿಸಿಲುಗುದುರೆಯನ್ನು ಹಿಡಿಯುವ ಹಂಬಲದಲ್ಲಿ ವಿನಾಶವೆಂಬ ಕಗ್ಗತ್ತಲೆಯ ಕೂಪದ ಅಂತರಾಳಕ್ಕೆ ಹೆತ್ತಕೂಸನ್ನು ದೂಡದಿರು ಎಂದು ನುಡಿಯುತ್ತಲಿದ್ದಿತು. ಹೊನ್ನಿನ ಆಶೆಯು ಅವನು ಪೈಶಾಚಿಕತೆಯ ದಾರಿಯನ್ನು ಹಿಡಿಯಲು ಪ್ರೇರೇಪಿಸುತ್ತಲಿದ್ದಿತು. ಮಗಳ ಮೇಲಿನ ಪ್ರೇಮವು ಕತ್ತಲೆಯಿಂದ ಕೂಡಿದ ಆ ಕಗ್ಗವಿಯಲ್ಲಿ ಒಂದು ಚಿಕ್ಕ ಬೆಳಕನ್ನು ತೋರುತ್ತಲಿದ್ದಿತು.

ಅಮಾತ್ಯನ ಮನಸ್ಸು ವಿಚಾರಗಳ ಆಲೋಚನೆಗಳ ತುಮುಲ ಯುದ್ಧದ ರಣಭೂಮಿಯಾಗಿ ಪರಿಣಮಿಸಿತು. ಅತಿಕಾಂಕ್ಷೆ ಮತ್ತು ಮಗಳ ಮೇಲಿನ ಪ್ರೇಮ, ಇವುಗಳು ಅತ್ಯಂತ ಭಯಂಕರವಾದ ರೀತಿಯಲ್ಲಿ ಅವನ ಮನಸ್ಸಿನಲ್ಲಿ ಕಾದಾಡಿದುವು. ಪೈಶಾಚಿಕತನದ ಅಧಿಕಾರಲಾಲಸೆಯೇ, ಅತಿಕಾಂಕ್ಷೆಯೇ ಅಂತ್ಯದಲ್ಲಿ ವಿಜಯವನ್ನು ಹೊಂದಿದುವು. ಅವನ ಎದೆಯಲ್ಲಿ ಅಡಗಿಕೊಂಡಿರುವ ಅತ್ಯಾಗ್ರಹ ರಾಕ್ಷಸನು "ಮಗಳನ್ನು ಬಲಿಯಾಗಿ ನೀಡಲು ಹಿಂಜರಿಯದಿರು; ಸುಖದ ಗೋಪುರವನ್ನು ಹಾಳು ಮಾಡಬೇಡ!" ಎಂದು ನುಡಿದನು.

ಬಹು ಸಮಯದವರೆಗೆ ಆ ಕೋಣೆಯಲ್ಲಿ ಮೌನವೇ ನೆಲೆಸಿತು; ವ್ಯಾಪಾರಿಯು ದುಷ್ಟಬುದ್ಧಿಯ ಮೊಗವನ್ನು ನೋಡಿ ಅವನ ಮನಸ್ಸಿನಲ್ಲಿ ನಡೆಯುತ್ತಿರುವ ವಿಚಾರಸಂದೋಹಗಳ ಮಲ್ಲಯುದ್ಧವನ್ನು ಊಹಿಸಿ ತಿಳಿದುಕೊಂಡನು. ಶಶಾಂಕಶೇಖರನು ದುಷ್ಟಬುದ್ಧಿಯು ಯಾವ ನಿರ್ಧರಕ್ಕೆ ಬರುವನೆಂದು ತಿಳಿಯಲು ಉತ್ಸುಕನಾಗಿದ್ದನು. ಅವನು ಅಮಾತ್ಯನಿಗೆ ಹಣದ ಆವಶ್ಯಕತೆಯು ಅನಿವಾರ್ಯವಾದುದರಿಂದ ತನ್ನ ಸಲಹೆಗೆ ಒಪ್ಪುವನೆಂದು ತಿಳಿದಿದ್ದನು; ಆದರೂ ಮಗಳನ್ನು ತನ್ನಂಥ ಕುರೂಪಿಗೆ ಕೊಟ್ಟು ಅವಳ ಬಾಳುವೆಯನ್ನು ಹಾಳು ಮಾಡುವಷ್ಟು ಕ್ರೂರಬುದ್ಧಿಯವನು ಅಮಾತ್ಯನೆಂದು ಅವನು ನಂಬಲಿಲ್ಲ ಆದುದರಿಂದ ದುಷ್ಟಬುದ್ಧಿಯ ಅಭಿಪ್ರಾಯವನ್ನು ಅರಿತುಕೊಳ್ಳಲು ವ್ಯಾಪಾರಿಯು ಕುತೂಹಲ ಮನಸ್ಕನಾಗಿ ಕಾದು ಕುಳಿತನು.

"ಅಮಾತ್ಯರೇ! ಒಂದು ಶಿಲಾಪ್ರತಿಮೆಯಂತೆ ಕುಳಿತು ಅದೇನು ಆಲೋಚನಾಮಗ್ನರಾಗಿರುವಿರಿ?" ಎಂದು ವ್ಯಾಪಾರಿಯೇ ಆ ಪ್ರದೇಶದಲ್ಲಿ ಹಬ್ಬಿದ್ದ ಮೌನತೆಯ ವಾತಾವರಣವನ್ನು ಭೇದಿಸಿದನು. "ನನ್ನ ಸಲಹೆಯು ತಮ್ಮ ಚಿತ್ತಕ್ಕೆ ರುಚಿಸಲಿಲ್ಲವೆಂದು ತೋರುತ್ತದೆ!"

"ವ್ಯಾಪಾರಿಗಳೇ! ನಿಮ್ಮ ಕರಾರು ಅತ್ಯಂತ ಸಂಕಟದಾಯಕವಾದುದು" ಎಂದು ಅಮಾತ್ಯನು ಆಲೋಚನಾಮಗ್ನನಾಗಿ ಹೇಳಿದನು:—"ನನ್ನ ಮಗಳ ಇಷ್ಟಕ್ಕೆ ವಿರುದ್ಧವಾದ ಕಾರ್ಯವು ಆದಾದರೆ, ಅವಳ ಬದುಕು ಹಾಳಾಗುವುದಲ್ಲ! ಎಂದು ನೆನೆಯುತ್ತಲಿದ್ದೇನೆ."

"ಅಮಾತ್ಯರೇ, ತಾವು ಇಷ್ಟು ಜ್ಞಾನಶಾಲಿಗಳಾದರೂ ಹೆಂಗಸರನ್ನು ಅವರ ಇಷ್ಟದಂತೆ ವರ್ತಿಸಲು ಬಿಡುವುದು ಅನುಚಿತವೆಂಬುದು ತಮಗೆ ಹೊಳೆಯದುದನ್ನು ಕಂಡು ನಾನು ಆಶ್ಚರ್ಯಪಡುತ್ತೇನೆ."

"ವಿವಾಹಾದಿ ಕಾರ್ಯಗಳಲ್ಲಿ ಹಲವು ಸಾರೆ ಹೆಣ್ಣುಮಕ್ಕಳ ಸ್ವಂತ ಅಭಿಪ್ರಾಯಗಳನ್ನು ಸಹ ನೋಡಬೇಕಾಗಿ ಬರುವದು; ಇಲ್ಲದಿದ್ದರೆ ಅವರ ಬದುಕುಗಳು ವಿಷಾದಾಂತ ನಾಟಕಗಳಾಗಿ ಪರಿಣಮಿಸುವುವು, ಎಂಬುದು ನನ್ನ ಅನುಭವದಿಂದ ವೇದ್ಯವಾದ ಸಂಗತಿಯಾಗಿದೆ.

'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಮನುವಾಕ್ಯವನ್ನು ಪ್ರಮಾಣವಾಗಿ ತೆಗೆದುಕೊಂಡ ಶಶಾಂಕಶೇಖರನು: "ಹೆಂಗಸರನ್ನು ಅವರ ಇಷ್ಟದಂತೆ ವರ್ತಿಸಲು ಬಿಡುವದು ವಿನಾಶದ ಪಥವು" ಎಂದು ನುಡಿದನು

ಈ ಧನಿಕನೊಡನೆ ಅನವಶ್ಯಕವಾಗಿ ವಾದಗಳನ್ನು ಹೂಡುವುದು ಕಾಲಹರಣೆಯ ಮಾರ್ಗವೆಂದು ತಿಳಿದುದರಿಂದ, ದುಷ್ಟಬುದ್ಧಿಯು ತನ್ನ ಮಾತುಗಳ ಸರಣಿಯನ್ನು ಬೇರೆ ಕಡೆಗೆ ತಿರುಗಿಸಲು ಪ್ರಯತ್ನಿಸುತ್ತ ಹೀಗೆ ಹೇಳಿದನು: "ಆದರೂ ಮಗಳ ಸೌಖ್ಯದ ಕಡೆಗೆ ತಂದೆಯು ತನ್ನ ದೃಷ್ಟಿಯನ್ನಿಡುವುದು ಸ್ವಾಭಾವಿಕವಲ್ಲವೆ?" ಎಂಬುದಾಗಿ.

"ಆದರೆ ಸ್ವಂತ ಅಡಚಣೆಗಳನ್ನು ನಿವಾರಿಸುವದಕ್ಕಾಗಿ ಹಲವು ಸಾರೆ ಮನುಷ್ಯನು ತನ್ನ ಸಂತಾನಗಳ ಬಾಳಿನಲ್ಲಿ ಬೂದಿಯನ್ನು ಎರಚಬೇಕಾಗಿ ಬರುವದು" ಎಂದನು ವ್ಯಾಪಾರಿಯು. 'ನನ್ನ ಪಾಣಿಗ್ರಹಣದಿಂದ ತಮ್ಮ ಕುಮಾರಿಗೆ ಯಾವ ಸಂಕಟವೂ ಒದಗಲಾರದು. ಆಕೆಯ ಬಯಕೆ-ಹಾರೈಕೆಗಳನ್ನು ಪೂರ್ತಿಗೊಳಿಸಲು ನಾನು ಸನ್ನದ್ಧನಾಗಿರುವೆನು.'

"ನೀವು ಉದಾರಮತಿಗಳೆಂಬುದನ್ನು ನಾನು ಬಲ್ಲೆನು; ಆದರೆ ವಿಷಯಾಕುಮಾರಿಯ ಅಭಿಪ್ರಾಯವು ಹೇಗಿರುವದೋ?"

"ನೋಡಿದಿರಾ, ಅಮಾತ್ಯರೆ! ನೀವು ಪುನಃ ದಾರಿಯನ್ನು ತಪ್ಪಿ ನಡೆದಿರಿ" ಎಂದು ನುಡಿದನು ಶಶಾಂಕನು. "ವಿವಾಹಾದಿ ಕಾರ್ಯಗಳಲ್ಲಿ ಹೆಣ್ಣುಮಕ್ಕಳ ಅಭಿಪ್ರಾಯಗಳನ್ನು ನೋಡಬೇಕಾದ ಆವಶ್ಯಕತೆಯೇನಿದೆ? ಅವರ ಕಾರ್ಯಗಳನ್ನು ನಿರ್ಧರಿಸುವ ಅಧಿಕಾರವು ಅವರನ್ನು ಹೆತ್ತು ಸಲಹಿದ ತಾಯ್ತಂದೆಗಳದಲ್ಲವೆ? ನೀವು ನನ್ನ ನಿರ್ಧರದಂತೆ ಕಾರ್ಯವನ್ನು ನಡೆಯಿಸಿರಿ; ಅನಂತರ ಎಲ್ಲವೂ ಸರಿಹೋಗುವದು. ಒಂದುವೇಳೆ ನಾನು ಯೌವನವನ್ನು ದಾಟಿದುದರಿಂದಲೂ ರೂಪವಿಲ್ಲದವನಾಗಿರುವದರಿಂದಲೂ ತಮ್ಮ ಮನಸ್ಸು ಹಿಂಜರಿಯುತ್ತಿರಬಹುದು. ಅಮಾತ್ಯರೇ, ದಾಂಪತ್ಯಜೀವನದಲ್ಲಿ ಯೌವನ, ರೂಪು ಇವುಗಳು ಪ್ರಾಮುಖ್ಯವಲ್ಲ; ಹೃದಯ ಹಾಗು ಗುಣಗಳು ಪ್ರಾಮುಖ್ಯವಾಗಿವೆ."

ಎರಡು ಹೆಣ್ಣುಗಳ ಬಾಳುವೆಯನ್ನು ಮಣ್ಣುಗೂಡಿಸಿದ ಈ ನರಪಿಶಾ

ಚಿಯ ದಾಂಪತ್ಯಜೀವನವನ್ನು ಕುರಿತುಳ್ಳ ವ್ಯಾಖ್ಯಾನವನ್ನು-ದುಷ್ಟಬುದ್ಧಿಯಲ್ಲದೆ ಇತರರು ಯಾರಾದರೂ ಅವನ ಸ್ಥಾನದಲ್ಲಿ ನಿಂತಿದ್ದರೆ ಅವರು ಅದನ್ನು-ಶ್ರಾವಿಸಿ ಆಶ್ಚರ್ಯಪರತಂತ್ರರಾಗಿ ಮೂಗಿನ ಮೇಲೆ ತಮ್ಮ ಬೆರಳನ್ನು ಇಡುತ್ತಿದ್ದರು; ಇಲ್ಲವೆ ದೊಡ್ಡದಾದ ಒಂದು ನಗುವಿನ ಪ್ರವಾಹದಲ್ಲಿ ಸಿಕ್ಕಿ ಬೀಳುತ್ತಲಿದ್ದರು.

"ತಮ್ಮ ಮಾತುಗಳು ಅಕ್ಷರಶಃ ವಾಸ್ತವವೆಂದು ನಾನು ನಂಬುವೆನು; ಆದರೆ ತಂದೆಯಾದವನು ಮಗಳ ಹಿತವನ್ನು ಚಿಂತಿಸುವದು ಸ್ವಾಭಾವಿಕವು." ಎಂದನು ಅಮಾತ್ಯನು.

"ನಾನು ನನ್ನ ನಿಶ್ಚಯವನ್ನು ತಮಗೆ ಸ್ಪಷ್ಟವಾಗಿ ತಿಳಿಸಿಬಿಡುವೆನು; ತಮಗೆ ಹಣದ ಆವಶ್ಯಕತೆಯಿದ್ದರೆ, ನಾನು ಹೇಳುವ ಸಲಹೆಗೆ ತಾವು ಒಪ್ಪಬೇಕಾಗುವದು. ತಮ್ಮ ಮಗಳ ಮೇಲಿನ ವ್ಯಾಮೋಹದಿಂದ ಆಕೆಯನ್ನು ನನಗೆ ಲಗ್ನಮಾಡಿ ಕೊಡಲು ತಾವು ಹಿಂದುಮುಂದು ನೋಡುವುದಾದರೆ, ನನ್ನಿಂದ ಧನಸಹಾಯವನ್ನು ನಿರೀಕ್ಷಿಸುವುದು ವ್ಯರ್ಥವಾದ ಕೆಲಸವಾಗಿದೆ. ತಾವು ಯಾವ ರೀತಿಯಲ್ಲಿ ನನ್ನಿಂದ ಒಂದು ಸಹಾಯವನ್ನು ನಿರೀಕ್ಷಿಸುತ್ತಲಿರುವಿರೋ, ಅದರಂತೆಯೇ ನಾನಾದರೂ ತಮ್ಮಿಂದ ಒಂದು ಸಹಾಯವನ್ನು ಬಯಸಲು ತಾವು ಇಷ್ಟು ದುಗುಡವನ್ನು ಹೊಂದುವುದೇಕೆ?"

ಅಮಾತ್ಯನಿಗೆ ಶಶಾಂಕನ ಈ ನುಡಿಗಳು ಅತ್ಯಂತ ಕಠೋರವಾಗಿ ತೋರಿದುವು; ಇತರ ಸಂದರ್ಭಗಳಲ್ಲಿಯಾಗಿದ್ದರೆ ವ್ಯಾಪಾರಿಯು ಧಿಃಕ್ಕಾರಪರಿಪೂರ್ಣವಾದ ನುಡಿಗಳಿಗೆ ದುಷ್ಟಬುದ್ಧಿಯು ತಕ್ಕದಾದ ಒಂದು ಪ್ರತೀಕಾರವನ್ನು ಮಾಡದೆ ಇರುತ್ತಿರಲಿಲ್ಲ; ಆದರೆ ಈಗ ಅದಕ್ಕೆ ಅವಕಾಶವಿಲ್ಲ. ಆ ಶ್ರೇಷ್ಠಿಯು ಅಮಾತ್ಯನು ತನ್ನ ಬಲೆಯಲ್ಲಿ ಬಿದ್ದಿರುವನೆಂಬುದನ್ನು ಚೆನ್ನಾಗಿ ಅರಿತಿದ್ದನು. ಆದುದರಿಂದ ಅಮಾತ್ಯನನ್ನು ಅವನು ತನ್ನ ಸ್ಪಷ್ಟವಾದ ನುಡಿಗಳಿಂದ ಆಘಾತಗೊಳಿಸಲು ಸ್ವಲ್ಪವೂ ಹಿಂಜರಿಯಲಿಲ್ಲ ತನ್ನ ವಿರೂಪವನ್ನು ದರ್ಶಿಸಿ, ಅಪಹಾಸ್ಯಗೈದವರನ್ನು ಹಣದ ಅಡಚಣೆಯಿಂದ ತನ್ನನ್ನು ಶರಣು ಹೊಂದುವ ವೇಳೆಯಲ್ಲಿ ಅವರನ್ನು ಪೀಡಿಸುವದು ಶಶಾಂಕನಿಗೆ ಒಂದು ವಿನೋದವಾಗಿದ್ದಿತು. ದುಷ್ಟಬುದ್ಧಿಯು ಇತರ ಸಂದರ್ಭಗಳಲ್ಲಾಗಿದ್ದರೆ, ಆ ವರ್ತಕನ ಬಾಯಿಯಲ್ಲಿ ಆನೆಯ ಕೋರೆ ಹಲ್ಲುಗಳಂತೆ ಶೋಭಿಸುತ್ತಲಿರುವ ದಂತಗಳನ್ನು ಕೀಳಿಸುತ್ತಲಿದ್ದನು.

ದುಷ್ಟಬುದ್ಧಿಯು ತನ್ನ ಮನಸ್ಸಿನಲ್ಲಿಯೇ ವಿಚಾರಿಸಿದನು. ಅವನ ಎದೆಯಲ್ಲಿ ತಾಂಡವವಾಡುತ್ತಲಿರುವ ಅತಿಕಾಂಕ್ಷೆಯು ಅವನನ್ನು ಈ

ಒಪ್ಪಂದದಲ್ಲಿ ಭಾಗವನ್ನು ವಹಿಸುವಂತೆ ಪ್ರೇರೇಪಿಸಿತು. ಅವನ ಮುದ್ದು ಗೂಸನ್ನು ಆ ಬೇತಾಳ ಸ್ವರೂಪನಿಗೆ ಬಲಿಯಾಗಿ ನೀಡಲು ಅಮಾತ್ಯನಲ್ಲಿ ತುಂಬಿರುವ ಸ್ವಾರ್ಥತೆಯು ನುಡಿದಿತು.

"ವ್ಯಾಪಾರಿಗಳೇ! ನಿಮ್ಮ ವ್ಯವಸ್ಥೆಗಳಿಗೆ ನಾನು ಒಪ್ಪಿದೆನು!" ಎಂಬ ನುಡಿಗಳು ಅಮಾತ್ಯನ ವದನದಿಂದ ಹೊರಬಿದ್ದುವು.

"ಮಂತ್ರಿಪುಂಗವರೇ, ತಾವು ವಿವೇಕಿಗಳಾದುದರಿಂದ ನನ್ನ ಸಲಹೆ ಯನ್ನು ತಾವು ಸ್ವೀಕರಿಸುವಿರಿ ಎಂಬುದನ್ನು ನಾನು ಊಹಿಸಿದ್ದೆನು" ಎಂದು ಮಂದಹಾಸವನ್ನು ತನ್ನ ಮೊಗದಲ್ಲಿ ಬೀರುತ್ತ, ಶಶಾಂಕನು ಆಹ್ಲಾದಭರಿತ ನಾಗಿ ನುಡಿದನು. "ತಮಗೆ ಅವಶ್ಯವಿರುವಾಗ ಈ ೧೨ ಲಕ್ಷ ವರಹಗಳನ್ನು ತಾವು ಒಯ್ಯಬಹುದು."

"ನಾನು ಕುಂತಳಕ್ಕೆ ತೆರಳಿ ನನ್ನ ದೂತರ ವಶದಲ್ಲಿ ಓಲೆಯನ್ನು ಕೊಟ್ಟು ಕಳುಹಿಸುವೆನು."

"ಹಾಗೆಯೇ ಆಗಲಿ! ವಿವಾಹಕಾರ್ಯವು ಯಾವಾಗ ಎಂಬುದನ್ನು ನಿರ್ಧರಿಸುವುದುತ್ತಮವಲ್ಲವೇ?" ಎಂದನು ವ್ಯಾಪಾರಿಯು.

"ಅದಕ್ಕೆ ಅವಸರವೇನು? ಇದು ಮಾಗಿಯಕಾಲ; ಈ ಋತುವು ಗವಿ ಸದೆ ವಿವಾಹಾದಿ ಶುಭ ಕಾರ್ಯಗಳಿಗೆ ಒಳ್ಳೆಯ ಮುಹೂರ್ತವು ಸಿಗದೆಂದು ಜೋತಿಷ್ಕರ ಅಭಿಪ್ರಾಯವಾಗಿದೆ."

"ಆದರೆ ಶುಭಸ್ಯ ಶೀಘ್ರಂ!"

"ಅದು ಅಹುದು; ಬರುವ ಚೈತ್ರಮಾಸದ ಒಂದು ಶುಭ ಮುಹೂರ್ತ ದಲ್ಲಿ ವಿವಾಹವನ್ನು ಜರುಗಿಸೋಣ."

"ಆದರೆ...."

"ಆದರೇನು ಶ್ರೇಷ್ಠಿಗಳೇ?"

"ತಾವು ಆಡಿದ ಮಾತುಗಳಿಗೆ ತಪ್ಪಬಾರದೆಂಬುದೇ ನನ್ನ ಪ್ರಾರ್ಥ ನೆಯು!"

"ಮಹಾಶಯರೆ! ಕುಂತಳದೇಶದ ಅಮಾತ್ಯನು ಎಂದಿಗೂ ಆಡಿದ ಮಾತುಗಳಿಗೆ ತಪ್ಪಿನಡೆಯನು. ದುಷ್ಟಬುದ್ಧಿಯ ವಚನಗಳಿಗೆ ಆಕಾಶದಲ್ಲಿ ಪ್ರಕಾಶಿಸುತ್ತಿರುವ ಭಾಸ್ಕರನೇ ಸಾಕ್ಷಿಯು!"

"ತಮ್ಮ ನುಡಿಗಳಲ್ಲಿ ನನಗೆ ಭರವಸೆಯಿರುವುದು"

"ವಂದನೆಯು; ನಾನು ತೆರಳುವೆನು. ಓಲೆಯೊಡನೆ ಧನಕ್ಕಾಗಿ ಆಳು ಮಕ್ಕಳನ್ನು ಕಳುಹಿಸುವೆನು." ಎಂದು ಹೇಳುತ್ತ, ತಾನು ಮಂಡಿಸಿದ್ದ ರತ್ನ

ಖಚಿತ ಆಸನವನ್ನು ಬಿಟ್ಟು ದುಷ್ಟಬುದ್ಧಿಯು ತೆರಳುವುದಕ್ಕಾಗಿ ಎದ್ದು ನಿಂತನು.

"ಹಾಗೆಯೇ ಆಗಲಿ! ಪ್ರಣಾಮಗಳು. ವಚನಗಳನ್ನು ಮರೆಯದಿರಿ." ಎಂದು ಶಶಾಂಕಶೇಖರನು ವಿನಯಪೂರ್ವಕವಾಗಿ ನುಡಿದನು.

"ಎಂದಿಗಾದರೂ ಉಂಟೇ?" ಎಂದೆನ್ನುತ್ತಾ ದುಷ್ಟಬುದ್ಧಿಯು ವಣಿಕನ ನಿಲಯವನ್ನು ಪರಿತ್ಯಜಿಸಿ ದೃಷ್ಟಿಯಿಂದ ಮಾಯವಾದನು.

---

## ಈ ತರುಣನು ಯಾರು?

ಶಶಾಂಕನ ನಿಲಯವನ್ನು ಪರಿತ್ಯಜಿಸಿ ಹೊರಟ ದುಷ್ಟಬುದ್ಧಿಯು ನೆಟ್ಟಗೆ ಕುಳಿಂದಾಧೀಶನ ಸದನಕ್ಕೆ ಗಮಿಸಿದನು. ಕುಳಿಂದ ಪ್ರಾಂತ್ಯದ ಶಾಸನಕರ್ತನಾಗಿದ್ದನು ಕುಳಿಂದಕನು. ಆ ಹೆಸರಿನ ಪ್ರಾಂತ್ಯದ ಶಾಸನಾಧಿಕಾರಿಯಾದುದರಿಂದ ಅವನಿಗೆ ಆ ಹೆಸರು ಸಿದ್ಧಿಸಲಿಕ್ಕೆ ಕಾರಣವಾಗಿರಬಹುದು. ಕುಳಿಂದ ಪ್ರಾಂತ್ಯದ ಶಾಸಕನು ಕುಂತಳ ಸಾರ್ವಭೌಮನ ಮಾಂಡಲಿಕನಾಗಿದ್ದನು. ಪ್ರತಿವರ್ಷವೂ ತಪ್ಪದೆ ಪೊಗದಿಯನ್ನು ಕುಂತಳ ರಾಜಧಾನಿಗೆ ಸಲ್ಲಿಸಬೇಕಾಗಿದ್ದಿತು; ಇದಲ್ಲದೆ ಕುಳಿಂದದ ರಾಜ್ಯಶಾಸನ ಪದ್ಧತಿಯನ್ನು ಪರಿಶೋಧಿಸುವ ಅಧಿಕಾರವು ಕುಂತಳಸಾರ್ವಭೌಮನಿಗಿದ್ದಿತು.

ಕುಳಿಂದಕನ ಶಾಸನವು ಅವ್ಯವಸ್ಥಿತವಾದುದೆಂಬ ಮಾತು ಕೆಲವು ವರ್ಷಗಳ ಹಿಂದೆ ದೇಶದಲ್ಲೆಲ್ಲ ವ್ಯಾಪಿಸಿದ್ದಿತು. ರಾಜಧಾನಿಯಿಂದ ಪ್ರಧಾನ ಅಮಾತ್ಯನು ಕುಳಿಂದಕನಿಗೆ ಎಚ್ಚರಿಕೆಯ ನಿರೂಪವನ್ನು ಕಳುಹಿಸಿದ್ದನು. ಹತ್ತುವರ್ಷಗಳ ಹಿಂದೆ ಕುಳಿಂದ ಪ್ರಾಂತ್ಯದಲ್ಲಿ ಒಂದು ಬಂಡಾಯವು ಆವಿರ್ಭವಿಸಲು, ಅದನ್ನು ಮುರಿಯಲಿಕ್ಕೆ ರಾಜಧಾನಿಯಿಂದ ಸೇನಾಬಲವು ಬರಬೇಕಾಗಿ ಬಂದಿತು. ಆ ಕಾಲದಲ್ಲಿ ರಾಜ್ಯತಂತ್ರಜ್ಞರು ಕುಳಿಂದಕನನ್ನು ಅಧಿಕಾರಭ್ರಷ್ಟನನ್ನಾಗಿ ಮಾಡಿ, ದುಷ್ಟಬುದ್ಧಿಯ ಮಿತ್ರನಾದ ಶಶಾಂಕಶೇಖರನನ್ನು ಶಾಶನ ಕರ್ತನನ್ನಾಗಿ ನಿಯಮಿಸಬೇಕೆಂದು ವಿಚಾರಿಸಿದ್ದರು; ಆದರೆ ಕುಳಿಂದಕನ ಭಾಗ್ಯದೇವತೆಯ ಪ್ರಭಾವದಿಂದ ಕುಳಿಂದಕನ ಅಧಿಕಾರವು ಅವನನ್ನು ತ್ಯಜಿಸಲಿಲ್ಲ. ಇದಕ್ಕೆ ಕಾರಣವು ಕುಳಿಂದಕನಲ್ಲಿ ಕುಂತಳೇಂದ್ರನು ಇಟ್ಟಿದ್ದ ಅಪಾರವಾದ ಸ್ನೇಹವಾಗಿದ್ದಿತು. ಅಮಾತ್ಯವರ್ಯನಾದ ದುಷ್ಟಬುದ್ಧಿಯು ಮಹಾರಾಜನೊಡನೆ ಕುಳಿಂದಕನನ್ನು ಅಧಿಕಾರಭ್ರಷ್ಟನನ್ನಾಗಿ ಮಾಡುವ ಕಾರ್ಯವನ್ನು ವಿವೇಚಿಸಿದಾಗ ಕುಂತಳೇಂದ್ರನು ಈ ಪ್ರಕಾರ ಹೇಳಿದನು:

"ಕುಳಿಂದಕನು ರಾಜ್ಯತಂತ್ರಜ್ಞನಲ್ಲನೆಂಬುದು ನಿಜ; ಆದರೆ ಅವನು ಅಪ್ರತಿಮ ಪರಾಕ್ರಮಶಾಲಿಯಾಗಿರುವನೆಂಬುದನ್ನು ಎಂದಿಗೂ ಮರೆಯ ಕೂಡದು. ಕಳೆದ ಸಲ ನಮ್ಮ ಸಾಮ್ರಾಜ್ಯವನ್ನು ಶತ್ರುಗಳು ಬಂದು ಆಕ್ರಮಿಸಿದಾಗ ನಮಗೆ ವಿಜಯಶ್ರೀಯನ್ನು ಸಂಪಾದಿಸಿ ಕೊಟ್ಟದ್ದು, ಕುಳಿಂದಕನ ರಣಶಾಸ್ತ್ರಪಾಂಡಿತ್ಯವಾಗಿದೆ. ಅವನಲ್ಲ ಎಷ್ಟು ದೋಷಗಳಿದ್ದರೂ ಅವನನ್ನು ಅಧಿಕಾರಭ್ರಷ್ಟನನ್ನಾಗಿ ನಾನು ಮಾಡಲಾರೆನು. ಕುಂತಳವನ್ನು ರಕ್ಷಿಸುವುದಕ್ಕೂ ನಡೆಸುವುದಕ್ಕೂ ಅವನು ಸಮರ್ಥನಾಗಿರುವನು.

ಈ ನುಡಿಯನ್ನು ಕೇಳಿ ಅಮಾತ್ಯಶ್ರೇಷ್ಠನು ಪೆಚ್ಚಿಸಿ ಮುಖವನ್ನು ಮಾಡಿಕೊಂಡು ತಲೆತಗ್ಗಿಸಬೇಕಾಗಿ ಬಂದಿತೆಂದು ಹೇಳಬೇಕಾದುದಿಲ್ಲವಷ್ಟೆ? ದುಷ್ಟಬುದ್ಧಿಯು ಕುಳಿಂದಕನನ್ನು ಅಧಿಕಾರಭ್ರಷ್ಟನನ್ನಾಗಿ ಮಾಡಲು ಬಯಸುತ್ತಲಿದ್ದನು. ದುಷ್ಟಬುದ್ಧಿಯ ಕುತಂತ್ರಗಳಿಗೆ ಪರವಶನಾಗದ ಒಬ್ಬ ಅಧಿಕಾರಿಯು ಕುಂತಳಸಾಮ್ರಾಜ್ಯದಲ್ಲಿದ್ದರೆ, ಅವನು ಕುಳಿಂದನಾಗಿದ್ದನು. ಅಮಾತ್ಯನ ಸಾಮ-ದಾನ-ಭೇದೋಪಾಯಗಳಿಗೆ ಶಿರವನ್ನು ತಗ್ಗಿಸಿ ರಾಜದ್ರೋಹವನ್ನು ಬಗೆಯುವವನಾಗಿರಲಿಲ್ಲ; ಅಕೃತ್ರಿಮ ಸ್ವಾಮಿನಿಷ್ಠೆಯ ಅವತಾರ ಮೂರ್ತಿಯು ಅವನಾಗಿದ್ದನು. ಕುಂತಳಸಾಮ್ರಾಜ್ಯವು ಕುಳಿಂದಕನ ಬಾಹುಗಳ ಬಲದಾಶ್ರಯದಿಂದ ಸದೃಢವಾಗಿ ನಿಂತಿದ್ದಿತೆಂದು ಹೇಳಬಹುದು. ಕುಳಿಂದಕನ ಕಲಿತನ-ಪ್ರತಾಪಗಳ ವರ್ಣನೆಗಳು ಕುಂತಳದಲ್ಲಿ ಮಾತ್ರವಲ್ಲ, ಅಂಗ, ವಂಗ, ಕಲಿಂಗ ಎಂಬಿತ್ಯಾದಿ ವಿದೂರದೇಶಗಳಲ್ಲಿ ವಾಸಿಸುವ ಜನರ ಬಾಯಿಯಿಂದ ಹೊರಬೀಳುತ್ತಿರುವ ಅದ್ಭುತ ಮತ್ತು ವೀರರಸಪರಿಪೂರ್ಣತೆಗಳಾಗಿ ಪರಿಣಮಿಸಿದುವು. ಆ ಕಾಲದ ಜನರು ಯಾವನಾದರೂ ಭಯವೆಂಬುದನ್ನು ಅರಿಯದ ಶೂರನಾಗಿದ್ದರೆ ಅವನನ್ನು "ಅವನು ಒಬ್ಬ ಕುಳಿಂದಕನು" ಎಂಬ ಪದಪ್ರಯೋಗದಿಂದ ಸೂಚಿಸುತ್ತಲಿದ್ದರು.

ಕುಳಿಂದಪ್ರಾಂತವು ಪರ್ವತರಾಶಿಗಳಿಂದ ನಿಬಿಡವಾಗಿದ್ದಿತು; ಪ್ರಕೃತಿಮಾತೆಯು ಆ ಪ್ರದೇಶದಲ್ಲಿ ಮನೋಹರ ರೂಪವನ್ನು ತಾಳಿ ತನ್ನ ಮಕ್ಕಳಿಗೆ ಆನಂದವನ್ನು ನೀಡುತ್ತಲಿರುವಳು. ಗಗನವನ್ನು ಚುಂಬಿಸುವ ಉನ್ನತ ಗಿರಿಗಳ ಸಾಲುಗಳು, ಪಚ್ಚೆಯ ವರ್ಣದಿಂದ ಶೋಭಿಸುವ ವಿಪಿನಗಳು, ಅಲ್ಲಲ್ಲಿ ನಿರ್ಭಯವಾಗಿ ಸಂಚರಿಸುತ್ತಿರುವ ಹರಿಣಗಳು, ದೊಡ್ಡ ಕಲ್ಲು-ಬಂಡೆಗಳಂತೆ ಕಪ್ಪಾಗಿ ಹೊಳೆಯುತ್ತಿರುವ ವನವೇತಂಡಗಳು, ಹಿರಿದಾದ ಹುಲಿಗಳು ಇವುಗಳೆಲ್ಲ ಕುಳಿಂದಪ್ರಾಂತದಲ್ಲಿ ಸರ್ವಸಾಧಾರಣವಾಗಿ ದೃಗ್ಗೋಚರವಾಗುವ ಚಿತ್ರಗಳಾಗಿರುವವು ಆ ಪ್ರದೇಶದ ಪ್ರಕೃತಿಸ್ವಭಾವವು ಮನುಷ್ಯನನ್ನು

ಸಾಹಸಜೀವಿಯನ್ನಾಗಿ ಮಾಡುತ್ತಲಿರುವುದು. ಗಟ್ಟಿಮುಟ್ಟಾದ ಶರೀರವಿಲ್ಲದಿರುವ ಮನುಷ್ಯನು ಕುಳಿಂದ ಪ್ರಾಂತದಲ್ಲಿ ಕಾಲಯಾಪನೆಯನ್ನು ಮಾಡುವುದೆಂದರೆ, ಅತ್ಯಂತ ಪ್ರಯಾಸವಾದ ಕಾರ್ಯವೇ ಸರಿ. ಅಲ್ಲಿನ ಹಳ್ಳಿಗಳಲ್ಲಿ ಮನುಷ್ಯನು ಸದಾ ದುಷ್ಟ ಜಂತುಗಳೊಡನೆ ಹೋರಾಡಲು ಸನ್ನದ್ಧನಾಗಿರಬೇಕಾಗುತ್ತದೆ. ಒಂದು ಹಳ್ಳಿಗೂ ಇನ್ನೊಂದು ಹಳ್ಳಿಗೂ ನಡುವೆ ಅನೇಕ ಹರದಾರಿಗಳಷ್ಟು ಉದ್ದವಾದ ವಿಪಿನಗಳು ವ್ಯಾಪಿಸುತ್ತವೆ.

ಇಂಥ ಪ್ರದೇಶದಲ್ಲಿ ಹುಟ್ಟಿ ಬದುಕುವ ಜನರು ದೃಢಗಾತ್ರರೂ, ಅಪ್ರತಿಮ ಧೈರ್ಯಶಾಲಿಗಳೂ ಆಗಿರುವುದರಲ್ಲಿ ಯಾವ ಅತಿಶಯವೂ ಇರುವುದಿಲ್ಲ. ಈ ಎರಡು ಗುಣಗಳಿಲ್ಲದ ಮಾನವನು ಆ ಪ್ರದೇಶದಲ್ಲಿ ಜೀವಿಸುವಂತಿಲ್ಲ. ಅಲ್ಲಿ ವಾಸಿಸುವ ಜನರ ಮುಖಗಳಲ್ಲಿಯ ಹರ್ಷ ಮತ್ತು ಉತ್ಸಾಹ ಇವುಗಳು ಆ ಪ್ರದೇಶಕ್ಕೆ ತೆರಳುವ ಹೊಸಬನಿಗೆ ಪ್ರಥಮದೃಷ್ಟಿಯಲ್ಲಿ ಗೋಚರವಾಗುವವು. ಕಾದಾಡುವುದೆಂದರೆ, ಆ ಜನರಿಗೆ ಒಂದು ವಿನೋದದ ಆಟ ಮಾತ್ರವಾಗಿದೆ. ಅವರ ಜೀವನವೇ ಪ್ರಕೃತಿಯೊಡನೆ ನಡೆಯಿಸುತ್ತಿರುವ ಅಂತ್ಯವಿಲ್ಲದ ಒಂದು ಕದನಮಾತ್ರವಾಗಿದೆ, ಎಂದು ಹೇಳಬಹುದು. ಪ್ರತಿಯೊಬ್ಬನೂ ಕರದಲ್ಲಿ ಕತ್ತಿಯನ್ನು ಹಿಡಿದುಕೊಂಡು, ತನ್ನನ್ನೂ ತನ್ನ ದನಕರುಗಳನ್ನೂ ವನದ ಹಿಂಸ್ರಜಂತುಗಳ ಬಾಯಿಗಳಿಂದ ರಕ್ಷಿಸಲು ಕಾದಾಟಕ್ಕೆ ಸಿದ್ಧನಾಗಿರುವುದು ಆ ಪ್ರದೇಶಗಳಿಗೆ ಗಮಿಸಿದ ಯಾತ್ರಿಕನ ದೃಷ್ಟಿಗಳಿಗೆ ಗೋಚರವಾಗುವ ಒಂದು ನೋಟನಾಗಿದೆ.

ಒರಟು ಸ್ವಭಾವದ ಜನರು ಕುಳಿಂದ ವಾಸಿಗಳು; ಆದರೆ ಅವರ ಔದಾರ್ಯಕ್ಕೂ ಹೆಗ್ಗಳಿಕೆಗೂ ಮಿತಿಯಿಲ್ಲ. ಸುಲಭವೂ ಗಂಡಾಂತಶೂನ್ಯವೂ ಆದ ಬಾಳು ಹೆಂಗಸರಿಗೆ ಉಚಿತವಾದುದೆಂದು ಅವರ ಅಭಿಪ್ರಾಯ. ಗಂಡಸಾದವನು ತನ್ನ ಗಂಡಸುತನವನ್ನು ಯಾವುದಾದರೂ ಒಂದು ಧೀರ ಕೃತ್ಯದಿಂದ ಪ್ರದರ್ಶಿಸಬೇಕೆಂಬುದೇ ಅವರ ನಿರ್ಧರವು! ಈ ನಿವಾಸಿಗಳು ನೆರೆ-ಹೊರೆಯ ಪ್ರಾಂತಗಳ ಜನರು ತಮ್ಮಲ್ಲಿಗೆ ಬಂದಾಗ, "ಹತ್ತಿರ ದೂರಿನ ಹೆಂಗಸರು ಬಂದರೆ"ಂದು ಅವರನ್ನು ಉಪಹಾಸ ಮಾಡುವುದು ಅಲ್ಲಿಯ ಜನರ ಒಂದು ಅಭ್ಯಾಸವು.

ಒಂದು ಮಾತಿನಲ್ಲಿ ಹೇಳುವುದಾದರೆ, ಈ ಜನರ ಸ್ವಭಾವಕ್ಕೆ ತಕ್ಕ ಪಾಲಕನಾಗಿದ್ದನು ಕುಳಿಂದಕನು. ಅವರ ಧೈರ್ಯ-ಸಾಹಸಗಳಿಗೆ ಅನುಯೋಗ್ಯನಾದ ಅಧಿಕಾರಿಯನ್ನು ಕಾಣುವುದೆಂದರೆ, ಪ್ರಯಾಸವಾದುದು; ಆದರೆ ಕುಳಿಂದಕನು ಹಾಗಿರಲಿಲ್ಲ. ಅವನ ಶರೀರದ ಪ್ರತಿಯೊಂದು ಅಂಗ

ಗಳೂ ಅವನಲ್ಲಿ ತುಂಬಿರುವ ಧೈರ್ಯ-ಸಾಹಸಗಳ ಗುರುತುಗಳಾಗಿದ್ದುವು. ವಿಶಾಲವಾದ ಹಣೆಯು, ಬಲಿಷ್ಠವಾದ ತೋಳುಗಳು ಅವನು ಮಹಾಬಲನಾಗಿರುವನೆಂದು ನುಡಿಯುತ್ತಿರುವುವು. ಮೈಮೇಲೆ ಅಲ್ಲಲ್ಲಿ ಕಾಣುತ್ತಿರುವ ಗಾಯಗಳು ಅವನ ಕಲಿತನದ ಚಿಹ್ನೆಗಳಾಗಿದ್ದುವು. ಕುಳಿಂದಕನಿಗೆ ಈಗ ೭೦ ವರ್ಷಗಳ ಪ್ರಾಯವಾಗಿದ್ದರೂ ಅವನ ಹರೆಯದಲ್ಲಿದ್ದ ಹುರುಪು-ಉತ್ಸಾಹಗಳು ಅವನನ್ನು ತ್ಯಜಿಸಿ ಹೊರಟು ಹೋಗಿರುವುದಿಲ್ಲ. ಅವನ ಆ ವಾರ್ಧಕ್ಯ ಕಾಲದಲ್ಲಿ ಬಹಳ ಘನವಾದ ಖಡ್ಗವನ್ನು ಹಿಡಿದೆತ್ತಿ ಅವನು ತಿರುಗಿಸುವುದು ಯಾರನ್ನೂ ಅದ್ಭುತ ಪರತಂತ್ರರನ್ನಾಗಿ ಮಾಡದಿರದು. ಎಷ್ಟು ತುಂಟತನದ ಕುದುರೆಯಾದರೂ ಸರಿ; ಅದು ಒಮ್ಮೆ ಕುಳಿಂದಕನ ಕರಗಳಲ್ಲಿ ಸಿಕ್ಕಿದರೆ ಸಾಕು, ಅವನು ಅದನ್ನು ಬೆಣ್ಣೆಯ ಹಾಗೆ ಮೆತ್ತಗೆ ಮಾಡಿಬಿಡುತ್ತಿದ್ದನು ಖಡ್ಗಪ್ರಯೋಗ, ಕುದುರೆ ಸವಾರಿ ಎಂಬಿವುಗಳಲ್ಲಿ ಅವನು ಸಮರ್ಥನಿದ್ದಂತೆಯೇ ಮಲ್ಲಯುದ್ಧದಲ್ಲಿಯೂ ಅವನು ನಿಪುಣನಾಗಿದ್ದನು. ಎಂಥ ಬಲಿಷ್ಠ ಜಟ್ಟಿಗಳನ್ನೂ ಕುಳಿಂದಕನು ತನ್ನ ಎಡಗೈಯಿಂದ ಎತ್ತಿ ದೂರಕ್ಕೆ ಎಸೆದು ಬಿಡುತ್ತಿದ್ದನು.

ಕುಳಿಂದಕನು ಆ ಪ್ರದೇಶದ ಜನರಿಗೆ ಅನುಯೋಗ್ಯನಾದ ಅಧಿಕಾರಿಯಾಗಿದ್ದನು ತಮ್ಮ ಕಲಿತನವನ್ನು ಸಾಣೆಗೆ ಕೊಡುವಂಥ ಅರಸನನ್ನು ಕುಳಿಂದ ನಿವಾಸಿಗಳು ಪಡೆದಿದ್ದರು. ಈ ನಾಯಕನ ಕೇಳಿನಲ್ಲಿ ಕದನಕ್ಕೆ ತೆರಳುವುದೆಂದರೆ, ಅವರು ಅತ್ಯಂತ ಅಭಿಮಾನವನ್ನು ತಾಳುತ್ತಲಿದ್ದರು. ಸಾಧಾರಣ ಜನರ ಮೈಮೇಲೆ ರೋಮಾಂಚನವನ್ನು ಹುಟ್ಟಿಸತಕ್ಕ ಕಾಳಗಗಳು ಈ ಜನರಿಗೆ ಕೇವಲ ಮಕ್ಕಳ ಆಟಗಳಾಗಿದ್ದವು. ಅವರು ತಮ್ಮ ನಾಯಕನ ನೇತೃತ್ವದಲ್ಲಿ ಅಸಂಖ್ಯವಾದ ರಣಭೂಮಿಗಳನ್ನು ಅವಲೋಕಿಸಿ, ತಮ್ಮ ಬಾಹುಗಳ ಬಲದಿಂದ ಕುಂತಳಸಾಮ್ರಾಜ್ಯಕ್ಕೆ ವಿಜಯಶ್ರೀಯನ್ನು ಸಂಪಾದಿಸಿ ಕೊಟ್ಟರು. ಕುಂತಳದ ಪಾಲಕರು ಯಾರೆಂದರೆ, ನಿಜವಾಗಿ ಆ ಅಭಿಮಾನವು ಕುಳಿಂದ ನಿವಾಸಿಗಳಿಗೆ ಸಲ್ಲತಕ್ಕದಾಗಿವೆ ಕುಂತಳದ ಅಸ್ತಿತ್ವವು ಗುಪ್ತಬುದ್ಧಿಯ ಶಾಸನತಂತ್ರಗಳಲ್ಲಿ ಆಗಿರದೆ, ಕುಳಿಂದನಿವಾಸಿಗಳ ಬಾಹುಗಳಲ್ಲಿ ಆಗಿದ್ದಿತು. ಕುಳಿಂದನಿವಾಸಿಗಳು ಕುಂತಳ ಸಾಮ್ರಾಜ್ಯಕ್ಕೆ ವಿರೋಧವಾಗಿ ಖಂಡಾಯವನ್ನು ಎಬ್ಬಿಸಿದ್ದರೆ, ಅದನ್ನು ನಿವಾರಿಸುವ ಚೈತನ್ಯವು ಕುಂತಳಕ್ಕಿರಲಿಲ್ಲ; ಆದರೆ ಅವರು ತಮ್ಮ ಅರಸನಂತೆಯೇ ಸ್ವಾಮಿಭಕ್ತರಾಗಿದ್ದರು; ತಿಂದ ಉಪ್ಪನ್ನು ಮರೆಯತಕ್ಕವರಾಗಿರಲಿಲ್ಲ. ಇದಕ್ಕೆ ಸಾಕ್ಷಿಯನ್ನು ಆ ಪ್ರಾಂತ್ಯದಲ್ಲಿ ನೆಲೆಸಿರುವ ಶಾಂತತೆಯ ವಾತಾವರಣವೇ ವಹಿಸುತ್ತದೆ.

ಹತ್ತು ವರುಷಗಳ ಹಿಂದೆ ಕೆಲವು ಮಂದಿ ದುಷ್ಟರ ಪ್ರೇರಣೆಯಿಂದ ಆವಿರ್ಭವಿಸಿದ ಒಂದು ಬಂಡಾಯವಲ್ಲದೆ ಇನ್ನಾವುದೂ ಕುಳಿಂದದ ಸಮಾಧಾನವನ್ನು ಭಂಜಿಸಿರಲಿಲ್ಲ.

ಕುಳಿಂದಪ್ರಾಂತ್ಯಪಲ್ಲಿ ಕುಂತಳೇಂದ್ರನ ಸಾಮಂತನಾಗಿ ರಾಜ್ಯ ಪರಿಪಾಲನೆಯನ್ನು ಮಾಡುತ್ತಲಿದ್ದ ಕುಳಿಂದಕನ ಗೃಹಕ್ಕಾಗಿದ್ದಿತು ಅಮಾತ್ಯನು ಬಿಜಯಂಗೈದುದು. ಅಮಾತ್ಯಶ್ರೇಷ್ಠನನ್ನು ಕುಳಿಂದಕನು ಉಚಿತವಾದ ರೀತಿಯಲ್ಲಿ ಸ್ವೀಕರಿಸಿ ಸತ್ಕರಿಸಿದನು ಮಂತ್ರಿಪುಂಗವನು ಕುಳಿಂದಕನ ದರ್ಶನದಿಂದ ಅತ್ಯಾಹ್ಲಾದ ಭರಿತನಾದವನಂತೆ ನಟಿಸಿದನು. ಕುಳಿಂದಕನ ಕ್ಷೇಮ ಸಮಾಚಾರವನ್ನು ಅವನು ವಿನಯಪೂರ್ವಕವಾಗಿ ಕೇಳಿ ತಿಳಿದುಕೊಂಡನು. ಅದೇ ಸಮಯದಲ್ಲಿಯೇ ಈ ವೃದ್ಧ ಪಟುಭಟಾಗ್ರಣಿಯು ಜೀವಂತನಾಗಿರದಿದ್ದರೆ, ತನ್ನ ಉದ್ಯಮವು ಯಾವ ಆತಂಕವೂ ಇಲ್ಲದೆ ಮುಂದೆ ಸಾಗುತ್ತಿತ್ತಲ್ಲ? ಎಂದು ಮನಸ್ಸಿನಲ್ಲಿಯೇ ಅಮಾತ್ಯನು ಚಿಂತಿಸದಿರಲಿಲ್ಲ. ದುಷ್ಟಬುದ್ಧಿಯು ಈ ಲೋಕದಲ್ಲಿಯ ಯಾವುದಾದರೂ ಒಂದು ಮಾನವೀಶಕ್ತಿಯನ್ನು ಭಯಪಡುತ್ತಲಿದ್ದರೆ ಅದು ಕುಳಿಂದಕನ ಬಾಹುಗಳ ಬಲವನ್ನಾಗಿದ್ದಿತು. ಈ ವೃದ್ಧಯೋಧನ ಭಯದಿಂದ ದುಷ್ಟಬುದ್ಧಿಯು ಕುಂತಳ ಸಿಂಹಾಸನದ ಮೇಲೆ ಕೈ ಮಾಡಲು ಬೆದರುತ್ತಿದ್ದನು. ತನ್ನ ಕಾರ್ಯಸಾಧನೆಗೆ ಪ್ರತಿಬಂಧವಾಗಿ ನಿಂತಿರುವ ಕುಳಿಂದಕನನ್ನು ನಿವಾರಿಸದೆ ವಿಜಯ ಸಿರಿಯು ಲಭಿಸದೆಂದು ಆ ಚಾಣಾಕ್ಷ ಬುದ್ಧಿಗೆ ಹೊಳೆಯದೇ ಇರಲಿಲ್ಲ. ಹತ್ತುವರ್ಷಗಳ ಹಿಂದೆ ಸಂಭವಿಸಿದ ಆ ಬಂಡಾಯದ ನಂತರ ಕುಳಿಂದಕನನ್ನು ಅಧಿಕಾರ ಭ್ರಷ್ಟನನ್ನಾಗಿ ಮಾಡಲು ದುಷ್ಟಬುದ್ಧಿಯು ಕುಂತಳೇಂದ್ರನಿಗೆ ಉಪದೇಶಿಸಿದುದು, ತನ್ನ ಕಾರ್ಯಸಾಧನೆಯ ಮಾರ್ಗದಲ್ಲಿ ನಿಂತಿರುವ ಒಂದು ಮುಳ್ಳನ್ನು ಕಿತ್ತುಹಾಕಲಿಕ್ಕೆ ಮಾತ್ರವಾಗಿದ್ದಿತು; ಆದರೆ ಆ ಪ್ರಯತ್ನವು ಈ ಪರಿಚ್ಛೇದದ ಪ್ರಾರಂಭದಲ್ಲಿ ಹೇಳಿದಂತೆ ಸಫಲವಾಗಲಿಲ್ಲ.

"ಮಾಂಡಲಿಕರಿಗೆ ಈಶ್ವರಕಟಾಕ್ಷದಿಂದ ಕ್ಷೇಮವೆಂದು ನಂಬುತ್ತೇನೆ." ಕುಳಿಂದಕನ ಸತ್ಕಾರಗಳನ್ನು ಸ್ವೀಕರಿಸುತ್ತಾ ದುಷ್ಟಬುದ್ಧಿಯು ನುಡಿದನು.

"ಜಗದೀಶ್ವರನ ಮತ್ತು ಕುಂತಳೇಂದ್ರನ ಕೃಪೆಯಿಂದ ನಾವೆಲ್ಲರೂ ಕ್ಷೇಮದಲ್ಲಿರುವೆವು" ಎಂದು ವಿನಯಪೂರ್ವಕವಾಗಿ ಮಾಂಡಲಿಕನು ನುಡಿದನು: "ಅಮಾತ್ಯರು ಈಗಲಾದರೂ ನಮ್ಮನ್ನು ನೋಡ ಬಂದುದು ನಮ್ಮ ಮಹಾಭಾಗ್ಯವೇ ಸರಿ"

"ಮಾಂಡಲಿಕರೇ, ತಮ್ಮ ದೃಢವಾದ ಬಾಹುಬಲದಿಂದ ಈ ಪ್ರಾಂತ್ಯ

ವನ್ನು ರಕ್ಷಿಸುವಾಗ” ಎಂದು ಅಮಾತ್ಯನು ನುಡಿಯಲಾರಂಭಿಸಿದನು ”ತಾವು ಈ ಪ್ರಾಂತ್ಯಕ್ಕೆ ಬರಬೇಕಾದ ಅವಶ್ಯಕತೆಯೇನಿದೆ? ಮಹಾರಾಜರ ಪ್ರತಿನಿಧಿಗಳಾಗಿ ತಾವಿರುವಾಗ, ಈ ಪ್ರಾಂತ್ಯದ ಕಾರ್ಯ-ಕಲಾಪಗಳನ್ನು ಕುರಿತು ನಾನೇಕೆ ತಲೆ ಹುಣ್ಣು ಮಾಡಿಕೊಳ್ಳಬೇಕು?”

“ತಮ್ಮ ಹೊಗಳಿಕೆಗಳಿಗೆ ನಾನು ಪಾತ್ರನಲ್ಲ; ಮಹಾರಾಜರ ಭಾಗ್ಯದಿಂದ ಇಲ್ಲಿನ ಕಾರ್ಯಗಳು ಸುವ್ಯವಸ್ಥಿತವಾಗಿ ಸಾಗುತ್ತಲಿವೆ.” ಎಂಬ ಕುಳಿಂದಕನ ಮಾತುಗಳಲ್ಲಿ ಅವನ ಎದೆಯಲ್ಲಿ ತುಂಬಿರುವ ವಿನಯವೂ ಮಹಾರಾಜನಲ್ಲಿರುವ ಅಪಾರವಾದ ಭಕ್ತಿಯು ಹೊರಚೆಲ್ಲುತ್ತಲಿದ್ದುವು.

“ಸ್ವಾಮಿನಿಷ್ಠರಿಗೆ ಅದೇ ಭೂಷಣವು! ತಮ್ಮ ಸ್ವಪರಾಕ್ರಮದಿಂದ ಸಾಮ್ರಾಜ್ಯಮಂದಿರದಲ್ಲಿ ಶಾಂತತೆಯನ್ನು ಹರಡಿರುವಿರೆಂಬುದನ್ನು ತಾವು ತಿಳಿದಿದ್ದರೂ, ತಾವು ಕೇವಲ ಸಾಮಾನ್ಯರಂತೆ ನಟಿಸಿ, ಅದೆಲ್ಲವೂ ಸ್ವಾಮಿಯ ಕೃಪಾಬಲದಿಂದ ಎಂದು ಮಾತ್ರ ತಾವು ನುಡಿಯುತ್ತಿರುವಿರಿ. ಮಾಂಡಲಿಕರೆ! ತಮ್ಮಂಥ ನಾಲ್ಕು ಮಂದಿ ಸ್ವಾಮಿನಿಷ್ಠ ಸಾಮಂತರು ಕುಂತಳದಲ್ಲಿ ಇದ್ದಿದ್ದರೆ, ಸಾಮ್ರಾಜ್ಯಕಾರ್ಯಾದಿಗಳಲ್ಲಿ ನನ್ನ ಮೆದುಳನ್ನು ಈ ರೀತಿ ಹುಣ್ಣು ಮಾಡಬೇಕಾಗಿ ಬರುತ್ತಿರಲಿಲ್ಲ.”

ದುಷ್ಟಬುದ್ಧಿಯು ಹೃತ್ಪೂರ್ವಕವಾಗಿ ಈ ಮಾತುಗಳನ್ನು ಆಡಿರಲಿಲ್ಲ; ಅವನ ಹೃದಯದಲ್ಲಿ ಕುಳಿಂದಕನ ಮೇಲಿರುವ ಕ್ರೋಧಾಗ್ನಿಯು ತೀವ್ರವಾಗಿ ಪ್ರಜ್ವಲಿಸುತ್ತಲಿದ್ದಿತು. ಅವನ ಮನಸ್ಸು ಕುಳಿಂದಕನನ್ನು ಅಧಿಕಾರ ಭ್ರಷ್ಟನನ್ನಾಗಿ ಮಾಡುವ ದಾರಿಯಾವುದೆಂಬುದನ್ನು ಚಿಂತಿಸುತ್ತಲಿದ್ದಿತು; ಆದರೆ ದುಷ್ಟಬುದ್ಧಿಯು ತನಗೆ ಆಗದವರನ್ನು ತನ್ನ ಮುಖಸ್ತುತಿಯಿಂದ ಮರುಳು ಮಾಡಿ, ಅವರ ಎದೆಯೊಳಗಿರುವ ಗುಟ್ಟುಗಳನ್ನು ಬಯಲಿಗೆಳೆಯುವುದರಲ್ಲಿ ಅತ್ಯಂತ ಸಮರ್ಥನಾಗಿದ್ದರೂ, ತಿಲಾಂಶದಷ್ಟು ಸಂಶಯಕ್ಕೆ ಸ್ಥಳವನ್ನು ನೀಡದೆ, ಹೃತ್ಪೂರ್ವಕವಾಗಿ ನುಡಿಯುತ್ತಿರುವವನಂತೆ ಮಾತಾಡುವ ನಟನೆಯ ಕೌಶಲ್ಯದಲ್ಲಿ ಅಮಾತ್ಯನು ಅತ್ಯಂತ ನಿಪುಣನಾಗಿದ್ದನು. ನಿಷ್ಕಲಂಕ ಹೃದಯರಾದವರು ಅವನ ಈ ಜಾಲದಲ್ಲಿ ಸಿಲುಕಿ, ಅನೇಕ ವಿಪತ್ತುಗಳಿಗೆ ಬಲಿಯಾಗಬೇಕಾಗಿ ಬರುವುದು ಎಂದರೆ, ಅದು ಅತಿಶಯದ ಮಾತಲ್ಲ.

“ಅಮಾತ್ಯರೇ, ನನ್ನನ್ನು ವಾರ್ಧಕ್ಯವು ಇಣಿಕಿ ನೋಡುತ್ತಲಿರುವದು; ಹರೆಯದಲ್ಲಿದ್ದ ಶಾರೀರಿಕ ಬಲವು ಈಗ ನನಗಿಲ್ಲ. ರಾಜಧಾನಿಗೆ ತೆರಳಿ ಮಹಾರಾಜರ ದರ್ಶನವನ್ನು ತೆಗೆದುಕೊಳ್ಳಬೇಕೆಂಬ ಹಂಬಲವು ಹೆಚ್ಚಾಗಿದೆ; ಆದರೆ ನನ್ನ ಶಾರೀರಿಕ ಪ್ರಕೃತಿಯು ಹತ್ತಿನ್ನೂರು ಹರದಾರಿಗಳ ಪ್ರವಾಸಕ್ಕೆ

ಯೋಗ್ಯವಾದುದಲ್ಲ. ಏನು ಮಾಡಲಿ? ವಾರ್ಧಕ್ಯವು ಬಂದೊದಗಿದರೆ, ಯೋಚನೆಯಂತೆ ಕಾರ್ಯಗಳನ್ನು ಜರಗಿಸುವುದು ಪ್ರಯಾಸವು" ಎಂದು ಹೇಳಿ ಕುಳಿಂದಕನು ರಾಜಧಾನಿಗೆ ತೆರಳಿ ಮಹಾರಾಜನ ದರ್ಶನವನ್ನುಪ ಡೆಯುವುದರಲ್ಲಿ ತನಗಿರುವ ಉತ್ಕಂಠೆಯನ್ನು ಸೂಚಿಸಿದನು.

"ತಮ್ಮ ಹೃದಯದಲ್ಲಿ ಸ್ವಾಮಿಭಕ್ತಿಯು ಕುದಿಯುತ್ತಲಿರುವುದರಿಂದ ಆ ಪ್ರಕಾರ ನುಡಿಯುತ್ತಿರುವಿರಿ; ತಮ್ಮ ಕೂದಲುಗಳು ಮಹಾರಾಜರ ಸೇವೆ ಯಲ್ಲಿ ಹಣ್ಣಾಗಿ ಹೋಗಿವೆ."

"ನಾನು ಆ ಪ್ರಭುಗಳ ಉಪ್ಪನ್ನು ತಿನ್ನುವವನು; ನನ್ನ ಸೇವೆಯನ್ನು ಆ ಚರಣಗಳಲ್ಲಿ ಸದಾ ಸಲಿಸಬೇಕೆಂದು ಬಯಸುತ್ತಿರುವೆನು. ಅಮಾತ್ಯರೇ, ನಾನೀಗ ಎಪ್ಪತ್ತು ವರ್ಷಗಳ ವೃದ್ಧನಾಗಿದ್ದರೂ ನನ್ನಿಂದಾಗುವ ಸೇವೆಯನ್ನು ಮಾಡಲು ಸಿದ್ಧನಿರುವೆನು."

"ತಾವು ಕುಂತಳಕ್ಕೆ ನೀಡಿದ ಸೇವೆಯು ಅಪಾರವಾದುದು; ಅದಕ್ಕೆ ಸರಿಯಾದ ಪ್ರತಿಫಲವನ್ನು ಮಹಾರಾಜರು ತಮಗೆ ನೀಡಿರುವುದಿಲ್ಲ, ಎಂಬುದನ್ನು ನಾನು ಬಲ್ಲೆನು."

"ಆದರೆ ಯಾವ ಫಲವನ್ನು ಬಯಸಿ ನಾನು ನನ್ನ ಸೇವೆಯನ್ನು ಸಲಿಸಿ ರುವುದಿಲ್ಲ; ನನ್ನ ಸೇವನೆಗಳು ಮಾರಲಿಕ್ಕಿರುವ ವಸ್ತುಗಳಲ್ಲ! ಮಹಾಶಯರೆ, ನಾನು ಮಾಡಿದ ಕೆಲಸಗಳಿಗೆ ಪ್ರತಿಫಲವನ್ನು ಬಯಸುವುದಾದರೆ, ಅವುಗಳ ಮಹತ್ವವು ಹೇಗೆ ಉಳಿಯುವದು?"

ಮಾಂಡಲಿಕನ ಹೃದಯದಲ್ಲಿ ಕುಂತಳೇಂದ್ರನನ್ನು ಕುರಿತು ಪುಚ್ಛ ರಸವನ್ನು ಹುಟ್ಟಿಸುವದಕ್ಕಾಗಿ, "ಅದಕ್ಕೆ ಮಹಾರಾಜರು ಸರಿಯಾದ ಪ್ರತಿ ಫಲವನ್ನು ನೀಡಿರುವುದಿಲ್ಲವೆಂಬದನ್ನು ನಾನು ಬಲ್ಲೆನು" ಎಂಬ ವಚನ ಗಳನ್ನು ಅಮಾತ್ಯನು ಪ್ರಯೋಗಿಸಿದ್ದನು; ಆದರೆ ದುಷ್ಟಬುದ್ಧಿಯ ಆ ಪ್ರಯ ತ್ನವು ನಿಷ್ಫಲವಾಗಿ ಹೋಯಿತು. ಮಾಂಡಲಿಕನು ಕುಂತಳೇಂದ್ರನನ್ನು ಯುದ್ಧರಂಗಗಳಲ್ಲಿ ಸಹಾಯಿಸಿದುದು ಪ್ರತಿಫಲಾಪೇಕ್ಷೆಯಿಂದ ಆಗಿರಲಿಲ್ಲ. ನಿಷ್ಕಲ್ಮಷವಾದ ಸ್ವಾಮಿನಿಷ್ಠೆಯೇ ಅವನನ್ನು ಆ ಮಹಾ ಪ್ರಯತ್ನಗಳಲ್ಲಿ ಭಾಗವಹಿಸುವಂತೆ ಪ್ರೇರೇಪಿಸಿದ್ದಿತು. ಸ್ವಾಮಿಭಕ್ತನಾಗಿ, ಕುಂತಳ ಸಿಂಹಾ ಸನವನ್ನು ಆರಾಧಿಸುವದು ಒಂದು ಅಭಿಮಾನವೆಂಬುದಾಗಿ ಅವನು ಬಗೆ ದಿದ್ದನು.

"ತಾವು ತಮ್ಮ ಪ್ರಯತ್ನಗಳಿಗೆ ಪ್ರತಿಫಲವನ್ನು ಬಯಸುತ್ತಿಲ್ಲವೆಂಬುದು ನಿಜವು. ಅದು ತಮ್ಮ ಉದಾರತೆಯನ್ನೂ ಮಹಾ ಮನಸ್ಕತೆಯನ್ನೂ ತೋರಿ

ಸುತ್ತಲಿರುವುದು; ಆದರೆ ತಾವು ಗೈದ ಮಹತ್ಸೇವೆಗಳನ್ನು ಅರಿತು ಮಹಾ ರಾಜರು ತಮ್ಮನ್ನು ಯೋಗ್ಯ ರೀತಿಯಲ್ಲಿ ಸತ್ಕರಿಸುವದು ಅವರ ಕರ್ತವ್ಯ ವಲ್ಲವೇ? ಈ ಕಾರ್ಯವನ್ನು ಕುರಿತು ನಾನು ಮಹಾರಾಜರೊಡನೆ ಸೂಚಿ ಸಿದೆನು; ಆದರೆ ಅವರು ಅದರಲ್ಲಿ ಗಮನವನ್ನಿಡಲಿಲ್ಲ. ತಾವು ಅನ್ಯಥಾ ಭಾವಿಸಬಾರದು? ತಮ್ಮಲ್ಲಿ ನನಗೆ ಅಪರಿಮಿತವಾದ ಸಹಾನುಭೂತಿ ಯಿರುವದರಿಂದ ಈ ರೀತಿ ನುಡಿದೆನು'' ಎಂದು ದುಷ್ಟಬುದ್ಧಿಯು ಕುಳಿಂದಕ ನಲ್ಲಿ ಸಹಾನುಭೂತಿಯನ್ನು ಪ್ರದರ್ಶಿಸುತ್ತಿರುವಂತೆ ನಟಿಸಿ, ಮಹಾರಾಜ ರಲ್ಲಿ ಕುಳಿಂದಕನಿಗಿರುವ ಅಪಾರವಾದ ಭಕ್ತಿಯು ಲೋಪವಾಗುವಂತೆ ಮಾಡಲು ಮೂರನೆಯದಾದ ಭೇದೋಪಾಯವನ್ನು ಪ್ರಯೋಗಿಸಿದನು.

"ಸಚಿವ ಶಿರೋಮಣಿಗಳೇ, ತಾವು ಈ ದರಿದ್ರನ ಮೇಲೆ ಕೃಪಾಕಟಾಕ್ಷ ವನ್ನಿಟ್ಟಿರುವದನ್ನು ಕಂಡು ನಾನು ಹರ್ಷಿತನಾದೆನು. ಮಹಾರಾಜರು ನನ್ನನ್ನು ಮನ್ನಿಸಿದರೂ ಸರಿ, ಇಲ್ಲದಿದ್ದರೂ ಸರಿ, ಸ್ವಾಮಿದ್ರೋಹವನ್ನು ಚಿಂತಿಸದೆ ಅವರ ಆನುಜ್ಞೆಗಳನ್ನು ಸಲಹುತ್ತ ನನ್ನ ಶೇಷಾಯುಷ್ಯವನ್ನು ಕಳೆಯ ಬೇಕೆಂದು ನಾನು ನಿರ್ಧರಿಸಿರುವೆನು'' ಎಂದು ಮಾಂಡಲಿಕನು ನುಡಿದನು.

ದುಷ್ಟಬುದ್ಧಿಯು ತನ್ನ ಭೇದೋಪಾಯವು ಕುಳಿಂದಕನ ಹೃದಯ ದಲ್ಲಿ ಕುಂತಳೇಂದ್ರನನ್ನು ಕುರಿತು ಪುಚ್ಛರಸವು ಜನಿಸುವಂತೆ ಮಾಡುವುದ ರಲ್ಲಿ ಪರಾಜಯವನ್ನು ಹೊಂದಿದ್ದನ್ನು ಕಂಡು ಮನಸ್ಸಿನಲ್ಲಿಯೇ ನಿರಾಶೆ ಯನ್ನು ಹೊಂದಿದನು. ಮಾಂಡಲಿಕನನ್ನು ತನ್ನ ತಂತ್ರಜಾಲಗಳಿಗೆ ಬಲಿ ಯಾಗುವಂತೆ ಮಾಡುವುದು ತನ್ನ ಕಾರ್ಯಸಾಧನೆಗೆ ಅತ್ಯಾವಶ್ಯಕವೆಂದು ಅಮಾತ್ಯನು ಅರಿತಿದ್ದನು; ಆದರೆ ಕುಳಿಂದಕನ ಅಕೃತ್ರಿಮ ಸ್ವಾಮಿಭಕ್ತಿಯು ದುಷ್ಟಬುದ್ಧಿಯ ತಂತ್ರಗಳಿಗೆ ಶಿರವನ್ನು ಬಾಗಿಸುವಂತಿರಲಿಲ್ಲ.

ಈ ಸಂದರ್ಭದಲ್ಲಿ ಮಾಂಡಲಿಕನೂ ಅಮಾತ್ಯನೂ ಕುಳಿತು ಮಾತಾಡು ತ್ತಲಿದ್ದ ಸಂಭಾಷಣಾಗೃಹದೊಳಗೆ ಅತ್ಯಂತ ತೇಜಸ್ವಿಯಾದ ಒಬ್ಬ ತರುಣನು ಪ್ರವೇಶಿಸಿದನು. ವಯಸ್ಸು ೨೨-೨೪ ಇರಬಹುದು. ಸುಂದರವಾದ ಅವನ ಮೈ ಕಟ್ಟು ಅಮಾತ್ಯನನ್ನು ಬೆರಗುಗೊಳಿಸಿತು. ಆ ಯುವಕನ ಕಣ್ಣುಗಳು ನಕ್ಷತ್ರಗಳಂತೆ ಪ್ರಕಾಶಮಾನವಾಗಿದ್ದುವು; ದುಂಡಾದ ಮುಖಮಂಡಲವು ಅತ್ಯಂತಚಲುವಾಗಿದ್ದು, ನೋಡುವವರ ಮನಸ್ಸುಗಳಲ್ಲಿ ಆಹ್ಲಾದವು ಸಂಜಾತ ವಾಗುವಂತೆ ಮಾಡುತ್ತಲಿದ್ದಿತು. ವಿಶಾಲವಾದ ಗಂಡಸ್ಥಳವು ಅವನೊಬ್ಬ ಧೀರನೆಂಬುದನ್ನು ಸೂಚಿಸುತ್ತಲಿದ್ದಿತು. ಜಾನುಗಳ ಪರ್ಯಂತ ತಲುಪುವ ಬಾಹುಗಳು ಅವನೊಬ್ಬ ಮಹಾಮಹಿಮನಾಗುವುದೆಂಬುದನ್ನು ಸೂಚಿಸುತ್ತ

ಲಿದ್ದವು. ಬಹಳ ಎತ್ತರವೂ ಅಲ್ಲ; ತೀರ ಕುಳ್ಳನೂ ಅಲ್ಲ. ಮೈಕಟ್ಟಿಗೆ ಸರಿಯಾದ ಉದ್ದ, ಮೈಕಟ್ಟಿಗೆ ಅನುರೂಪವಾದ ಚೆಲುವು ಆ ತರುಣನಲ್ಲಿ ಹೊಳೆಯುತ್ತಲಿದ್ದವು.

ಈ ತರುಣನನ್ನು ನೋಡಿದೊಡನೆಯೇ ಮಂತ್ರಿವರ್ಯನು ಅವಾಕ್ಕಾಗಿ ಹೋದನು! ಇಷ್ಟು ಸೊಬಗಿನ ಮೈಕಟ್ಟಿನಿಂದ ಕೂಡಿದ ಒಬ್ಬ ತರುಣನನ್ನು ಅವನು ಇದುವರೆಗೂ ನೋಡಿರಲಿಲ್ಲ. ಪ್ರಸನ್ನಮುಖಭಾವದಲ್ಲಿ ದೃಢಮನಸ್ಕತೆಯ ಬೆಳಕು ಮಿನುಗುತ್ತಿತ್ತು. ಎಳೆ ನಗೆಯನ್ನು ಹೊರಚಲ್ಲುತ್ತಲಿದ್ದ ತುಟಿಗಳು ಕೆಂಪಗೆ ಹವಳದಂತೆ ಹೊಳೆಯುತ್ತಲಿದ್ದವು ಸ್ವಲ್ಪ ಉಬ್ಬಿದ ಕೆನ್ನೆಗಳು ತೇಜಸ್ಸಿನಿಂದ ಬೆಳಗುತ್ತಲಿದ್ದವು.

ಆ ತರುಣನನ್ನು ನೋಡಿದ ಕೂಡಲೆ ಅಮಾತ್ಯನು ಇವನು ಯಾರಿರಬಹುದೆಂದು ಮನಸ್ಸಿನಲ್ಲಿಯೇ ಚಿಂತಿಸತೊಡಗಿದನು.

---

## ಚಂದ್ರಹಾಸ.

೦

ತರುಣನು ಕೌತುಕ ದೃಷ್ಟಿಯಲ್ಲಿ ದುಷ್ಟಬುದ್ಧಿಯ ಮೊಗದೆಡೆಗೆ ತನ್ನ ನೋಟವನ್ನು ಒಂದು ಬಾರಿ ಚೆಲ್ಲಿ, ಕುಳಿಂದಕನಿಗೆ ನಮಸ್ಕರಿಸಿದನು. ಕುಳಿಂದಕನು ಹರ್ಷದಲ್ಲಿ ಮಿಲನವನ್ನು ಹೊಂದಿದ ಕಿರುನಗೆಯೊಡನೆ:—

"ಚಂದ್ರಹಾಸ, ನಿನ್ನೆಯ ದಿನದಿಂದ ನಿನ್ನನ್ನು ಕಾಣಲೇ ಇಲ್ಲವಲ್ಲ? ಏನಾದರೂ ಪ್ರಮಾದವು ನಿನಗೆ ಸಂಭವಿಸಿತೆ? ಎಂದು ನಾನು ಇದುವರೆಗೆ ಚಿಂತಾಮಗ್ನನಾಗಿದ್ದೆನು. ಜಗದೀಶ್ವರನ ಕೃಪೆಯಿಂದ ನಿನಗೆ ಯಾವ ವಿಪತ್ತುಗಳೂ ಸಂಭವಿಸದೆ ಹಿಂದಿರುಗಿ ಬಂದುದು ಅತ್ಯಂತ ಸಂತೋಷದ ಸಂಗತಿಯಾಗಿದೆ" ಎಂದನು.

"ನೀವು ನನ್ನನ್ನಿನ್ನೂ ಹಸುಳನಾಗಿರುವೆನೆಂದು ವಿಚಾರಿಸಿ, ಒಂದೆರಡು ದಿನಗಳ ಮಟ್ಟಿಗೆ ನಾನು ಕಾರ್ಯಾಂತರದಿಂದ ಮನೆಯನ್ನು ಬಿಟ್ಟರೆ" ಎಂದು ನುಡಿದು, ದುಷ್ಟಬುದ್ಧಿಯ ಕಡೆಗೆ ಅವನಾರೆಂದು ತಿಳಿಯಲು ಕೌತುಕದೃಷ್ಟಿಯನ್ನು ಬೀರಿ, ಚಂದ್ರಹಾಸನು ಹೇಳತೊಡಗಿದನು: "ತಂದ್ರಾಭರಿತರಾಗುವುದು ಅನುಚಿತವು; ಆ ಡಾಕು ಅಜಿತನ ಕಾರ್ಯವನ್ನು ನೀವು ತಿಳಿದಿರಬಹುದಷ್ಟೇ? ಅವನನ್ನು ಬಂಧಿಸುವುದಕ್ಕಾಗಿ ನಾನು ಹೋಗಿದ್ದೆನು"

"ಡಾಕುವು ಕರಗತನಾದನೆ?"

"ಅವನೀಗ ನಮ್ಮ ತುರಂಗದಲ್ಲಿರುವನು; ಸ್ವಲ್ಪ ಕಷ್ಟವಾಯಿತು ಅವನನ್ನು ಬಂಧಿಸುವುದಕ್ಕೆ. ಅವನೂ ಅವನ ಸಂಗಡದವರೂ ಜೀವ ಭಯವಿಲ್ಲ

ದವರಾದುದರಿಂದ ನಮ್ಮ ಭಟರು ಅವರೊಡನೆ ಕಾದಾಡಲು ಸ್ವಲ್ಪ ಹಿಂಜರಿದರು. ಆದುದರಿಂದ ಆ ಕದನದಲ್ಲಿ ನಾನೇ ಮೇಘಾಪಿತ್ವವನ್ನು ವಹಿಸಿ, ನಮ್ಮ ಸೈನಿಕರಿಗೆ ಹುರುಪನ್ನು ನೀಡಬೇಕಾಗಿ ಬಂದಿತು"

"ಮಗು, ಇಂಥ ಪ್ರಸಂಗಗಳಲ್ಲಿ ನೀನು ಹೆಜ್ಜೆಯನ್ನು ಮುಂದಿಡಬಾರದು ನಿನ್ನ ಪ್ರಾಣವು ಅತ್ಯಂತ ಬೆಲೆಯುಳ್ಳದ್ದೆಂಬುದನ್ನು ನೆನಪಿನಲ್ಲಿಡು" ಎನ್ನುತ್ತ ಕುಳಿಂದಕನು ದುಷ್ಟಬುದ್ಧಿಯನ್ನು ಚಂದ್ರಹಾಸನಿಗೆ ತೋರಿಸಿ ಕೊಡುತ್ತಾ ಹೀಗೆ ಅಂದನು:—"ಇವರೇ ಕುಂತಳೇಂದ್ರ ಮಹಾರಾಜರ ಪ್ರಧಾನ ಅಮಾತ್ಯರು; ಇವರಿಗೆ ವಂದಿಸಿ, ನೀನು ದಣಿದಿರುವುದರಿಂದ ವಿಶ್ರಾಮವನ್ನು ಹೊಂದು."

"ಅಮಾತ್ಯವರ್ಯರೇ, ತಮ್ಮ ಪಾವನದ ಹೆಸರನ್ನು ನಾನು ಪಿತೃಮುಖದಿಂದ ಶ್ರಾವಿಸಿರುವೆನು; ಆದರೆ ತಮ್ಮ ದರ್ಶನವನ್ನು ಪಡೆಯುವ ಸಂಯೋಗವು ನನಗೆ ಇದುವರೆಗೆ ಲಭಿಸಿರಲಿಲ್ಲ. ಅದು ಈ ದಿನ ಲಭಿಸಿತು. ತಮ್ಮ ಅಮೋಘವಾದ ರಾಜತಂತ್ರದಿಂದ ಕುಂತಳ ಸಾಮ್ರಾಜ್ಯದ ಕೀರ್ತಿಯು ಸರ್ವತ್ರ ಹರಡಿರುವುದು. ತಮ್ಮ ಚರಣಗಳಲ್ಲಿ ನಾನು ನಮಿಸುವೆನು" ಎಂದು ಹೇಳುತ್ತ ಚಂದ್ರಹಾಸನು ಅಮಾತ್ಯನಿಗೆ ತನ್ನ ಪ್ರಣಾಮಗಳನ್ನು ಅರ್ಪಿಸಿದನು.

"ವೀರ ತರುಣ, ನಿನ್ನನ್ನು ಕಾಣಲು ಬಹು ಸಂತೋಷ; ನೀನು ಕಲಿಯೆಂಬುದು ಈಗ ತಾನೆ ಒಬ್ಬ ಡಾಕುವಿನೊಡನೆ ನೀನು ಕಾದಿ ಬಂದಿರುವಿಯೆಂಬ ಮಾತುಗಳಿಂದ ವ್ಯಕ್ತವಾಯಿತು. ಆ ಶ್ರಮದಿಂದ ಬಳಲಿ ಬೆಂದವನಾದ ನಿನ್ನನ್ನು ಇಲ್ಲಿ ನಿನ್ನ ಪರಿಚಯವನ್ನು ಹೊಂದುವುದಕ್ಕಾಗಿ ನಿಲ್ಲಿಸುವದು ಅಷ್ಟು ಉಚಿತವಲ್ಲ; ಆದುದರಿಂದ ಇನ್ನೊಮ್ಮೆ ಕಂಡು ನಾನು ಮಾತನಾಡುವೆನು" ಎಂದನು ದುಷ್ಟಬುದ್ಧಿಯು.

ಚಂದ್ರಹಾಸನು ಮರುಮಾತನಾಡದೆ, ಕುಳಿಂದಕನಿಗೆ ಇನ್ನೊಮ್ಮೆ ನಮಿಸಿ, ಆ ಗೃಹದಿಂದ ಹೊರಬಿದ್ದನು.

"ಮಾಂಡಲಿಕರೇ, ಈ ತರುಣನು ಯಾರು? ಒಳ್ಳೇ ತೇಜಸ್ವಿಯಾಗಿ ತೋರುತ್ತಾನೆ!" ಎಂದು ಮಾಂಡಲಿಕನ ಮೋರೆಯನ್ನು ನೋಡುತ್ತ ಅಮಾತ್ಯನು ಅಂದನು.

"ನನ್ನ ಮಗನು!"

"ತಮ್ಮ ಕುಮಾರನೆ?"

"ಹೌದೆ ಅಮಾತ್ಯರೆ, ತಾವು ಆಶ್ಚರ್ಯವಿಹ್ವಲರಾದಿರಿ!"

"ಹತ್ತು ವರ್ಷಗಳ ಹಿಂದೆ ಆ ಬಂಡಾಯದ ಕಾಲದಲ್ಲಿ ನಾನು ತಮ್ಮ ಪ್ರಾಂತ್ಯಕ್ಕೆ ಬಂದ ನೆನಪು ತಮಗಿರಬಹುದಷ್ಟೆ?"

"ಹೌದು; ಇದೆ."

"ಆ ಕಾಲದಲ್ಲಿ ತಮಗೆ ಪುತ್ರನಿಲ್ಲ; ಹತ್ತು ವರ್ಷಕಾಲಾವಧಿಯಲ್ಲಿ ಇಷ್ಟು ಪ್ರಾಯದ ತರುಣನು ತಮ್ಮ ಮಗನೆಂದು ಕೇಳಲು ನಾನು ಆಶ್ಚರ್ಯಚಕಿತನಾದೆನು."

"ಅದೊಂದು ದೊಡ್ಡ ಕತೆಯಾಗಿದೆ; ತಮಗೆ ವೇಳೆಯೂ, ಕೇಳುವ ಉತ್ಸುಕತೆಯೂ ಇದ್ದರೆ ನಾನು ಅದನ್ನು ಹೇಳುವೆನು."

"ಧಾರಾಳವಾಗಿ ಹೇಳಿರಿ; ನಾನು ಅದನ್ನು ಶ್ರಾವಿಸುವೆನು"

"ಹಾಗಾದರೆ ನಾನು ನುಡಿಯುವೆನು" ಎಂದು ಕುಳಿಂದಕನು ತನಗೆ ಪುತ್ರನು ಲಭಿಸಿದ ಕತೆಯನ್ನು ಹೇಳತೊಡಗಿದನು: "ನನಗೆ ಎಲ್ಲ ಭೋಗ-ಭಾಗ್ಯಗಳನ್ನು ದಯಪಾಲಿಸಿದ ಆ ಜಗನ್ನಿಯಾಮಕನು ಒಂದು ಸುಖವನ್ನು ಆಸ್ವಾದಿಸುವ ಭಾಗ್ಯವನ್ನು ನೀಡಲಿಲ್ಲ. ಸಂತಾನಸುಖದ ರುಚಿಯನ್ನರಿಯದುದರಿಂದ ನನ್ನ ಎದೆಯು ಬೆಯ್ಯತೊಡಗಿತು; ನನ್ನ ಮಡದಿಯು ಶಿಶುವಿನ ಲಾಲನ-ಪಾಲನೆಗಳನ್ನು ಮಾಡಬೇಕೆಂಬ ಹಂಬಲದಿಂದ ಹಳಹಳಿಸಲು ಪ್ರಾರಂಭಿಸಿದಳು. ಕಳೆದ ಆಹವದಲ್ಲಿ ನನಗೆ ಪ್ರಾಣಾಪಾಯವನ್ನು ನೀಡುವಂಥ ಆಘಾತಗಳು ಸಂಪ್ರಾಪ್ತವಾಗಲು, ನನ್ನ ಅನಂತರ ಕುಳಿಂದ ಮಾಂಡಲಿಕರ ವಂಶದ ಹೆಸರನ್ನು ಹೇಳಿಸುವಂಥ ಚಿಗುರು ನನ್ನ ವಂಶದಲ್ಲಿ ಇಲ್ಲದುದನ್ನು ಕಂಡು ನನಗೆ ಪಿಂಡೋದಕಗಳ ಕ್ರಿಯೆಯನ್ನು ನೀಡುವವರು ಯಾರೆಂಬ ಚಿಂತೆಯು ನನ್ನ ಮನೋವಲಯದಲ್ಲಿ ವ್ಯಾಪಿಸತೊಡಗಿತು."

"ಜೀವನವು ಬಹಳ ಬೇಸರವಾಗುತ್ತ ಬಂದಿತು; ನನ್ನ ಎದೆಯಲ್ಲಿ ತುಂಬಿದ್ದ ಪ್ರೇಮವನ್ನು ಭದ್ರಪಡಿಸಲು, ಶಿಶುವೆಂಬ ಭರಣಿಯು ಇಲ್ಲದಿರುವಾಗ, ಹೃದಯದಲ್ಲಿ ಹರಿದಾಡುತ್ತಿದ್ದ ಮಮತೆಯನ್ನು ಯಾವ ಸರೋವರವನ್ನೂ ಕಾಣದೆ ನನ್ನ ಆತ್ಮವು ಮಿಡುಕಾಡಲು ಪ್ರಾರಂಭಿಸಿತು. ಗೃಹದಲ್ಲಿ ಶಿಶುಗಳ ಮಧುರ ಆಲಾಪಗಳು ಪ್ರತಿಧ್ವನಿಸದೆ, ಮಸಣದಂತೆ ಅದು ತೋರತೊಡಗಿತು. ಮನೆಯಲ್ಲಿ ಅಂಬೆಗಾಲಿಡುತ್ತ, ತೊದಲ್ನುಡಿಗಳಿಂದ ಬೆಳಗುವ ಕಂದನ ಮುದ್ದು ಮೊಗವನ್ನು ಕಂಡಾನಂದಿಸುವ ಚಿಂತೆಯಲ್ಲಿ ಈ ಎದೆಯು, ಶತ್ರುಗಳ ಭಯಂಕರವಾದ ಖಡ್ಗಪ್ರಹಾರಗಳಿಗೆ ಅಳುಕದಿದ್ದ ಗುಂಡಿಗೆಯು ಕರಗಿ ದ್ರವರೂಪವನ್ನು ಹೊಂದತೊಡಗಿತು. ಮೊದಲಿದ್ದ ಉನ್ಮೇಷ-ಹರ್ಷಗಳು ನನ್ನ ಬಾಳನ್ನು ತ್ಯಜಿಸಿ ಮಾಯವಾಗತೊಡಗಿದುವು.

ಬದುಕೇ ಪ್ರಯೋಜನಶೂನ್ಯವೆಂಬ ವಿಚಾರವು ಮನೋಪುಂಟಪದಲ್ಲಿ ನರ್ತಿಸ ತೊಡಗಿತು. ನಾನು ಕೆಲಸಗಳಲ್ಲಿ ಉದ್ಯುಕ್ತನಾಗದಿರುವ ಪ್ರತಿಯೊಂದು ನಿಮಿಷದಲ್ಲಿಯೂ ವೇಳೆಯಲ್ಲಿಯೂ ಈ ಚಿಂತೆಯ ಮಹಾಭೂತವು ಬಂದು ನನ್ನ ಮುಂದೆ ನಿಲ್ಲತೊಡಗಿತು.

"ಈ ಚಿಂತೆಯಿಂದ ಪಾರಾಗಲು, ನಾನು ಹೊಸ ಉಪಾಯಗಳನ್ನು ಹುಡುಕಲು ನಿರ್ಬಂಧಿತನಾದೆನು. ಬೇಟೆಯು ನನಗೆ ಬಾಲ್ಯದಿಂದಲೇ ಇರುವ ಒಂದು ಪ್ರಧಾನ ವಿನೋದವಾಗಿದ್ದಿತು. ಈ ಕಾಲದಲ್ಲಿ ನನ್ನ ಮನಃಕ್ಲೇಶ ದಿಂದ ಪಾರಾಗಲು, ಈ ವಿನೋದವನ್ನು ನಾನು ಮೊದಲಿಗಿಂತಲೂ ಹೆಚ್ಚು ಆಸಕ್ತಿಯಿಂದ ಕೈಕೊಂಡನು. ಪ್ರತಿದಿನವೂ ಬೇಟೆ, ಪ್ರತಿದಿನವೂ ಕಾಡಿನಲ್ಲಿ ದುಷ್ಟ ಮೃಗಗಳ ಹಿಂದೆ ಓಡುವುದು ಇವುಗಳೆಲ್ಲ ನನ್ನ ದೈನಂದಿನ ಕೃತ್ಯ ಗಳಾಗಿ ಪರಿಣಮಿಸಿದುವು. ದಿನವೂ ಈ ಶ್ರಮವಹವಾದ ವಿನೋದದಿಂದ ಬಳಲಿದವನಾದ ನಾನು ರಾತ್ರಿ ಸದನಕ್ಕೆ ಬಂದು ವಿಶ್ರಾಂತಿಯನ್ನು ಹೊಂದು ತ್ತಿದ್ದೆನು. ದಿನದ ಆಯಾಸದಿಂದ ಬಳಲಿ ಬೆಂಡಾದ ಶರೀರವು ನಿದ್ರಾಂಗನೆಗೆ ಪರವಶವಾಗುತ್ತಲಿದ್ದಿತು. ಪ್ರಭಾತವಾದರೆ ಪುನಃ ಮೃಗಬೇಟೆಗೆ ಹೊರ ಡುತ್ತಲಿದ್ದೆನು.'

ಕುಳಿಂದಕನು ಸ್ವಲ್ಪ ಹೊತ್ತು ಮೌನದಲ್ಲಿದ್ದು ಅನಂತರ ತನ್ನ ನುಡಿ ಗಳನ್ನು ಈ ರೀತಿ ಮುಂದುವರಿಸಿದನು. "ರಾಜ್ಯಕಾರ್ಯಗಳಲ್ಲಿ ನನಗೆ ಇದ್ದ ಆಶಕ್ತಿಯು ದೂರವಾಗತೊಡಗಿತು; ಪ್ರಜೆಗಳ ಹಿತದಲ್ಲಿ ನನ್ನ ದೃಷ್ಟಿಯು ಪತಿಸಲಿಲ್ಲ. ನಿರಾಶೆಯಿಂದ ತುಂಬಿದ ನನ್ನ ಹೃದಯವು ಈ ಕೃತ್ಯಗಳಿಂದ ಶಾಂತತೆಯನ್ನು ಹೊಂದುತ್ತಿರಲಿಲ್ಲ. ನಾನು ಯಾರಿಗಾಗಿ ರಾಜ್ಯಪರಿಪಾಲನೆ ಯನ್ನು ಮಾಡಬೇಕು? ಕುಳಿಂದ ವಂಶದ ಹೆಸರನ್ನು ಹೇಳಿಸಲು ಕಂದ ನೊಬ್ಬನಿಲ್ಲದಿರುವಾಗ ಯಾರಿಗಾಗಿ ಈ ರಾಜ್ಯವು? ಅಮಾತ್ಯರೇ, ನಾನು ಮೌನದಲ್ಲಿ ಪದಾರ್ಪಣವನ್ನು ಮಾಡಿದಾಗ, ನಾನು ಅಧಿಕಾರ ಮತ್ತು ಶಕ್ತಿ ಸಂಪನ್ನನಾಗಲು ಅತ್ಯಂತ ಆಗ್ರಹವಿದ್ದಿತು. ಆ ರೀತಿಯ ಒಂದು ಅತ್ಯುಚ್ಚ ಶಿಖರಿಗೇರುವದೇ ಬಾಳಿನ ಉದ್ದೇಶವೆಂದು ನಾನು ಬಗೆದಿದ್ದೆನು. ಈ ಮಾನುಷ ಬುದ್ಧಿಯ ತಿಳಿಗೇಡಿತನವನ್ನು ನೋಡಿರಿ! ನನ್ನ ಹರೆಯದಲ್ಲಿ ತೋರಿದ ಆ ಅಧಿಕಾರದ ಹಂಬಲವು ನಾನು ಯೌವನವನ್ನು ದಾಟಿದ ನಂತರ ನನ್ನಲ್ಲಿ ನೆಲೆಯಿಸಲಿಲ್ಲ. ಅಧಿಕಾರವು ನನಗೆ ಬೇಡವಾಯಿತು; ಕೀರ್ತಿಯು ಆವಶ್ಯವಿಲ್ಲ; ಧನವು ನನಗೆ ಆತ್ಮ ಶಾಂತಿಯನ್ನು ಪ್ರದಾನ ಮಾಡಲಿಲ್ಲ! ನನಗೆ ಬೇಕಾಗಿದ್ದುದು ಸಂತಾನಸುಖದ ಸವಿ ಮಾತ್ರವಾಗಿದ್ದಿತು!"

"ಈ ರೀತಿಯು ಕಾಲಘಟ್ಟದಲ್ಲಿ" ಎಂದು ಮಾಂಡಲಿಕನು ತನ್ನ ಮಾತುಗಳನ್ನು ಮುಂದುವರಿಸಿದನು. "ಹಿಂದೆ ಹೇಳಿದಂತೆ, ಶಾಸನೆ ಮತ್ತು ಪಾಲನೆಗಳಲ್ಲಿ ನಾನು ಹೆಚ್ಚಿನ ಶ್ರದ್ಧೆಯನ್ನು ಇಟ್ಟಿರಲಿಲ್ಲ. ಅದರ ಪರಿಣಾಮ ವಾಗಿ ಆ ಬಂಡಾಯವು ಆವಿರ್ಭವಿಸಿತೆಂದು ಹೇಳಿದರೆ ತಪ್ಪಾಗಲಾರದು. ಹೆಚ್ಚಿನ ಶ್ರದ್ಧೆ ಹಾಗೂ ಆಸಕ್ತಿಗಳನ್ನು ನಾನು ಈ ರಾಜ್ಯದ ಪರಿಪಾಲನೆಯಲ್ಲಿ ಪತಿಸಿದ್ದರೆ, ಬಂಡಾಯವು ಉಂಟಾಗುವದಕ್ಕೆ ಅವಕಾಶವೇ ಇರಲಿಲ್ಲವೆಂಬದು ತಾವು ತಿಳಿದ ಸಂಗತಿಯಾಗಿದೆ."

"ಬಂಡಾಯದ ನಂತರ ಎಂದಿನಂತೆ ಒಂದು ದಿನ ನಾನು ಬೇಟೆಗಾಗಿ ತೆರಳಿದೆನು. ಆ ದಿನ ಭಯಂಕರವಾದ ಒಂದು ಹೆಬ್ಬುಲಿಯು ವಿಪಿನಾಂತರ ದಲ್ಲಿ ನನ್ನ ಚಕ್ಷುಸ್ಸುಗಳಿಗೆ ಗೋಚರವಾಯಿತು. ಅದರ ಹಿಂದೆಯೇ ಕಾರ್ಮುಕಧಾರಿಯಾದ ನಾನು ನನ್ನ ವಾಜಿಯನ್ನು ಓಡಿಸಿದೆನು. ಹುಲಿಯು ನನ್ನನ್ನು ಎದುರಿಸುವದಕ್ಕಾಗಿ ತಿರುಗಿ ನಿಂತಿತು; ನಾನು ಶರವನ್ನು ಕೋ- ದಂಡದಲ್ಲಿ ಹೂಡಿ ಪ್ರಯೋಗಿಸಿದೆನು. ಆ ಶರವು ತೆರಳಿ ಆ ಜಂತುವಿನ ದೇಹದಲ್ಲಿ ಪ್ರವೇಶಿಸಲು, ಹುಲಿಯು ನನ್ನನ್ನು ಎದುರಿಸುವ ಪ್ರಯತ್ನವನ್ನು ಬಿಟ್ಟು ಕಾಡಿನಲ್ಲಿ ಧಾವಿಸಲಾರಂಭಿಸಿತು. ಅದನ್ನು ವಧಿಸಬೇಕೆಂಬ ಹಂಬಲ ದಿಂದ ನಾನು ಆ ಮೃಗವನ್ನು ಹಿಂಬಾಲಿಸಿದೆನು; ನನ್ನ ಸಹಾಯಕರಾದ ಬೇಡರು ನನ್ನನ್ನು ಹಿಂಬಾಲಿಸಲಶಕ್ಯರಾಗಿ ಹಿಂದೆಯುಳಿದರು. ಕಾಡಿನ ಮಧ್ಯ ದಲ್ಲಿ ನಾನು ಮತ್ತು ನನ್ನ ಕುದುರೆ ಮಾತ್ರವಾದೆವು; ಹುಲಿಯು ನನ್ನ ಕಣ್ಮರೆಯಾಗಿ ಕಾಡಿನ ಮಧ್ಯದಲ್ಲಿ ಅಭಂಗುವನ್ನು ಹೊಂದಿತು. ಈ ಪಯಣ ದಿಂದ ನಾನು ಬಹಳ ಬಳಲಿದ್ದೆನು; ಸಹನಾತೀತವಾದ ಪಿಪಾಸೆಯಿಂದ ನನ್ನ ನಾಲಿಗೆಯು ಒಣಗಿ ಹೋಗಿದ್ದಿತು. ಹುಲಿಯನ್ನು ಹಿಂಬಾಲಿಸುವ ಪ್ರಯತ್ನ ವನ್ನು ಬಿಟ್ಟು ನಾಲಿಗೆಯನ್ನು ನೆನೆಯಿಸಲು ಒಂದಿಷ್ಟು ನೀರು ಎಲ್ಲ ಸಿಗಬಹು ದೆಂದು ಹುಡುಕುತ್ತ ನಾನು ಕಾನನದಲ್ಲಿ ಅಲೆಯಲು ಪ್ರಾರಂಭಿಸಿದೆನು."

"ನೀರನ್ನು ಹುಡುಕುತ್ತ ನಾನು ವಿಪಿನದಲ್ಲಿ ಬಹಳ ಹೊತ್ತು ಅಲೆ ದೆನು. ಒಂದು ಪರ್ವತದ ಝರಿಯಲ್ಲಿ ನೀರು ಪ್ರವಹಿಸುತ್ತಿರುವ ಸಪ್ಪಳವು ನನ್ನ ಶ್ರವಣೇಂದ್ರಿಯಗಳಲ್ಲಿ ಪತಿಸಿತು ಆ ದಿಕ್ಕಿಗೆ ನಾನು ನನ್ನ ಕುದುರೆ ಯನ್ನು ತಿರುಗಿಸಿದೆನು. ಅರ್ಧ ಹರದಾರಿ ದೂರ ತೆರಳಲು, ಒಂದು ಗಿರಿಯ ತುದಿಯಿಂದ ನೀರು ಕೆಳಗೆ ಧುಮುಕುತ್ತಲಿರುವ ದೃಶ್ಯವು ಕಂಡುಬಂದಿತು. ಆ ಪ್ರದೇಶಕ್ಕೆ ನಾನು ತೆರಳಿದೆನು. ಬಹು ತಂಪಾದ ನೀರು ಎತ್ತರವಾದ ಒಂದು ಕಲ್ಲುಬಂಡೆಯ ಮೇಲಿನಿಂದ ನೆಗೆದು ಮುಂದಕ್ಕೆ ಹರಿಯುತ್ತಲಿದ್ದಿತು.

ನಾನು ಕುದುರೆಗೆ ನೀರು ಕುಡಿಸಿದೆನು; ಸಾಧುಪ್ರಾಣಿ! ಅದು ಬಹಳ ದಣಿದಿದ್ದಿತು. ಅನೇಕ ಗಾವುದಗಳ ದೂರ ಆ ಜೀವಿಯು ನನ್ನ ಭಾರವನ್ನು ಹೊತ್ತುಕೊಂಡು ಬಂದಿದ್ದಿತು. ನಾನೇ ಬಳಲಿ ಬಾಯಾರಿರುವಾಗ, ಆ ಮೂಕ ಪ್ರಾಣಿಯು ಎಷ್ಟು ಬೆಂಡಾಗಿರಬಹುದೆಂಬದನ್ನು ನಾನು ಮನಸ್ಸಿನಲ್ಲಿಯೇ ಚಿಂತಿಸಿದೆನು. ತನ್ನ ಸಂಕಟಗಳನ್ನು ಮನುಷ್ಯನಿಗೆ ಅರುಹಲು ವಿಶ್ವನಿಯಾಮಕನು ನುಡಿಗಳನ್ನಾಡುವ ಶಕ್ತಿಯನ್ನು ಆ ಚತುಷ್ಪಾದ ಜಂತುವಿಗೆ ನೀಡಿರಲಿಲ್ಲ. ಮಾನವನಾದರೊ ಅದೂ ತನ್ನಂತೆಯೇ ಒಂದು ಜೀವಿಯೆಂದೂ, ತನ್ನಂತೆಯೇ ಹಸಿವು-ತೃಷೆಗಳು ಆ ಪ್ರಾಣಿಗೆ ಇವೆಯೆಂದೂ ವಿಚಾರಿಸುವದು ದುರ್ಲಭವು. ಅದರ ಒಡೆಯನಿಗೆ ಸದ್ಬುದ್ಧಿ ತೋರಿದರೆ ಅಶ್ವಕ್ಕೆ ಹುಲ್ಲೂ ನೀರೂ ಇವೆ; ಇಲ್ಲದಿದ್ದರೆ ನಿರಾಹಾರದ ಏಕಾದಶಿಯೇ ಅದಕ್ಕೆ ಗತಿಯು! ಹೀಗೆಲ್ಲ ನಾನು ವಿಚಾರಿಸಿದೆನು. ನನಗಿಂತ ಹೆಚ್ಚು ಬಳಲಿದ ಕುದುರೆಯು ಬಹಳ ಆರ್ಥಿ-ಯೊಡನೆ ಜಲಪಾನವನ್ನು ಗೈದಿತು. ಅದನ್ನು-ಆ ನನ್ನ ಕುದುರೆಯನ್ನು-ಅಲ್ಲಿ ದಟ್ಟವಾಗಿ ಬೆಳೆದಿರುವ ಹುಲ್ಲು ಮೆಯ್ಯುವದಕ್ಕಾಗಿ ಅದರ ಕಡಿವಾಣಗಳನ್ನು ತೆಗೆದು ಬಿಟ್ಟೆನು. ಹಸಿವೆಯಿಂದ ಬಳಲುತ್ತಿರುವ ಆ ಪ್ರಾಣಿಯು ಹುಲ್ಲನ್ನು ಮೆಯ್ಯಲಾರಂಭಿಸಿತು. ನನಗಾದರೂ ಹಿಂದೆ ಹೇಳಿದಂತೆ ತೃಷೆಯು ಬಹಳವಾಗಿದ್ದಿತು. ನಾನು ಆ ಚಿಕ್ಕ ಹೊಳೆಯಲ್ಲಿಳಿದು ಬೊಗಸೆ ತುಂಬಾ ನೀರನ್ನು ತೆಗೆದುಕೊಂಡು, ಒಣಗಿ ಹೋದ ನನ್ನ ಜಿಹ್ವೆಯನ್ನು ತೊಯ್ಸಿದೆನು. ತಂಪಾದ ಸಿಹಿ ನೀರು! ಅದನ್ನು ನಾನು ಪಾನ ಮಾಡಲು, ಉಷ್ಣದಿಂದ ಪ್ರಕ್ಷುಬ್ಧತೆಯನ್ನು ಹೊಂದಿದ ನನ್ನ ಧಮನಿಗಳು ಶಾಂತತೆಯನ್ನು ಹೊಂದತೊಡಗಿದವು. ಎಷ್ಟು ರುಚಿಯಾಗಿ ತೋರಿತು ಅದು ನನಗೆ! ಅದೇ ಅಮೃತವೆಂದು ನಾನು ತಿಳಿದೆನು. ರಾಜಗೇಹದ ಸಕ್ಕರೆಯ ಪಾನಕ್ಕಿಂತ ಹೆಚ್ಚು ಸಿಹಿಯನ್ನು ನಾನು ಆ ಸಿಹಿ ನೀರಿನಲ್ಲಿ ಉಂಡೆನು. ನನ್ನ ಉದರವನ್ನು ಆ ಶೀತಲೋದಕದಿಂದ ಭರ್ತಿ ಮಾಡಿದೆನು. ಅನಂತರ ಬೆವರಿ ಹೋದ ನನ್ನ ಶರೀರವನ್ನು ಜಲದಿಂದ ಕ್ಷಾಲಿಸಿ ಸ್ನಾನವನ್ನು ನಾನು ಮಾಡಿದೆನು. ನನಗೆ ವಿಶ್ರಾಮವು ಅತ್ಯಾವಶ್ಯಕವಾಗಿದ್ದಿತು. ನಾನು ಅಲ್ಲಿಯೇ ದಟ್ಟವಾಗಿ ಬೆಳೆದಿದ್ದ ಒಂದು ದ್ರುಮಚ್ಛಾಯೆಯನ್ನು ಆಶ್ರಯಿಸಿ ಮಲಗಿದೆನು; ಹಾಗು ಹೆಚ್ಚು ಕಾಲ ವಿಳಂಬವಿಲ್ಲದೆ ಸುಖನಿದ್ರೆಯಲ್ಲಿ ನಿರತನಾದೆನು.

"ಎಷ್ಟು ಸಮಯದ ವರೆಗೆ ನಾನು ನಿದ್ರಿಸಿದೆನೆಂಬುದನ್ನು ಹೇಳಲಾರೆನು; ಬಹು ಸೊಗಸು ನಿದ್ರೆಯಾಗಿದ್ದಿತು ಅದು. ಸ್ವಪ್ನಪಿಶಾಚಿಗಳು

ಬಂದು ನನ್ನನ್ನು ಆತಂಕಪಡಿಸಲಿಲ್ಲ. ನನ್ನ ನಿಕೇತನದಲ್ಲಿ ರೇಶ್ಮೆಯ ಹಾಸಿಗೆಯಲ್ಲಿ ಮಲಗಿ ನಿದ್ರಿಸುವದಕ್ಕಿಂತ ಹೆಚ್ಚು ಸುಖವನ್ನು ಆ ಮರದಡಿಯಲ್ಲಿ ಬಂದ ನಿದ್ರೆಯು ನನಗೆ ನೀಡಿತು. ನಾನು ಎಚ್ಚತ್ತು ನೋಡುವಾಗ ದಿವಾಕರನು ಪಡುವಣದ ದಿಕ್ಕಿನಲ್ಲಿ ಥಳಥಳಿಸುತ್ತಲಿದ್ದನು. ಸಮಯವು ಬಹಳವಾಯಿತೆಂದು ನನ್ನೊಳಗೆ ನಾನೇ ನುಡಿದುಕೊಂಡೆನು. ಹಾಗೆಯೇ ಕಾಡನ್ನು ತ್ಯಜಿಸಿ ದಾರಿಯನ್ನು ಸೇರುವ ಬಗೆ ಹೇಗೆ? ಎಂಬುದಾಗಿ ನಾನು ಆಲೋಚಿಸಲು ಪ್ರಾರಂಭಿಸಿದೆನು. ಕುದುರೆಗೆ ಜೀನು ಹಾಕಿ ಪ್ರಯಾಣಕ್ಕೆ ಉದ್ಯುಕ್ತನಾದೆನು. ಆ ಸಮಯದಲ್ಲಿ ಒಂದು ಹಸುಳೆಯ ಕ್ರಂದನಾಲಾಪವು ಬಂದು ನನ್ನ ಕರ್ಣೇಂದ್ರಿಯಗಳಲ್ಲಿ ಪತಿಸಿತು. ನನಗೆ ಅತ್ಯಾಶ್ಚರ್ಯವಾಯಿತು! ಜನಸಂಚಾರಶೂನ್ಯವಾದ ವಿಪಿನದಲ್ಲಿ ಮಗುವಿನ ಅಳುವು ಕೇಳಿಬರಲು ಕಾರಣವೇನು? ಸಮೀಪದಲ್ಲಿ ಎಲ್ಲಿಯಾದರೂ ಜನವಾಸವಿದೆಯೆ? ಎಂದು ನಾನು ಆಲೋಚಿಸತೊಡಗಿದೆನು. ಅಂತ್ಯದಲ್ಲಿ ಆ ಪ್ರದೇಶಕ್ಕೆ ತೆರಳಿ ಕ್ರಂದನವು ಯಾರದೆಂದು ಅರಿಯೋಣವೆಂಬುದಾಗಿ ನಾನು ಬಗೆದೆನು; ಹಾಗೆಯೇ ನಾನು ಅಶ್ವಾರೂಢನಾಗಿ ಆ ಶೋಕಾಲಾಪವು ಕೇಳಿಬರುತ್ತಲಿದ್ದ ಪ್ರದೇಶಕ್ಕೆ ಚಲಿಸಿದೆನು."

"ಅಮಾತ್ಯರೆ, ಅಲ್ಲಿ ನಾನು ಕಂಡುದೇನು? ಇನ್ನೂರು ಮಾರುಗಳಷ್ಟು ದೂರ ನಾನು ಸಂಚರಿಸಲು ಒಂದು ದ್ರುಮಚ್ಛಾಯೆಯನ್ನು ಆಶ್ರಯಿಸಿದ ಒಬ್ಬ ಬಾಲಕನು ಕ್ರಂದಿಸುವ ಚಿತ್ರವು ದೃಗ್ಗೋಚರವಾಯಿತು. ಆ ಬಾಲಕನು ಕಾಡಿಗೆ ಹೇಗೆ ಏಕಾಂಗಿಯಾಗಿ ಬಂದನು? ಅಳುತ್ತಿರುವ ಕಾರಣವೇನು? ಎಂಬಿತ್ಯಾದಿ ಹಲವು ವಿಚಾರಗಳು ನನ್ನ ಮನಸ್ಸನ್ನು ಆವರಿಸಿದವು. ಒಂದು ವೇಳೆ ಈ ಹಸುಳೆಯ ತಾಯ್ತಂದೆಗಳು ಬಾಲಕನನ್ನು ವಿಪಿನದಲ್ಲಿ ಪರಿತ್ಯಜಿಸಿ ಹೊರಟು ಹೋದರೆ? ಏನೇ ಇರಲಿ; ಅವನೊಡನೆ ಮಾತಾಡಿ ಸಂಗತಿಗಳನ್ನು ತಿಳಿದುಕೊಳ್ಳುವೆನೆಂದು ಬಗೆದು, ನಾನು ಕುದುರೆಯಿಂದ ಇಳಿದು ಅವನ ಸಮೀಪಕ್ಕೆ ತೆರಳಿದೆನು. ಬಾಲಕನಿಗೆ ೧೦-೧೨ ವರ್ಷ ಪ್ರಾಯವಿರಬಹುದು; ನೋಡುವುದಕ್ಕೆ ಬಹು ಮುದ್ದಾಗಿರುವನು; ಕಪ್ಪಾದ ತಲೆಕೂದಲು ಬಾಪ್ಪಮುಖದ ಮೇಲೆ ಬಿದ್ದಿರುವುದು; ಸುಂದರವಾದ ನೇತ್ರರಾಜೀವಗಳಿಂದ ಅಶ್ರುಕಣಗಳು ಒಂದೇಸವನೆ ಹರಿಯುತ್ತಿರುವವು. ಹಾಲಿನಂತೆ ಬಿಳುಪಾಗಿ ಶೋಭಿಸುವ ದಂತಗಳ ಸಾಲುಗಳು, ಕಿತ್ತಳೆ ಹಣ್ಣಿನ ಬಣ್ಣದ ಕೆನ್ನೆಗಳು, ಮೃದುವಾದ ಕೈಕಾಲುಗಳು, ಒಂದು ಮಾತಿನಲ್ಲಿ ಹೇಳಬೇಕಾದರೆ, ಅವನ ಹಾಗೆ ಅಷ್ಟು ಸೌಂದರ್ಯಶಾಲಿಯಾದ ಬಾಲಕನನ್ನು ನಾನು ಅದುವರೆಗೆ

ನೋಡಿರಲಿಲ್ಲ. ಅವನ ಅಳುವು ಬರಿಯ ಅಸಂಬದ್ಧ ಕ್ರಂದನಾಲಾಪವಾಗಿರಲಿಲ್ಲ. 'ಕೇಶವಾನಂತನೇ, ನನ್ನನ್ನು ಕಾಪಾಡು! ನನ್ನನ್ನು ರಕ್ಷಿಸು!' ಎಂಬ ಪ್ರಾರ್ಥನೆಯಾಗಿದ್ದಿತು."

"ನಾನು ಅವನ ಹತ್ತಿರ ತೆರಳಲು, ಅವನ ಎಡಗಾಲಿನ ಕಿರಿಬೆರಳಿನಿಂದ ನೆತ್ತರು ಹರಿಯುತ್ತಿರುವುದನ್ನು ಕಂಡೆನು. ನೆತ್ತರಿನ ರುಚಿಯನ್ನು ಆಸ್ವಾದಿಸುವದಕ್ಕಾಗಿ ನೊಣಗಳು ಆ ಗಾಯವನ್ನು ಮುತ್ತುತ್ತಲಿದ್ದವು. ಬಾಲಕನು ತನ್ನ ಎಡಗೈಯಿಂದ ಆ ನೊಣಗಳನ್ನು ಹೊಡೆದು ಓಡಿಸುತ್ತಲಿದ್ದನು. ಅವನ ಕಿರುಬೆರಳಿನ ಹತ್ತಿರವೇ ಇನ್ನೊಂದು ಬೆರಳೂ ಇದ್ದಿತೆಂದೂ, ಅದನ್ನು ಯಾರೋ ಛೇದಿಸಿರುವರೆಂದೂ ನಾನು ಊಹಿಸಿದೆನು. ಆ ಗಾಯದ ಮಾದರಿಯನ್ನು ನೋಡಿದಾಗ, ಹರಿತವಾದ ಒಂದು ಖಡ್ಗದ ಪ್ರಯೋಗದಿಂದ ಅದು ಆಯಿತೆಂದು ನಾನು ತಿಳಿದೆನು. ಈ ರೀತಿ ಗಾಯವನ್ನು ಹೊಂದಿರುವ ಬಾಲಕನನ್ನು ನೋಡಲು ನನ್ನ ಎದೆಯು ಕರುಣೆಯಿಂದ ತುಂಬಿಹೋಯಿತು. ನಾನು ಅವನ ಹತ್ತಿರಕ್ಕೆ ತಲುಪುವವರೆಗೆ ಅವನು ನನ್ನನ್ನು ಕಾಣಲೇ ಇಲ್ಲವು. ನಾನು ಅವನ ಸಮೀಪಕ್ಕೆ ತೆರಳಿ ನಿಂತೆನು. ನನ್ನನ್ನು ನೋಡುವಾಗ ಅವನ ಮನಸ್ಸಿನಲ್ಲಿರುವ ಭೀತಿಯು ವರ್ಧಿಸಿತು. ಅವನ ವದನಮಂಡಲವು ಇನ್ನಿಷ್ಟು ದೈನ್ಯ ಭಾವವನ್ನು ಹೊಂದಿತು; ಭಯದಿಂದ ಆ ಕಂದನು ಚೀರಿದನು."

"ಕಂದಾ, ನೀನು ಭಯಪಡಬೇಡ" ಎಂದೆನು ನಾನು.

"ಅವನು ತನ್ನ ಶೋಕಾಲಾಪವನ್ನು ನಿಲ್ಲಿಸಿ ನನ್ನ ಮೋರೆಯನ್ನೇ ನಿರೀಕ್ಷಿಸುತ್ತ ನಿಂತನು. ಅನಂತರ "ನನ್ನಿಂದ ನಿಮಗೆ ಬೇಕಾದುದೇನು? ನನ್ನ ಪ್ರಾಣವನ್ನು ನಿಮ್ಮ ಕರದಲ್ಲಿ ಹೊಳೆಯುತ್ತಿರುವ ಖಡ್ಗದಿಂದ" ಎಂದು ಆ ಬಾಲಕನು ಅಳುತ್ತ ನುಡಿದನು "ಅಪಹರಿಸಿರಿ; ಆದರೆ ನನ್ನ ದೇಹದ ಒಂದೊಂದು ಅಂಗವನ್ನು ಛೇದಿಸಿ ನೋವು ಮಾತ್ರ ಮಾಡಬೇಡಿರಿ!"

"ಯಾರೋ ದುಷ್ಟರು ಅವನ ಕಾಲಿನ ಬೆರಳನ್ನು ಕತ್ತರಿಸಿಕೊಂಡು ಹೋದರೆಂದೂ, ನಾನೂ ಅದರಂತೆಯೇ ಅವನನ್ನು ಹಿಂಸಿಸುವದಕ್ಕಾಗಿ ಬಂದವನೆಂದು ಆ ಹಸುಳೆಯು ವಿಚಾರಿಸುತ್ತಿರವನೆಂದೂ ನಾನು ಆ ನುಡಿಗಳಿಂದ ಗ್ರಹಿಸಿದೆನು. ಅವನ ಮನಸ್ಸಿನಲ್ಲಿ ಮೂಡಿದ ಆ ವಿಚಾರವನ್ನು ಹೋಗಲಾಡಿಸಲು ನಾನು ಹೀಗೆ ಹೇಳಿದೆನು: "ಮಗು, ನೀನು ಹೇದರಬೇಡ; ನಿನ್ನನ್ನು ಸಂಕಟಪಡಿಸಲು ಬಂದವನು ನಾನಲ್ಲ. ನೀನು ಯಾರು?"

"ನಾನು ಯಾರೆಂಬುದು ನನಗೇ ತಿಳಿಯದು."

"ನಿನ್ನ ಹೆಸರೇನು?"

"ಆ ಊರಿನವರು ನನ್ನನ್ನು ಚಂದ್ರಹಾಸನೆಂದು ಕರೆಯುತ್ತಲಿದ್ದರು."

"ನಿನಗೆ ತಾಯ್ತಂದೆಗಳಿಲ್ಲವೆ?"

"ಇಲ್ಲ."

"ಹಾಗಾದರೆ ನಿನ್ನನ್ನು ಪೋಷಿಸಿ-ಲಾಲಿಸಿದವರು ಯಾರು?"

"ನನಗೆ ಅಜ್ಜಿಯೊಬ್ಬಳಿದ್ದಳು; ಅವಳೇ ನನ್ನನ್ನು ನೋಡಿ ಸಲಹುತ್ತ ಲಿದ್ದಳು; ಆದರೆ ಅವಳು ಸತ್ತುಹೋದಳು."

"ಅನಂತರ ನೀನು ಹೇಗೆ ದಿನಗಳನ್ನು ಕಳೆದೆ? ನಿನಗೆ ಅನ್ನವನ್ನು ನೀಡುತ್ತಲಿದ್ದವರು ಯಾರು?"

"ಎಲ್ಲರೂ?"

"ಹಾಗೆಂದರೆ......" ಎಂದು ಆಶ್ಚರ್ಯಚಕಿತನಾಗಿ ನಾನು ನುಡಿದೆನು.

"ಆ ಊರಿನವರು ಒಬ್ಬೊಬ್ಬರು ಒಂದೊಂದು ದಿನ ನನ್ನನ್ನು ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ ಅನ್ನಹನ್ನು ಹಾಕುತ್ತಲಿದ್ದರು."

"ಈ ಮಾತುಗಳಿಂದ ಅವನೊಬ್ಬ ಅನಾಥ ಬಾಲಕನೆಂಬುದನ್ನು ಊಹಿಸಿ ತಿಳಿದುಕೊಂಡೆನು; ಆದರೆ ಈ ಅನಾಥ ಬಾಲಕನಿಗೆ ಜನರು ಏಕೆ ದ್ರೋಹವನ್ನು ಬಗೆದರು? ಎಂಬುದು ಮಾತ್ರ ಹೊಳೆಯಲಿಲ್ಲ. ನಾನು ಅವ ನನ್ನು ಕರುಣಾರಸಪರಿಪೂರ್ಣವಾದ ದೃಷ್ಟಿಯಲ್ಲಿ ನೋಡುತ್ತ ಹೀಗೆ ಪ್ರಶ್ನಿ ಸಿದೆನು: "ಮಗೂ, ಜನವಿಹೀನವಾದ ಕಾಡಿಗೆ ನೀನು ಹೇಗೆ ಬಂದೆ?"

"ಅವರು ನನ್ನನ್ನು ಇಲ್ಲಿಗೆ ಕರೆತಂದು, ನನ್ನ ಎಡಗಾಲಿನ ಬೆರಳೊಂ ದನ್ನು ಕತ್ತರಿಸಿ ತೆಗೆದುಕೊಂಡು ಹೋದರು."

"ಅವರು ಎಂದರೆ ಯಾರು?"

"ಅದು ನನಗೆ ತಿಳಿಯದು; ಒಂದು ದಿನ ನಮ್ಮ ಊರಿನ ಮಂತ್ರಿಗಳ ಮನೆಯ ಹತ್ತಿರ ಇತರ ಬಾಲಕರೊಂದಿಗೆ ನಾನು ಆಡುತ್ತಿರುವಾಗ, ನಾ-ಲ್ಕೈದು ಮಂದಿ ಕರಾಳರೂಪಿಗಳಾದ ಜನರು ನನ್ನನ್ನು ಹಿಡಿದರು. ನಾನೆಷ್ಟು ಅಂಗಲಾಚಿ ಬೇಡಿಕೊಂಡರೂ ಅವರು ನನ್ನನ್ನು ಬಿಡಲಿಲ್ಲ. ಅವರು ಬಲಾ ತ್ಕಾರದಿಂದ ಇಲ್ಲಿಗೆ ಕರೆದುಕೊಂಡು ಬಂದು, ನನ್ನ ಬೆರಳನ್ನು ಕತ್ತರಿಸಿ ತೆಗೆದುಕೊಂಡು ಹೋದರು." ಎಂದು ನುಡಿಯುತ್ತ ಆ ಬಾಲಕನು ರೋದಿ ಸಲು ಪ್ರಾರಂಭಿಸಿದನು.

"ಅವನ ಶೋಚನೀಯ ಅವಸ್ಥೆಯನ್ನು ಕಂಡು ನನ್ನ ಹೃದಯದಲ್ಲಿ ದಯೆಯು ಉದಯವನ್ನು ಹೊಂದಿತು. ಅನಾಥ ಬಾಲಕನನ್ನು-ಒಬ್ಬರಿಗೂ ಕೇಡನ್ನು ಬಗೆಯದೆ ಆಡುತ್ತಲಿರುವ ಹಸುಳೆಯನ್ನು ಘೋರವಾದ ವಿಪಿನಾಂತ

ರಕ್ಕೆ ಆ ಪಾಪಿಗಳು ಕೊಂಡು ಬಂದು ಅವನ ಬೆರಳನ್ನು ಛೇದಿಸಿಕೊಂಡೊಯ್ದುದೇಕೆ? ಅದರ ರಹಸ್ಯವೇನೆಂದು ಒಂದು ಕ್ಷಣ ಆಲೋಚಿಸಿದೆನು. ಈ ಬಾಲಕನನ್ನು ಅರಮನೆಗೆ ಒಯ್ದು ಪೋಷಿಸಬೇಕೆಂದು ವಿಚಾರಿಸಿದೆನು; ಆದರೆ ಆ ವೇಳೆಯಲ್ಲಿ ಅವನನ್ನು ನನ್ನ ವಂಶದ ಉತ್ತರಾಧಿಕಾರಿಯಾಗಿ ಮಾಡಬೇಕೆಂದು ನಾನು ನೆನೆದಿರಲಿಲ್ಲ. ಆ ಬಾಲಕನನ್ನು ಕಾಪಾಡಬೇಕೆಂಬುದೇ ನನ್ನ ಆಗಲಿನ ಏಕೋದ್ದೇಶವಾಗಿದ್ದಿತು.''

``ಮಗು, ನೀನು ನನ್ನೊಡನೆ ಬರುವೆಯಾ? ನಿನಗೆ ಯಾವ ನೋವನ್ನು ನಾನು ಮಾಡುವದಿಲ್ಲ; ನನ್ನ ಮನೆಗೆ ಕರೆದುಕೊಂಡು ಹೋಗುವೆನು.''

``ಹೂಂ' ಎಂದು ತನ್ನ ಸಮ್ಮತಿಯನ್ನು ಸೂಚಿಸಿದನು ಬಾಲಕನು.

``ಹಾಗೆಯೇ ನಾನು ಆ ಕಂದನನ್ನು ನೆಲದಿಂದೆತ್ತಿ ಕುದುರೆಯ ಮೇಲೆ ಕೂಡಿಸಿದೆನು. ಕಾಡಿನಿಂದ ಪಾರಾಗುವ ದಾರಿಯನ್ನು ಹುಡುಕುತ್ತ ನಾನು ಅಶ್ವವನ್ನು ಚಲಿಸತೊಡಗಿದೆನು. ಸಂಜೆಯಾಗುವುದರೊಳಗಾಗಿ ದಾರಿಯು ಸಿಕ್ಕಿತು; ನನ್ನ ಬೇಡರ ಮತ್ತು ಅಂಗರಕ್ಷಕರ ಸಮಾಗಮವನ್ನು ನಾನು ಹೊಂದಿದೆನು. ಅವರೊಡನೆ ನಾನು ಪುರವನ್ನು ಸೇರಿದೆನು. ಹಸಿದಿರುವ ಮಗುವಿನ ಕ್ಷುದ್ಬಾಧೆಯನ್ನು ಆಹಾರಗಳನ್ನು ನೀಡಿ ಸಂತೃಪ್ತಿಗೊಳಿಸಿದುದಾಯಿತು. ವೈದ್ಯನೊಬ್ಬನನ್ನು ಕರೆತರಿಸಿ, ಗಾಯಕ್ಕೆ ಔಷಧಗಳನ್ನು ಲೇಪಿಸಲು ನಾನು ಆಜ್ಞಾಪಿಸಿದೆನು. ಅದರಂತೆ ವೈದ್ಯನು ಬಂದು ಗುಲಾಮನ್ನು ಮಾಡಿ ಗಾಯಕ್ಕೆ ಲೇಪಿಸಿದ ನಂತರ ಆ ಗಾಯವನ್ನು ವಸ್ತ್ರದಿಂದ ಕಟ್ಟಿದನು. ವೈದ್ಯನು ಲೇಪಿಸಿದ ಮದ್ದಿನ ಗುಣದಿಂದ ನೋವು ಕಡಿಮೆಯಾಯಿತು. ಬಾಲಕನು ಹಾಸಿಗೆಯಲ್ಲಿ ಮಲಗಿ ನಿದ್ರಾಂಗನೆಯ ಕೃಪಾಕಟಾಕ್ಷ ವೀಕ್ಷಣಕ್ಕೆ ಪಾತ್ರೀಭವಿಸಿದನು.''

``ಬೆಳಗಾಯಿತು; ನನ್ನ ಮಡದಿಯು ನಾನು ಕಾಡಿನಿಂದ ಹಿಂದಿರುಗಿ ಬರುವಾಗ ಒಬ್ಬ ಅನಾಥ ಬಾಲಕನನ್ನು ಕರೆದುಕೊಂಡು ಬಂದಿರುವೆನು ಎಂಬುದನ್ನು ಅರಿತಳು. ಅವಳು ಕೂಸನ್ನು ನೋಡುವದಕ್ಕಾಗಿ ಬಂದಳು. ಆಗ ನಾನೂ ಹುಡುಗನ ಪಕ್ಕದಲ್ಲಿಯೇ ಇದ್ದೆನು. ಅವಳು ಸೌಂದರ್ಯದಿಂದ ತುಂಬಿದ ಆ ಶಿಶುವನ್ನು ನೋಡಿದಳು. ಅವಳು ತನ್ನ ದೃಷ್ಟಿಯನ್ನು ಐದು ನಿಮಿಷಗಳವರೆಗೆ ಬಾಲಕನ ಮೋರೆಯಿಂದ ಪ್ರತಿ ಚಲಿಸಲಿಲ್ಲ. ಅನಂತರ ಅವಳು: 'ಮಗುವು, ಎಷ್ಟು ಚಲುವಾಗಿದೆ?' ಎಂದಂದಳು ಆ ನುಡಿಗಳಲ್ಲಿ ತನಗೆ ಆ ರೀತಿಯ ಒಬ್ಬ ಕಂದನು ಲಭಿಸಲಿಲ್ಲವಲ್ಲ! ಎಂಬ ಚಿಂತೆಯು ತುಂಬಿ ತುಳುಕಾಡುತ್ತಲಿತ್ತು. ನಾನು:-'ಮಗುವು ಸುಂದರವಾಗಿದೆ' ಎಂದು ಹೇಳಿದೆನು.

"ನಮಗೆ ಈ ರೀತಿಯ ಒಂದು ಮುದ್ದುಗೂಸನ್ನು ಪಡೆಯುವ ಭಾಗ್ಯವಿಲ್ಲ."

"ಪೂರ್ವ ಜನ್ಮದ ಪಾಪಕರ್ಮಗಳ ಫಲವಾಗಿ, ಸಂತಾನ ಸುಖವು ಈ ಜನ್ಮದಲ್ಲಿ ನಮಗೆ ಲಭಿಸುವಂತಿಲ್ಲ; ಈ ಜನ್ಮದಲ್ಲಿಯಾದರೂ ಸುಕೃತಗಳನ್ನು ನಡೆಯಿಸಿ, ಮುಂದಿನ ದಾರಿಯನ್ನು ಹಸನು ಮಾಡೋಣ" ಎಂದು ಅವಳ ಮನಸ್ಸಿನಲ್ಲಿ ಹರಡಿದ್ದ ಚಿಂತೆಯನ್ನು ಕಡಿಮೆ ಮಾಡಲು ನಾನು ಪ್ರಯತ್ನಿಸಿದೆನು.

"ಅವಳು ಏನೂ ಮಾತಾಡಲಿಲ್ಲ: ಸ್ವಲ್ಪ ಹೊತ್ತು ಆಲೋಚಿಸುತ್ತ ನಿಂತಳು. ಅನಂತರ ಅವಳು ನನ್ನ ಕಡೆಗೆ ಒಂದು ಕಟಾಕ್ಷವನ್ನು ಬೀರಿ ಹೇಳಲಾರಂಭಿಸಿದಳು: 'ಈ ಜನ್ಮದಲ್ಲಿ ಮಕ್ಕಳನ್ನು ಹೆತ್ತು ಅವರನ್ನು ಪೋಷಿಸುವ ಭಾಗ್ಯವು ನಮಗಿಲ್ಲವೆಂಬುದು ನಿಜ; ಆದರೆ ಈ ಮಗುವನ್ನು ಸ್ವಂತ ಕೂಸಿನಂತೆ ವಿಚಾರಿಸಿ ಪೋಷಿಸಕೂಡದೇಕೆ? ಶೂನ್ಯವಾಗಿರುವ ಈ ಎದೆಯಲ್ಲಿ ಈ ಸುಂದರಬಿಂಬವನ್ನು ಪ್ರತಿಷ್ಠಾಪಿಸಬಾರದೇಕೆ?' ಎಂಬುದಾಗಿ."

"ನಾನು ಪ್ರತ್ಯುತ್ತರವನ್ನು ಹೇಳಲಿಲ್ಲ; ಚಿಂತಾಮಗ್ನನಾದೆನು. ಈ ಮಗುವು ಯಾರದು? ಕುಲ-ಗೋತ್ರಗಳಿಲ್ಲದ ಅನಾಥನನ್ನು ಪುತ್ರತುಲ್ಯವಾಗಿ ನೆನೆಯುವದು ಹೇಗೆ? ನನ್ನ ಸಂಕುಚಿತ ಮನಸ್ಸು ಆ ಪ್ರೇಮವನ್ನು ಅನುಭವಿಸಲು ಒಪ್ಪಲಿಲ್ಲ: ಕುಲ-ಗೋತ್ರಗಳ ಗೋಡೆಗಳು ಪ್ರತಿಬಂಧವಾಗಿ ನಿಂತಿದ್ದುವು. ನನ್ನ ಹೆಂಡತಿಯ ಹೃದಯವು ನನಗಿಂತಲೂ ಹೆಚ್ಚು ವಿಶಾಲವಾಗಿದೆ. ಅವಳು ಕುಲಗೋತ್ರಗಳ ಗೋಡೆಗಳನ್ನು ದಾಟಿ, ಅನಾಥ ಬಾಲಕನಲ್ಲಿ ತನ್ನ ಪ್ರೇಮವನ್ನು ಹರಿಸಲು ಸನ್ನದ್ಧಳಾದಳು."

"ನಿನಗೇನು ಹುಚ್ಚು! ಈ ಬಾಲಕನು ಯಾವ ಕುಲದವನೆಂಬುದನ್ನು ನಾವು ತಿಳಿದಿರುವೆವೇ? ಅನಾಥ ಶಿಶುವಿಗೆ ಇಷ್ಟು ಮಹತ್ವವನ್ನು ನೀಡುವುದು ಅನುಚಿತವು!"

"ನನಗೆ ಈ ಬಾಲಕನಲ್ಲಿ ಅನಿರ್ವಚನೀಯವಾದ ಪ್ರೇಮವು ತೋರುತ್ತಿರುವದು; ಈ ಸುಂದರ ವಿಗ್ರಹವನ್ನು ವೀಕ್ಷಿಸುವಾಗ ದುಃಖದಿಂದ ಬೆಂದ ನನ್ನ ಎದೆಯು ಶಾಂತಿಯನ್ನು ಅನುಭವಿಸುತ್ತಿರುವದು. ಈ ಬಾಲಕನನ್ನು ವಾತ್ಸಲ್ಯದಿಂದ ಲಾಲಿಸುತ್ತ, ಸಂತಾನಸುಖದ ಕನಸನ್ನು ಕಾಣುವೆನು. ಕುಲ-ಗೋತ್ರಗಳಿಗಾಗಿ ದುಃಖದಲ್ಲಿ ಬೆಯ್ಯಲು ನನಗೆ ಶಕ್ತಿ ಸಾಲದು."

"ಇದಾಗಿತ್ತು ಅವಳ ನಿರ್ಧಾರವು. ಆ ಹೆಣ್ಣೊಡಲು ಮಕ್ಕಳಿಗಾಗಿ ಹಂಬಲಿಸುತ್ತ ಎಷ್ಟು ವ್ಯಸನಗಳನ್ನುಂಡಿತ್ತೆಂಬುದನ್ನು ನಾನು ಬಲ್ಲೆನು.

ನನಗೆ ಇಷ್ಟವಿಲದಿದ್ದರೂ, ಅವಳ ನಿಶ್ಚಯಕ್ಕೆ ಪ್ರತಿ ಹೇಳಿ, ಅವಳ ಮನಸ್ಸನ್ನು ನೋಯಿಸಲು ನನ್ನ ಮನವು ಒಪ್ಪಲಿಲ್ಲ. ನಾನು ಸಮ್ಮತಿಯನ್ನಿತ್ತೆನು. ಚಂದ್ರಹಾಸನು,-ಆ ಅನಾಥಬಾಲಕನು,-ನನ್ನ ಮಡದಿಯ ವಾತ್ಸಲ್ಯಪರಿಪೂರ್ಣವಾದ ಲಾಲನೆಯ ನೆರಳಿನಲ್ಲಿ ಬೆಳೆಯಲಾರಂಭಿಸಿದನು."

"ಆ ಹುಡುಗನ ಬುದ್ಧಿಯು ಅತ್ಯಂತ ಚುರುಕಾದುದು. ಬಹು ಸುಲಭದಲ್ಲಿ ಗಹನವಾದ ಸಂಗತಿಗಳನ್ನು ಅವನ ಮತಿಯು ಗ್ರಹಿಸುತ್ತಲಿತ್ತು. ವಿದ್ಯೆಯನ್ನು ಕಲಿಯುವುದರಲ್ಲಿ ಅವನ ವದನಮಂಡಲದಲ್ಲಿ ಒಂದು ಅಪೂರ್ವ ತೇಜಸ್ಸು ಕಂಗೊಳಿಸಲಾರಂಭಿಸಿತು. ಸತ್ಯನಿಷ್ಠೆಯು ಅವನ ಒಂದು ಚಟವಾಗಿ ಪರಿಣಮಿಸಿತು. ನೀತಿ-ನ್ಯಾಯಗಳ ಮರ್ಮವನ್ನರಿಯಲು ಅವನು ಆಗ್ರಹಿಸತೊಡಗಿದನು. ಧೀರತೆಯು ಅವನ ಶರೀರದಲ್ಲಿ ಸ್ಫುರಿಸಲಾರಂಭಿಸಿತು."

"ಹೀಗಿರಲು, ಒಂದು ದಿನ ತನ್ನ ಸಂಗಡದ ಕೆಲವು ಬಾಲಕರೊಂದಿಗೆ ಚಂದ್ರಹಾಸನು ಒಂದು ವನವಿಹಾರಕ್ಕಾಗಿ ಗಮಿಸಿದನು. ಅವರು ವನದಲ್ಲಿ ಸಂಚರಿಸಿ ವಿವಿಧ ಆನಂದಗಳಿಂದ ತಲ್ಲೀನರಾಗಿ ಹಿಂದಿರುಗಿ ಬರುವಾಗ, ದಾರಿಯಲ್ಲಿ ಒಂದು ಹುಲಿಯು ಬಾಲಕರ ಗುಂಪಿನ ಮೇಲೆ ನೆಗೆದಿತಂತೆ. ಆಗ ಚಂದ್ರಹಾಸನನ್ನು ಬಿಟ್ಟು ಇತರ ಬಾಲಕರೆಲ್ಲರೂ ಆ ದುಷ್ಟಪ್ರಾಣಿಯನ್ನು ಕಂಡು ಭಯವಿಹ್ವಲಚಿತ್ತರಾಗಿ, ಕಾಡಿನಲ್ಲಿ ನಾನಾ ದಿಕ್ಕುಗಳನ್ನು ಹಿಡಿದು ಓಡಿ ಹೋದರು; ಆದರೆ ಚಂದ್ರಹಾಸನು ಕದಲಲಿಲ್ಲ; ಅವನು ಹತ್ತಿರವಿದ್ದ ಒಂದು ಮರದ ದೊಣ್ಣೆಯನ್ನು ತೆಗೆದುಕೊಂಡು, ಒಂದು ಹೆಜ್ಜೆಯನ್ನು ಸಹ ಹಿಂದಿಡದೆ ನಿಂತಲ್ಲಿಯೇ ನಿಂತನು. ಹುಲಿಯು ಅವನ ಮೇಲೆ ನೆಗೆದಿತು; ಚಂದ್ರಹಾಸನು ತನ್ನ ಕರದಲ್ಲಿರುವ ದಂಡದಿಂದ ಆ ಭಯಂಕರ ಜೀವಿಯನ್ನು ಪ್ರಹರಿಸಿದನು. ಅಲ್ಲಿ ಚಿಕ್ಕದಾದ ಒಂದು ಕಾಳಗವೇ ನಡೆದಿತು; ಬಾಲಕನೂ ಹುಲಿಯೂ ಕದನದಲ್ಲಿ ವಿಜಯವನ್ನು ಬಯಸುತ್ತ ಹೋರಾಡಿದರು. ಹುಲಿಯು ತನ್ನ ಉಗುರುಗಳಿಂದ ಚಂದ್ರಹಾಸನ ಮೈಯನ್ನು ಪರಚಿ, ಗಾಯಗೊಳಿಸಿತು. ಅವನ ಅಂಗಗಳಿಂದ ನೆತ್ತರವು ಹರಿಯಲಾರಂಭಿಸಿತು. ಆ ಬಾಲಕನು ಆ ಭಯಂಕರ ವ್ಯಾಘ್ರದ ಪ್ರತಾಪವನ್ನು ಕಂಡು ಎದೆಗುಂದಲಿಲ್ಲ. ತನ್ನ ಕರದಲ್ಲಿರುವ ದೊಣ್ಣೆಯಿಂದ ಅವನು ಆ ಜಂತುವನ್ನು ಪ್ರಹರಿಸುತ್ತ ಕಾದಾಡಿದನು. ಅಂತ್ಯದಲ್ಲಿ ಆ ವ್ಯಾಘ್ರವೇ ಪರಾಜಯವನ್ನು ಹೊಂದಿ ಮೃತ್ಯುವಿನ ಕೊರಳಿಗೆ ಮಾಲೆಯನ್ನು ಹಾಕಿತು; ಹುಡುಗನು ವಿಜಯಿಯಾದನು" ಎಂದು ಕುಳಿಂದಕನು ದುಷ್ಟಬುದ್ಧಿಯ ಮೋರೆಯನ್ನು ನೋಡುತ್ತ ನುಡಿದನು. ಆ ವೃದ್ಧ ಮಾಂಡಲಿಕನ ನೇತ್ರಗಳಲ್ಲಿ ಅಭಿಮಾನ ಮತ್ತು

ಹರ್ಷಗಳು ಉಕ್ಕಿ ಹರಿಯುತ್ತಲಿದ್ದುವು.

ದುಷ್ಟಬುದ್ಧಿಯ ಮುಖಭಾವವು ಅವನ ಮನಸ್ಸು ಚಿಂತಾವೃತ್ತವಾಗಿದೆ, ಎಂದು ಹೇಳುತ್ತಲಿತ್ತು. ಅವನ ಕಣ್ಣುಗಳು ತನ್ನ ಪ್ರಯತ್ನದಲ್ಲಿ ಮನುಷ್ಯನು ಪರಾಜಿತನಾಗುವಾಗ ಅವನಲ್ಲುಂಟಾಗುವ ನಿರಾಶೆಯನ್ನು ಹೊರಸೂಸಿದವು. ಕುಳಿಂದಕನ ಹರ್ಷವನ್ನಾಗಲಿ ಅವನ ನುಡಿಗಳಲ್ಲಿ ತುಂಬಿರುವ ಸ್ನೇಹರಸವನ್ನಾಗಲಿ ಆಸ್ವಾದಿಸಲು ಅಮಾತ್ಯನು ಸನ್ನದ್ಧನಾಗಿರಲಿಲ್ಲ. ದುಷ್ಟಬುದ್ಧಿಯಲ್ಲಿ ಕಾಣ ಬಂದ ಈ ವಿಚಿತ್ರ ಪ್ರಕೃತಿಯನ್ನು ಅವಲೋಕಿಸಿ, ಕುಳಿಂದಕನು ಆಶ್ಚರ್ಯವಿಹ್ವಲನಾದನು. ತನ್ನ ನುಡಿಗಳು ದುಷ್ಟಬುದ್ಧಿಯನ್ನು ಚಿಂತೆಯ ಕಡಲಲ್ಲಿ ದೂಡಲು ಕಾರಣವೇನಿರಬಹುದೆಂದು ಅವನು ಊಹಿಸಲು ಪ್ರಯತ್ನಿಸಿದನು; ಆದರೆ ಆ ರಣಧೀರನ ಬುದ್ಧಿಯು ಅದನ್ನು ಗ್ರಹಿಸಲು ಪರ್ಯಾಪ್ತವಾಗಲಿಲ್ಲ.

"ಅಮಾತ್ಯರೇ! ಅದೇನು, ವಿಚಾರಮಗ್ನರಾಗಿರುವಿರಿ?" ಎಂದನು ಮಾಂಡಲಿಕನು.

"ಊಂ, ಹೂಂ, ಏನೂ ಇಲ್ಲ; ಕುಂತಳದ ರಾಜಕಾರಣದ ವಿಚಾರವು ನನ್ನ ಮೆದುಳಿನೊಳಗೆ ಬಂದು, ಸ್ವಲ್ಪ ಅಶಾಂತತೆಯನ್ನು ಹುಟ್ಟಿಸಿತು ಅಷ್ಟೆ!

"ನನ್ನ ಕತೆಯು ತಮಗೆ ಬೇಸರವನ್ನುಂಟು ಮಾಡಿತೇ?"

"ಛೇ! ಎಂದಿಗೂ ಇಲ್ಲ: ಬಹು ಸ್ವಾರಸ್ಯವಾಗಿದೆ. ಮುಂದಕ್ಕೆ ಹೇಳಿ'

"ತಮಗೆ ಬೇಸರವಾಗದಿದ್ದರೆ," ಎಂದು ಕುಳಿಂದಕನು ತನ್ನ ಕತೆಯನ್ನು ಮುಂದುವರಿಸಿದನು: "ಹೇಳುವೆನು ಚಂದ್ರಹಾಸನ ಈ ಅಪ್ರತಿಮ ಸಾಹಸವು ನನ್ನನ್ನು ಅದ್ಭುತ ಪರತಂತ್ರನನ್ನಾಗಿ ಮಾಡಿತು ಇವನು ನಾನು ಊಹಿಸಿದಂತೆ ಕುಲ-ಗೋತ್ರಗಳಿಲ್ಲದ ಅನಾಥ ಬಾಲಕನಾಗಿದ್ದರೆ, ಈ ಶೌರ್ಯ-ಸಾಹಸಗಳು ಹೇಗೆ ತಾನೆ ಆ ಬಡಕಲು ಎಸೆಯಲ್ಲಿ ಸ್ಫುರಿಸಲು ಸಾಧ್ಯವಿದೆ? ಇವನ ಈ ಕೃತ್ಯವು ಇವನೊಬ್ಬ ಕ್ಷತ್ರಿಯ ಕುಲಸಂಜೀವನೆಂಬುದಕ್ಕೆ ಪ್ರತ್ಯಕ್ಷ ನಿದರ್ಶನವಾಗಿತ್ತು. ಅವನ ಧಮನೀಯುಗಳಲ್ಲಿಯ ಕ್ಷತ್ರಿಯ ರಕ್ತವು ಅವನನ್ನು ಈ ಕೃತ್ಯವನ್ನು ಮಾಡಲು ಪ್ರೇರೇಪಿಸಿತೆಂಬ ಭಾವನೆಯು ನನ್ನಲ್ಲಿ ಉದಯವನ್ನು ಹೊಂದಿತು. ಆ ಬಾಲಕನಲ್ಲಿ ನನ್ನ ವಂಶದ ಹೆಸರನ್ನು ಹೇಳಿಸುವ ಚೈತನ್ಯವನ್ನು ನಾನು ವೀಕ್ಷಿಸಿದೆನು. ಈ ಸಂಭವದ ನಂತರ ಅವನೊಬ್ಬ ತಿರುಪೆಯ ಹುಡುಗನಾಗಿ ನನಗೆ ತೋರಲಿಲ್ಲ. ಅವನೊಬ್ಬ ಅನಾಥನೆಂಬ ಭಾವನೆಯು ನನ್ನ ಸ್ಮೃತಿಪಥವನ್ನು ಬಿಟ್ಟು ತೊಲಗಿತು. ನನ್ನಲ್ಲಿರುವ ಚೈತನ್ಯದ ಪ್ರತಿಬಿಂಬವನ್ನು ನಾನು ಅವನಲ್ಲಿ ನೋಡಿದೆನು."

"ಇದು ವರೆಗೆ ನಾನು ಅವನನ್ನು ಕುರಿತು ತೋರುತ್ತಲಿರುವ ಅಲಕ್ಷ್ಯ ಭಾವವನ್ನು ನಾನು ಪರಿತ್ಯಜಿಸಿಡೆನು; ಅಗಾಧವಾದ ಪ್ರೇಮವು ನನಗೆ ಆ ಬಾಲಕನ ಮೇಲೆ ತೋರತೊಡಗಿತು. ಬಾಲ್ಯದಲ್ಲಿಯೇ ಒಂದು ವ್ಯಾಘ್ರವನ್ನು ಎದುರಿಸುವ ಧೈರ್ಯವಿರುವವನು ಮುಂದೆ ಕುಳಿಂದ ಪ್ರಾಂತವನ್ನು ಪರಿಪಾಲಿಸಲೂ ನನ್ನ ವಂಶದ ಕೀರ್ತಿಯು ದಿಗಂತದ ವರೆಗೆ ಪಸರಿಸುವಂತೆ ಮಾಡಲೂ ಶಕ್ತನಾಗುವೆನೆಂದು ನಾನು ತಿಳಿದೆನು. ಅವನು ನನಗೆ ಅನ್ಯನಾಗಿ ತೋರಲಿಲ್ಲ; ನನ್ನ ಸ್ವಂತ ಮಗುವಿನಂತೆ ನಾನು ಅವನನ್ನು ಸಂರಕ್ಷಿಸತೊಡಗಿದೆನು. ನನ್ನ ಅನಂತರ ಕುಳಿಂದವಂಶದ ಹೆಸರನ್ನುಳಿಸುವವನು ಅವನೆಂದು ನಾನು ನಿರ್ಧರಿಸಿದೆನು."

"ಅವನಾದರೂ ಅವನಲ್ಲಿ ನಾನು ಅರ್ಪಿಸಿದ ಸ್ನೇಹ-ವಿಶ್ವಾಸಗಳಿಗೆ ಯೋಗ್ಯನೇ ಆಗಿರುವನು. ರಾಜನೀತಿ, ರಣಶಾಸ್ತ್ರ, ನೀತಿ-ನ್ಯಾಯ ಇವುಗಳಲ್ಲಿ ಅವನು ಕ್ರಮೇಣ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿದನು ಈಗ ಕುಳಿಂದ ಪ್ರಾಂತ ಪಾಲನೆಯ ಯಶಸ್ಸು ಅವನಿಗೇ ಸಲ್ಲಬೇಕಾಗಿದೆ. ಮುದುಕನಾದ ನಾನು ಶಾಸನ ಕಾರ್ಯಗಳ ಭಾರವನ್ನು ಅವನಿಗೆ ಹೊರಿಸಿರುವೆನು. ಅವನು ಅತ್ಯಂತ ಚಾತುರ್ಯದಿಂದ ರಾಜಕಾರಣಗಳನ್ನು ಸಾಗಿಸುತ್ತಿರುವನು. ಅವನಾಗಿದ್ದಾನೆ ನನಗೆ ಶಾಂತಿಯನ್ನು ನೀಡುವ ಆಧಾರಸ್ತಂಭ ಈಗ ತಾವು ಕಂಡುದುದು ಅವನನ್ನೇ!"

---

## ಚಂದ್ರಹಾಸನು ರಾಜಧಾನಿಗೆ ಹೊರಡುವನು.

ತರುಣನು ಅತ್ಯಂತ ತೇಜಸ್ವಿಯಾಗಿದ್ದಾನೆ; ಶೌರ್ಯವು ಅವನ ಅಂಗೋಪಾಂಗಗಳಲ್ಲಿ ಸ್ಫುರಿಸುತ್ತಲಿರುವದು, ಎಂದು ಚಂದ್ರಹಾಸನನ್ನು ಪ್ರಶಂಸಿಸುತ್ತಿರುವವನ ಹಾಗೆ ನಟಿಸುತ್ತ ಅಮಾತ್ಯನು ನುಡಿದನು: "ಇವನ ಬಾಹುಗಳ ಬಲವು ಕುಂತಳ ಸಾಮ್ರಾಜ್ಯದ ಕೀರ್ತಿಯನ್ನು ಹೆಚ್ಚಿಸಲಿ!"

"ಈಶ್ವರ ಕಟಾಕ್ಷದಿಂದ ತಮ್ಮ ನುಡಿಗಳು ನಿಜವಾಗಲಿ!" ಎಂದು ಪುತ್ರನ ಕಲಿತನವನ್ನು ನೆನೆಯುತ್ತ ಹರ್ಷಭರಿತನಾದ ಮಾಂಡಲಿಕನು ನುಡಿದನು.

ಸಚಿವೋತ್ತಮನು ಮಾತಾಡಲಿಲ್ಲ; ಕ್ಷಣಕಾಲದವರೆಗೆ ಅವನ ವದನವು ಅತ್ಯಂತ ಗೌರವವಾದ ಭಾವವನ್ನು ತಾಳಿತು. ಯಾವುದೋ ಒಂದು ಪ್ರಬಲವಾದ ಚಿಂತೆಯಲ್ಲಿ ಅವನು ಮಗ್ನನಾಗಿರುವನೆಂಬುದನ್ನು ಅವನ ಮುಖ

ಬಿಂಬದಲ್ಲಿ ಮಿಂಚಿನಂತೆ ಹೊಳೆದು ಮಾಯವಾಗುತ್ತಿರುವ ಭಾವ-ಭೇಧಗಳು ಸೂಚಿಸುತ್ತಲಿದ್ದವು. ಕುಳಿಂದಕನಾದರೂ ಮಗನ ಭಾವೀ ಯಶಸ್ಸನ್ನು ಕುರಿತು ಸ್ವಪ್ನ ಸಾಮ್ರಾಜ್ಯದ ಸುಖವನ್ನು ಆಸ್ವಾದಿಸುತ್ತ ಆ ಆನಂದದಲ್ಲಿ ತಲ್ಲೀನನಾಗಿದ್ದನು.

"ಮಾಂಡಲಿಕರೇ!" ಎಂಬ ದುಷ್ಟಬುದ್ಧಿಯ ವಚನಗಳು ಆ ವಸತಿಯಲ್ಲಿ ವ್ಯಾಪಿಸಿದ್ದ ಶಾಂತತೆಯನ್ನು ಭಂಗಿಸಿದುವು: "ನಾನು ಇದುವರೆಗೆ ನುಡಿಯದಿದ್ದರೂ ಪ್ರಬಲವಾದ ಒಂದು ರಾಜಕಾರಣವು ನನ್ನನ್ನು ತಮ್ಮ ನಿಕೇತನಕ್ಕೆ ಬರುವಂತೆ ಪ್ರೇರೇಪಿಸಿತು. ಇದನ್ನು ತಾವು ಒಂದು ವೇಳೆ ಗ್ರಹಿಸಿರಬಹುದು."

"ಹೂಂ ಅಮಾತ್ಯರೇ, ತಮ್ಮ ಈಗಲಿನ ಸಂದರ್ಶನಕ್ಕೆ ರಾಜಕಾರಣದ ಬಂಧನವಿರಲಿಕ್ಕಿಲ್ಲವೆಂದೂ ಅದು ಪ್ರೇಮ-ಪಿಶಾಚ್ಯದ ಲಾಂಛನವೆಂದೂ ನಾನು ಊಹಿಸಿದ್ದೆನು; ತಾವೇ ಇಲ್ಲಿ ಬರುವಂತೆ ಪ್ರೇರೇಪಿಸಿದ ಆ ರಾಜಕಾರಣದ ಸಂಗತಿಯು ಅತ್ಯಂತ ಮಹತ್ವದ್ದಿರಬೇಕು ಎಂಬುದರಲ್ಲಿ ಸಂಶಯವಿಲ್ಲ. ರಾಜಧಾನಿಗೆ ಕುಳಿಂದಕನ ಸಹಾಯವು ಅವಶ್ಯವಾಗಿದ್ದ ಪಕ್ಷದಲ್ಲಿ, ಅವನು ನಾನು ತನ್ನಿಂದ ಉಪ್ಪನ್ನು ಮರೆತಿಲ್ಲ ಎಂಬುದನ್ನು ತೋರಿಸಲು ಇದೊಂದು ಅನುಕೂಲ್ಯ ಸಂದರ್ಭವೆಂಬುದಾಗಿ ಭಾವಿಸುತ್ತೇನೆ."

"ತಾವು ನಿಸ್ಸೀಮರಾದ ಸ್ವಾಮಿನಿಷ್ಠರು ಎಂಬುದು ಕುಂತಳ ಸಾಮ್ರಾಜ್ಯಕ್ಕೆ ತಿಳಿದ ಸಂಗತಿಯಾಗಿದೆ; ಆದರೆ ತಮ್ಮ ಈ ಸಂಪ್ಪಿನ ಕಾಲದಲ್ಲಿ ತಮ್ಮ ಸಹಾಯವನ್ನು ಬಯಸಿ ತಮಗೆ ತೊಂದರೆಯನ್ನು ನೀಡುವುದು ಉಚಿತವಲ್ಲವೆಂಬುದಾಗಿ ಭಾವಿಸಿದುದರಿಂದ, ಇದುವರೆಗೆ ಅದನ್ನು ಕುರಿತು ಪ್ರಸ್ತಾಪಿಸಲು ನಾನು ಹಿಂಜರಿದೆನು; ಆದರೆ ಉಪಾಯವಿಲ್ಲ ಕುಂತಳದ ಮಾನವು ತಮ್ಮ ಸಹಾಯದಿಂದ ನೆಲೆ ನಿಲ್ಲುವಂಥ ಕಾಲವು ಬಂದಿದೆ"

"ಅಮಾತ್ಯರೇ, ತಮ್ಮ ಮಾತುಗಳಿಂದ ಕಾರ್ಯವು ಅತ್ಯಂತ ಗೌರವದ್ದೆಂದು ನಾನು ತಿಳಿದೆನು. ಕುಂತಳದ ಮಾನಕ್ಕೆ ಧಕ್ಕೆಯನ್ನುಂಟು ಮಾಡುವಂಥ ಆ ವಿಪತ್ತು ಯಾವುದು? ಇಷ್ಟು ಭಯಂಕರವಾದ ಸಂದರ್ಭವು ಆಸನ್ನವಾಗಿರುವಾಗಲೂ ತಾವು ನನ್ನನ್ನು ಸಮೀಪಿಸಲು ಹಿಂಜರಿದುದನ್ನು ಕಂಡು ಸೋಜಿಗವಾಗಿದೆ!"

"ಕಾರ್ಯವು ಭಯಂಕರ ರೂಪದ್ದೇ ಆಗಿರುವದು; ಮಹಾರಾಜರು ವೃದ್ಧರಾದ ತಮ್ಮ ಶಾಂತಿಯನ್ನು ಭಂಗಿಸುವದು ಸರಿಯಲ್ಲವೆಂದೂ, ಕುಂತಳದ ಸೇವೆಯಲ್ಲಿ ತಮ್ಮ ತಲೆಯು ಬೆರೆತು ಹೋಗಿರುವಾಗ ಇನ್ನೂ ಹೆಚ್ಚಿನ

ತ್ಯಾಗಗಳನ್ನು ಮಾಡಲು ತಮ್ಮನ್ನು ನಿರ್ಬಂಧಿಸುವದು ಭೂಷಣವಲ್ಲವೆಂದೂ ಬಗೆದಿದ್ದರು. ಆದುದರಿಂದ ನಾವು ಇದುವರೆಗೆ ತಡಮಾಡಿದೆವು; ಈಗ ನಿರ್ವಾಹವಿಲ್ಲದ ಆ ಪ್ರಸಂಗವು ಬಂದೊದಗಿದೆ; ಆದುದರಿಂದ ನಾನೇ ರಾಜಧಾನಿಯಿಂದ ಇಲ್ಲಿಗೆ ಓಡಿ ಬಂದೆನು."

"ಅಂಥ ಬಿಕ್ಕಟ್ಟು ಯಾವುದು?" ಎಂದು ಉತ್ಸುಕನಾದ ಕುಳಿಂದಕನು ಪ್ರಶ್ನಿಸಿದನು.

"ಲಾಟದೇಶದ ಅರಸರು" ಎಂದು ಅತ್ಯಂತ ಗೌರವವಾದ ಸ್ವರದಲ್ಲಿ ದುಷ್ಟಬುದ್ಧಿಯು ಹೇಳತೊಡಗಿದನು:—"ಕುಂತಳವನ್ನು ಆಕ್ರಮಿಸಲು ಹೊರಟಿರುವರು ಎಂಬ ವಾರ್ತೆಯನ್ನು ಒಂದುವೇಳೆ ತಾವು ಅರಿತಿರಬಹುದು. ಅವರೊಡನೆ ಕಾದಾಡಲು ಕುಳಿಂದದ ಭಟರಲ್ಲದೆ ಇನ್ನಾರೂ ಸಮರ್ಥರಲ್ಲ!"

"ಲಾಟದೇಶದವರು ಕುಂತಳಾಕ್ರಮಣಕ್ಕಾಗಿ ಹೊರಟಿರುವರೆಂಬ ಪ್ರಸ್ತಾಪವನ್ನು ನಾನು ಶ್ರಾವಿಸಿದೆನು; ಆದರೆ ಅದು ವಾಸ್ತವವೆಂಬುದನ್ನು ನಾನು ತಿಳಿದಿರಲಿಲ್ಲ."

"ನಮ್ಮ ಗೂಢಚಾರರ ಮೂಲಕ ಅದು ವಾಸ್ತವವೆಂಬುದು ತಿಳಿದು ಬಂದಿದೆ. ಅತ್ಯಂತ ಸುಶಿಕ್ಷಿತವಾದ ಸೈನ್ಯದೊಂದಿಗೆ ಅವರು ಆಕ್ರಮಿಸಲು ಬರುತ್ತಿರುವರಂತೆ. ನಮ್ಮ ಚಾರರ ಮಾತಿನಿಂದ ರಾಜಧಾನಿಯಲ್ಲಿರುವ ನಮ್ಮ ಸೈನ್ಯಶಕ್ತಿಯು ಶತ್ರುಗಳನ್ನು ಎದುರಿಸಲು ಪರ್ಯಾಪ್ತವಾಗಲಾರದೆಂಬುದು ನನಗೆ ಹೊಳೆಯಿತು. ಬರುವ ಪೌರ್ಣಿಮೆಯೊಳಗಾಗಿ ಅವರು ನಮ್ಮ ಸಾಮ್ರಾಜ್ಯದ ಎಲ್ಲೆಗಳನ್ನು ಅತಿಕ್ರಮಿಸಿ ದಾಳಿಗೆ ಪ್ರಾರಂಭಿಸುವರೆಂಬುದು ತಿಳಿದು ಬಂದಿದೆ. ಪ್ರಧಾನಸೇನಾಪತಿಗಳಾದ ಮಾರ್ತಾಂಡವರ್ಮರು ತಮ್ಮ ದಳದ ಸಹಾಯವು ಅತ್ಯಾವಶ್ಯಕವೆಂಬುದಾಗಿ ಸೂಚಿಸಿದ್ದಾರೆ."

"ಆರು ದಿನಗಳೊಳಗಾಗಿ ತಮಗವಶ್ಯವಿರುವಷ್ಟು ಮಂದಿ ಭಟರನ್ನು ನಾನು ಒದಗಿಸಿಕೊಡುವೆನು."

"ಆದರೆ........!" ಎಂದು ಹೇಳಿ, ಅಮಾತ್ಯನು ತನ್ನ ಮಾತುಗಳನ್ನು ಅರ್ಧದಲ್ಲಿಯೇ ನಿಲ್ಲಿಸಿದನು.

"ಏಕೆ, ಅರ್ಧನುಡಿದು ಸುಮ್ಮನಾದಿರಿ?"

"ತಮ್ಮ ದಳಕ್ಕೂ ಕುಂತಳದ ಭಟರಿಗೂ ಪ್ರೋತ್ಸಾಹವನ್ನು ನೀಡಿ, ಅವರ ಹೃದಯಗಳಲ್ಲಿ ಆವೇಶವು ಸಂಜಾತವಾಗುವಂತೆ ಮಾಡಿ, ಅವರನ್ನು ಸಮರಭೂಮಿಯಲ್ಲಿ ಮುಂದರಿಯುವಂತೆ ಪ್ರೇರೇಪಿಸಲು ತಮಗಿರುವ ಚೈತನ್ಯವು ಅನುಪಮವಾದುದಾಗಿದೆ! ಆದರೆ ಈ ವಾರ್ಧಕ್ಯಕಾಲದಲ್ಲಿ ತಾವು

ಕೊಳಗುಳಕ್ಕೆ ಬರಬೇಕೆಂದು ಪ್ರಾರ್ಥಿಸಲು ನನ್ನ ಮನಸ್ಸು ಹಿಂಜರಿಯು ವುದು."

"ನಾನು ಸಮರಭೂಮಿಗೆ ಬಂದು ಆಹವ ಕಲಾಪಗಳಲ್ಲಿ ಭಾಗವನ್ನು ವಹಿಸಬೇಕೆಂದು ತಾವು ಸೂಚಿಸುತ್ತಿರುವದಾಗಿ ತೋರುತ್ತದೆ." ಪ್ರತ್ಯಕ್ಷವಾಗಿ ಕದನಗಳಲ್ಲಿ ಭಾಗವನ್ನು ವಹಿಸಲು ತನಗಿರುವ ಅಶಕ್ತತೆಯನ್ನು ಪ್ರದರ್ಶಿಸುತ್ತ ಕುಳಿಂದಕನು ಅಂದನು.

"ಛೇ! ತಮ್ಮನ್ನು ಯುದ್ಧಭೂಮಿಗೆ ಎಳೆಯುವುದು ಮಹತ್ತಾದ ಅನೀತಿಯೆಂಬುದನ್ನು ನಾನು ಬಲ್ಲೆನು; ಆದರೆ ಸೈನಿಕರಿಗೆ ಪ್ರೋತ್ಸಾಹವನ್ನು ನೀಡಲು, ಕುಳಿಂದ ಮಾಂಡಲಿಕರ ವಂಶಜರೊಬ್ಬರಿದ್ದರೆ ಅತ್ಯುತ್ತಮವೆಂದು ಮಾರ್ತಂಡವರ್ಮರೂ ಮಹಾರಾಜರೂ ನುಡಿದಿದ್ದಾರೆ! ತಮಗೆ ಈ ವೃದ್ಧಾಪ್ಯದಲ್ಲಿ ಸೈನ್ಯಗಳ ನಾಯಕತ್ವವನ್ನು ವಹಿಸುವದು ಅತ್ಯಂತ ಶ್ರಮವಹವಾದ ಕೆಲಸವಾಗಿದೆ. ಅದಕ್ಕಾಗಿ ನಾನು ತಮ್ಮನ್ನು ನಿರ್ಬಂಧಿಸಲಾರೆನು. ಸೌಕರ್ಯವಿದ್ದರೆ, ತಮ್ಮಲ್ಲಿ ಹರಿಯುತ್ತಿರುವ ಶೌರ್ಯ-ಸಾಹಸಗಳ ಬಲಗೈಯಂತಿರುವ ತಮ್ಮ ಕುಮಾರನನ್ನು ರಣಾಂಗಣಕ್ಕೆ ಕಳಹುವುದರಲ್ಲಿ ಹೆಚ್ಚಿನ ಪ್ರತಿಬಂಧವಿರಲಾರದೆಂದು ನಾನು ಭಾವಿಸುತ್ತೇನೆ" ಎಂದು ಹಿಂಜರಿಯುವ ಮನಸ್ಸಿನೊಡನೆ ನುಡಿದನು ಅಮಾತ್ಯನು

'ಯಾರನ್ನು? ಚಂದ್ರಹಾಸನನ್ನು ರಣಾಂಗಣಕ್ಕೆ ಕಳುಹಬೇಕೆ?' ಎಂದು ಮಾಂಡಲಿಕನು ಚಕಿತನಾಗಿ ನುಡಿದನು.

"ಚಂದ್ರಹಾಸನನ್ನು ಸಮರಾಂಗಣಕ್ಕೆ ಕಳುಹಲು ತಾನೇಕೆ ಹಿಂಜರಿಯುತ್ತಿರುವಿರಿ? ಅದ್ವಿತೀಯ ಪರಾಕ್ರಮಶಾಲಿಯು ಅವನೆಂಬುದು ತಮ್ಮ ನುಡಿಗಳಿಂದ ವ್ಯಕ್ತವಾಯಿತು. ಅಂಥ ವೀರ ತರುಣನ ದಂಡನಾಯಕತ್ವದಲ್ಲಿ ಕುಳಿಂದದ ಪಡೆಯು ಆಹವಕ್ಕೆ ತೆರಳುವದಾದರೆ, ವಿಜಯವು ನಿರ್ವಿವಾದವಾದ ಸಂಗತಿಯಾಗಿದೆ."

"ಚಂದ್ರಹಾಸನು ಧೀರನಾಗಿದ್ದರೂ ಶತ್ರುಗಳೊಡನೆ ರಣಾಂಗಣದಲ್ಲಿ ಕಾದಾಡುವ ಪರಿಚಯವು ಅವನಿಗಿನ್ನೂ ಲಭಿಸಿರುವದಿಲ್ಲ. ಇದುವರೆಗೆ ರಣಾಂಗಣವು ಹೇಗಿದೆ? ಎಂಬುದನ್ನು ಕಾಣದ ಆ ಯುವಕನ ಮುಂದಾಳುತನದಲ್ಲಿ ಸೈನ್ಯವನ್ನು ಕಳುಹುವದು ರಣಶಾಸ್ತ್ರಜ್ಞರು ಯುಕ್ತವೆಂದು ಹೇಳಲಾರರು."

"ಧುರಕ್ಕೆ ತೆರಳದೆ ಕಾಳಗದ ಅನುಭವವನ್ನು ಹೊಂದುವ ಬಗೆ ಹೇಗೆ? ಚಂದ್ರಹಾಸನಿಗೆ ಯಾವ ವಿಪತ್ತೂ ಬಾರದಂತೆ ನಾನು ನೋಡಿ ಸಂರಕ್ಷಿಸು

ವ ಭಾರವು ನನ್ನದು.” ಎಂದು ಕುಳಿಂದಕನ ಮನಸ್ಸಿನಲ್ಲಿ ಮೂಡಿದ್ದ ಅಸಮಾಧಾನವನ್ನು ನೀಗುವಂತೆ ಮಾಡಲು ಪ್ರಯತ್ನಿಸುತ್ತ ದುಷ್ಟಬುದ್ಧಿಯು ಹೇಳಿದನು.

“ಚಂದ್ರಹಾಸನನ್ನು ಕಾಳಗಕ್ಕೆ ಕಳುಹಿಸಲು ನನ್ನ ಅಭ್ಯಂತರವಿಲ್ಲ; ಆದರೆ ಅವನಿಲ್ಲದೆ ಹೋದರೆ ನನಗೆ ದಿನಗಳು ಅತ್ಯಂತ ಬೇಸರವಾಗಿ ತೋರುವುವು.”

“ತಂದೆಯಾದವನಿಗೆ ಮಕ್ಕಳ ಮೇಲೆ ಪ್ರೇಮವಿರುವದು ಸಹಜ; ಭಯಂಕರ ವ್ಯಾಪಾರಗಳಲ್ಲಿ ಭಾಗವನ್ನು ವಹಿಸಲು ತನ್ನ ಮಕ್ಕಳನ್ನು ಕಳುಹಿಸಲು ತಂದೆಯ ಮನವು ಒಪ್ಪದು; ಆದರೆ ಕರ್ತವ್ಯದ ದೃಷ್ಟಿಯಲ್ಲಿ ಅದು ಉಚಿತವಾಗಲಾರದು. ತಂದೆಯಾದವನು ತನ್ನ ವಂಶದ ಕೀರ್ತಿಯನ್ನು ಕಾಪಾಡಬೇಕೆಂಬ ಹಂಬಲವಿದ್ದರೆ, ತನ್ನ ಮಗನು ವಿಪತ್ತುಗಳಿಗೆ ಎದೆಯೊಡ್ಡಿ ಧೈರ್ಯದಿಂದ ಹೋರಾಡುವಂತೆ ಪ್ರೋತ್ಸಾಹಿಸುವದು ಆತನ ಕರ್ತವ್ಯವಾಗಿದೆ. ಚಂದ್ರಹಾಸನು ತರುಣನು; ಕಾಳಗದಲ್ಲಿ ಭಾಗವನ್ನು ವಹಿಸಿ ತನ್ನ ಎದೆಯಲ್ಲಿ ಮೊಳೆತಿರುವ ಶೌರ್ಯವನ್ನು ಚಿಗುರುವಂತೆ ಮಾಡುವುದು ಅತ್ಯಾವಶ್ಯಕವಾಗಿದೆ.”

ಮಾಂಡಲಿಕನು ದುಷ್ಟಬುದ್ಧಿಯ ಈ ವಚನಗಳನ್ನು ಆಶ್ರುವಿಸಿದ ನಂತರ ಏನು ಮಾಡಬೇಕೆಂಬುದನ್ನು ತಿಳಿಯದಾದನು. ದೂರದ ರಣಾಂಗಣಕ್ಕೆ ತನ್ನ ಏಕಮಾತ್ರ ಪುತ್ರನನ್ನು ಕಳುಹಲು ಅವನ ಎದೆಯಲ್ಲಿ ತುಂಬಿದ್ದ ಪುತ್ರಪ್ರೇಮವು ಒಪ್ಪಲಿಲ್ಲ. ಕುಂತಳ ಸಿಂಹಾಸನದ ಮೇಲೆ ಅವನಿಗಿರುವ ಅಪಾರವಾದ ಭಕ್ತಿ-ವಿಶ್ವಾಸಗಳು ದುಷ್ಟಬುದ್ಧಿಯ ವಚನದಂತೆ ಚಂದ್ರಹಾಸನನ್ನು ರಣಾಂಗಣಕ್ಕೆ ಕಳುಹಿಸುವದು ಅವನ ಕರ್ತವ್ಯವೆಂದು ನುಡಿಯದೇ ಇರಲಿಲ್ಲ. ಪುತ್ರವಾತ್ಸಲ್ಯ-ಸ್ವಾಮಿನಿಷ್ಠೆ ಇವುಗಳು ತಮ್ಮೊಳಗೆ ಅತ್ಯಂತ ಘೋರವಾಗಿ ಕಾದಾಡಿದವು. ತನ್ನ ಬದ್ಧಿಯನ್ನೆಲ್ಲ ಉಪಯೋಗಿಸಿ ತಾನೇನು ಮಾಡಬೇಕೆಂದು ಕುಳಿಂದಕನು ಆಲೋಚಿಸಹತ್ತಿದನು. ದುಷ್ಟಬುದ್ಧಿಯ ನುಡಿಗಳನ್ನು ಸ್ವೀಕರಿಸುವದು ಉಚಿತವೆಂದು ಅವನು ಬಗೆದನು; ಏಕೆಂದರೆ, ಅಮಾತ್ಯನ ನುಡಿಗಳಲ್ಲಿ ಸತ್ಯ ಮತ್ತು ನ್ಯಾಯಗಳಿದ್ದಂತೆ ಅವನಿಗೆ ಭಾಸವಾಗಿದ್ದಿತು. ಕುಂತಳಸಿಂಹಾಸನದ ಅತ್ಯಂತ ಸ್ವಾಮಿನಿಷ್ಠ ಸೇವಕರಲ್ಲಿ ತಾನೊಬ್ಬನೆಂದು ಅಭಿಮಾನಿಸುತ್ತಲಿರುವ ಕುಳಿಂದಕನು ರಾಜ್ಯಕ್ಕೆ ಬಂದೊದಗಿದ ಈ ಬಿಕ್ಕಟ್ಟಿನ ಸಂದರ್ಭದಲ್ಲಿ ಸಹಾಯ-ಸಲಕರಣೆಗಳನ್ನು ನೀಡದೆ ಹೋದರೆ, ಅವನ ಸ್ವಾಮಿನಿಷ್ಠೆಯು ಎಲ್ಲಿ ಉಳಿಯುವದು?

"ಮಾಂಡಲಿಕರೇ, ತಾವು ಇಷ್ಟು ಅಗಾಧವಾದ ರೀತಿಯಲ್ಲಿ ಚಿಂತಿಸ ಬೇಕಾದುದಿಲ್ಲ; ನನ್ನ ಮಾತಿನಲ್ಲಿ ನಂಬಿಗೆಯನ್ನಿಟ್ಟು ಚಂದ್ರಹಾಸನನ್ನು ರಣಾಂಗಣಕ್ಕೆ ಕಳುಹಿಸಿರಿ! ಅವನ ಒಂದು ಕೂದಲಿಗೆ ಸಹ ಧಕ್ಕೆ ಹತ್ತದಂತೆ ನಾನು ನೋಡಿಕೊಳ್ಳುವೆನು. ಚಂದ್ರಹಾಸನಂಥ ತೇಜಸ್ವಿಗಳಾದ ತರುಣರು ಇಂಥ ಸಂದರ್ಭಗಳಲ್ಲಿ ಭಾಗವನ್ನು ವಹಿಸಲು ಸಹ ಹರ್ಷಚಿತ್ತರಾಗಿ ಬರುವರೆಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಈ ಕಲಾಪದಿಂದ ಚಂದ್ರಹಾಸನ ಕೀರ್ತಿಯು ಸರ್ವತ್ರ ಹಬ್ಬುವದೆಂಬ ಮಾತಿನಲ್ಲಿ ನಂಬಿಕೆಯಿಡಿರಿ. ಅವನು ತನ್ನ ಜೀವನಗೋಪುರದ ತಳಹದಿಯನ್ನು ಈಗಲೆ ನಿರ್ಮಿಸಬೇಕಾಗಿದೆ." ಎಂಬ ಉದ್ವೇಗಭರಿತವಾದ ಅಮಾತ್ಯನ ನುಡಿಗಳು ಕುಳಿಂದಕನ ದೇಹದಲ್ಲಿ ವಿದ್ಯುತ್ತು ಸಂಚಾರವಾಗುವಂತೆ ಮಾಡಿದುವು. ತನ್ನ ಕೂಸನ್ನು ರಣರಂಗಕ್ಕೆ ಕಳುಹಲು ತಾನು ಹಿಂಜರಿಯುವದು ತನ್ನ ಬಲಹೀನತೆಯು ಹೆಗ್ಗುರುತೆಂಬುದು ಅವನ ಸ್ಮೃತಿಪಥದಲ್ಲಿ ಬರಲು, ಅವನು ಲಜ್ಜಾಭರಿತನಾದನು.

"ಅಮಾತ್ಯರೆ! ತಾವು ನನ್ನನ್ನು ಕುರಿತು ಅನ್ಯಥಾ ಭಾವಿಸಬೇಡಿರಿ. ನಾನು ಮಹಾರಾಜರ ಅತ್ಯಂತ ನಮ್ರ ಸೇವಕನು; ತಮ್ಮಂಥವರು ಬಂದು ನನ್ನ ಮಗನನ್ನು ರಣಾಂಗಣಕ್ಕೆ ಕಳುಹಲು ಅಪೇಕ್ಷಿಸುತ್ತಿರುವಾಗ, ಅದನ್ನು ತಿರಸ್ಕರಿಸಲು ನನಗೆಲ್ಲಿಯ ಧೈರ್ಯವು? ನನ್ನಲ್ಲಿ ತುಂಬಿರುವ ಪುತ್ರಪ್ರೇಮದ ಮಬ್ಬಿನಿಂದ ನಾನು ಆ ರೀತಿ ನುಡಿದಿರುವೆನಲ್ಲದೆ, ಅದು ನನ್ನಲ್ಲಿ ತುಂಬಿರುವ ಸ್ವಾಮಿನಿಷ್ಠೆಶೂನ್ಯತೆಯ ಲಾಂಛನವೆಂದು ಬಗೆಯಬೇಡಿರಿ."

ದುಷ್ಟಬುದ್ಧಿಯು ತನ್ನ ತಂತ್ರವು ಫಲಪ್ರದವಾಯಿತೆಂದು ಭಾವಿಸಿದನು. ಜನರು ಎಷ್ಟು ತೀವ್ರವಾದ ವಿಸಮ್ಮತಿಯನ್ನು ತೋರಿಸಿದರೂ ತನ್ನಲ್ಲಿರುವ ವಾಕ್‌ಚಾತುರ್ಯದಿಂದ ಅವರನ್ನು ಅದಕ್ಕೆ ಒಡಂಬಡಿಸುವ ಕೌಶಲ್ಯವು ದುಷ್ಟಬುದ್ಧಿಯಲ್ಲಿದ್ದಿತು. ತನ್ನ ಮಾತುಗಳಿಂದ ಜನರ ಭಾವನೆಗಳನ್ನು ಉದ್ರೇಕಗೊಳಿಸಿ, ಅವರನ್ನು ಅವನು ವಶೀಕರಿಸುತ್ತಲಿದ್ದನು. ಅವನೊಡನೆ ಮಾತಾಡಲು ಪ್ರಾರಂಭಿಸಿದರೆ, ಅವರೆಷ್ಟು ಜಾಣರಾಗಿದ್ದರೂ ಅವನ ಬಲೆಯಿಂದ ತಪ್ಪಿಸಿಕೊಳ್ಳಲಾರರು. ಪರಿಸ್ಥಿತಿಯು ಹೀಗಿರಲು, ಸರಳ ಮನಸ್ಕನಾದ ಕುಳಿಂದಕನು ಅಮಾತ್ಯನ ಅಂತರಂಗವು ಎಷ್ಟು ಆಳವಾಗಿದೆ? ಎಂಬುದನ್ನು ಹೇಗೆ ತಾನೆ ಕಾಣುವನು?

"ಚಂದ್ರಹಾಸನು ಈ ಪ್ರಯಾಣಕ್ಕೆ ಒಪ್ಪುವನೇ ಎಂಬುದನ್ನು ವಿಚಾರಿಸುವದು ನಮ್ಮ ಕರ್ತವ್ಯವಲ್ಲವೆ?" ಎಂದು ತನ್ನ ತಂತ್ರವು ಪೂರ್ಣ ಫಲಕಾರಿ

ಯಾಗುವಂತೆ ಮಾಡಲು ದುಷ್ಟಬುದ್ಧಿಯು ನುಡಿದನು.

"ನಾನು ಹೇಳಿದರೆ ಅವನು ಒಪ್ಪುವನು."

"ಆದರೂ ಅವನೊಡನೆ ಈ ಸಂಗತಿಯನ್ನು ಕುರಿತು ಆಲೋಚಿಸುವುದು ಅಗತ್ಯವಿದೆ."

"ಹಾಗಾದರೆ ಅವನನ್ನು ಬರಹೇಳಲು ಆಳನ್ನು ಕಳುಹಿಸುವೆನು." ಎಂದು ಹೇಳಿ ಕುಳಿಂದಕನು ಒಬ್ಬ ಭೃತ್ಯನನ್ನು ಚಂದ್ರಹಾಸನ ವಸತಿಗೆ ಅವನನ್ನು ಕರೆದುಕೊಂಡು ಬರಲು ಕಳುಹಿದನು. ಅನಂತರ ಕುಂತಳವನ್ನು ಆಕ್ರಮಿಸುತ್ತಿರುವ ಶತ್ರುಗಳ ವಿದ್ಯಮಾನಗಳನ್ನು ಅರಿಯಲು ಕುಳಿಂದಕನು ಅಂದನು:—"ಶತ್ರುಗಳು ಅತ್ಯಂತ ಬಲಿಷ್ಠರಾಗಿರುವರೊ?" ಎಂಬುದಾಗಿ.

"ಲಾಟರು ಪ್ರಬಲರೇನೋ ಹೌದು; ಆದರೂ ಕುಳಿಂದದ ಸೈನ್ಯದೊಡನೆ ಅವರು ಕಾದಾಡಲಾರರು. ಯುದ್ಧವನ್ನು ಆದಷ್ಟು ಬೇಗನೆ ಪೂರೈಸಿ, ಶತ್ರುಗಳನ್ನು ನಿಗ್ರಹಿಸಬೇಕೆಂಬುದೇ ನನ್ನ ಆಲೋಚನೆಯು. ಅವರು ಬಂದು ನಮ್ಮ ನಾಡಿನ ಗಡಿಗಳನ್ನು ದಾಟುವುದಕ್ಕೆ ಮುಂಚಿತವಾಗಿಯೇ, ಅವರು ತಿಳಿದಿರುವದಕ್ಕಿಂತ ಹೆಚ್ಚು ಜಾಗ್ರತೆಯಾಗಿ ಅವರ ಮೇಲೆ ಬಿದ್ದು, ನಾವು ಅವರನ್ನು ಪರಾಭವಗೊಳಿಸಬೇಕು. ನಾಲ್ಕು ಭಾಗಗಳಿಂದಲೂ ದಂಡನ್ನು ಕಳುಹಿಸಿ ಅವರನ್ನು ಮಣಿಯುವಂತೆ ಮಾಡುವುದೊಳ್ಳೆಯದು. ಕುಳಿಂದದ ಸೈನ್ಯವಿಲ್ಲದೆ ಹೋದರೆ, ಕೆಲವು ತಿಂಗಳುಗಳ ವರೆಗೆ ಯುದ್ಧವು ಸಾವಕಾಶದಲ್ಲಿ ಮುಂದರಿಯುವದು. ಆಗ ನೆರೆಹೊರೆಯ ಕೆಲವು ಮಂದಿ ಅರಸರು ಲಾಟರಿಗೆ ಸಹಾಯವನ್ನು ನೀಡಬಹುದು. ವೈರಿಗಳಿಗೆ ಇತರರ ಸಹಾಯವು ಲಭಿಸುವ ಅವಕಾಶವು ಸಿದ್ಧಿಸಿದರೆ, ಅವರು ಸುಲಭದಲ್ಲಿ ಮಣಿಯಲಾರರು. ಆದುದರಿಂದಲೇ ಇಷ್ಟು ಜಾಗ್ರತೆಯಾಗಿ ನಾನು ಇಲ್ಲಿಗೆ ಬಂದೆನು" ಎಂದು ಅಮಾತ್ಯನು ತನ್ನ ಉಪಾಯಗಳನ್ನು ಕುಳಿಂದಕನಿಗೆ ಅರುಹಿದನು.

ಅಮಾತ್ಯನ ಸೂತ್ರಗಳಿಗೆ ಸಮ್ಮತಿಯನ್ನು ಸೂಚಿಸುತ್ತ ತನ್ನ ತಲೆಯನ್ನು ಅಲ್ಲಾಡಿಸಿ ಕುಳಿಂದಕನು ಹೀಗೆಂದನು:—"ತಮ್ಮ ಉಪಾಯಗಳು ಅತ್ಯಂತ ಸೂಕ್ತವು ಶತ್ರುಗಳಿಗೆ ತಮ್ಮ ಶಕ್ತಿಯನ್ನು ವರ್ಧಿಸಲು ಹೆಚ್ಚಿನ ಅವಕಾಶವನ್ನು ಕಲ್ಪಿಸಿಕೊಡಬಾರದು. ಗಿಡವಾದುದನ್ನು ಕೀಳುವುದು ಸುಲಭವು. ಕಾಲವಿಳಂಬದ ಪರಿಣಾಮವಾಗಿ ಅದು ಮರವಾದರೆ, ಅದನ್ನು ನಿರ್ಮೂಲಗೊಳಿಸಲು ಕೊಡಲಿಯೇ ಬೇಕಾಗುವದು. ಆದುದರಿಂದ ಶತ್ರುಗಳನ್ನು ಆದಷ್ಟು ಬೇಗನೆ ನಿವಾರಿಸಬೇಕು."

ಇಷ್ಟರಲ್ಲಿ ಬಾಗಿಲುಗಳನ್ನು ದಾಟಿ ಚಂದ್ರಹಾಸನ ಮೋಹನ ರೂಪವು

ಮಂದಿರದೊಳಗೆ ಪ್ರವೇಶಿಸಿತು. ಇಷ್ಟು ಜಾಗ್ರತೆಯಾಗಿ ತನ್ನನ್ನು ಬರ ಹೇಳಲು ಕಾರಣವೇನೆಂದು ತಿಳಿಯಲಿರುವ ಕುತೂಹಲವು ಅವನ ಮುಖ ಮಂಡಲದಲ್ಲಿ ತಾಂಡವವಾಡುತ್ತಲಿದ್ದಿತು. ವಿನಯದಿಂದ ಅವನು ಮಾತಾಡದೆ, ಮೌನವನ್ನವಲಂಬಿಸಿ ತನ್ನ ಜನಕನ ಬಳಿಯಲ್ಲಿ ನಿಂತನು.

"ತಮ್ಮಾ!" ಎಂದು ಎಳೆಯ ನಗೆಯೊಡನೆ ಅಮಾತ್ಯನು ಹೇಳಿದನು: "ನೀನು ಅತ್ಯಂತ ಧೀನನಾದ ತರುಣನೆಂಬುದನ್ನು ನಿನ್ನ ತಂದೆಯಿಂದ ನಾನು ತಿಳಿದುಕೊಂಡೆನು. ನಿನ್ನ ಶೌರ್ಯ, ಧೈರ್ಯ, ಸಾಹಸಗಳನ್ನು ಪ್ರದರ್ಶಿಸಲಿರುವ ಒಂದು ಕಲಾಪದಲ್ಲಿ ಭಾಗವನ್ನು ವಹಿಸಲು ನೀನು ಹಿಂಜರಿಯಲಾರೆ ಎಂದಾಗಿದೆ ನನ್ನ ಭಾವನೆಯು!"

"ನಾನು ಧೀರನೆಂದು ಹೆಮ್ಮೆ ಪಡುವಷ್ಟು ಮಹತ್ತಾದ ಯಾವ ಘಟನೆಯೂ ನನ್ನಿಂದ ಜರುಗಿರುವುದಿಲ್ಲ; ನನ್ನಿಂದ ಉಪಕಾರಪ್ರದವಾಗುವ ಏನಾದರೂ ಉದ್ಯಮಗಳಿದ್ದರೆ, ನಾನು ಅವುಗಳಿಂದ ವಿಮುಖನಾಗುವವನಲ್ಲ."

"ತಮ್ಮಾ, ನಿನ್ನ ಈ ನುಡಿಗಳು ನಿನ್ನಲ್ಲಿ ಹರಿದಾಡುತ್ತಿರುವ ವಿನಯವನ್ನು ಸೂಚಿಸುತ್ತಲಿರುವುವು. ಕುಂತಳ ಸಾಮ್ರಾಜ್ಯವನ್ನು ಶತ್ರುಗಳು ಆಕ್ರಮಿಸುತ್ತಿರುವರೆಂಬ ವಾರ್ತೆಯನ್ನು ಒಂದುವೇಳೆ ನೀನು ಅರಿತಿರಬಹುದು. ಅವರ ಹೆಮ್ಮೆಯನ್ನು ಮುರಿಯುವ ಕೃತ್ಯದಲ್ಲಿ ನಿನ್ನ ಸಹಾಯವು ಅತ್ಯಾವಶ್ಯಕವಾಗಿದೆ. ಕುಳಿಂದಕರು ರಾಜಸೇವೆಯಲ್ಲಿ ವೃದ್ಧರಾಗಿರುವುದರಿಂದ ಇನ್ನೂ ಸೈನಿಕ ಕಲಾಪಗಳಲ್ಲಿ ಭಾಗವನ್ನು ವಹಿಸಲು ಅವರನ್ನು ನಿರ್ಬಂಧಿಸುವದು ಸಮಂಜಸವಲ್ಲ; ಆದರೆ ಅವರ ಪುತ್ರನಾದ ನೀನು ಕುಂತಳ ಸಿಂಹಾಸನದ ಮಾನವನ್ನು ಕಾಯಲು ಮುಂದೆ ಬರುವೆಯೆಂದು ನಾನು ಭಾವಿಸುತ್ತೇನೆ."

"ಪೂಜ್ಯ ಪಿತೃಗಳು ಒಪ್ಪಿದರೆ, ತಮ್ಮ ನುಡಿಗಳನ್ನು ಅನುಸರಿಸಲು ಅಭ್ಯಂತರವೇನೂ ಇಲ್ಲ." ಎಂದು ತನ್ನ ತಂದೆಯ ಮೊಗವನ್ನು ನೋಡುತ್ತ ಚಂದ್ರಹಾಸನು ನುಡಿದನು.

"ಕುಳಿಂದಕರು ಆಗಲೇ ಒಪ್ಪಿದ್ದಾರೆ ನಿನ್ನನ್ನು ಕಳುಹಲು" ಎಂದನು ದುಷ್ಟಬುದ್ಧಿಯು.

"ತಂದೆಯವರ ಸಮ್ಮತಿಯಿದ್ದರೆ ತಮ್ಮ ನುಡಿಗಳನ್ನು ಅನುಸರಿಸಲು ನಾನು ಸನ್ನದ್ಧನಾಗಿರುವೆನು. ಕಾಳಗದಲ್ಲಿ ಭಾಗವನ್ನು ವಹಿಸಬೇಕೆಂಬ ಆಶೆಯು ನನಗೆ ಬಹಳವಾಗಿದೆ. ಇದುವರೆಗೆ ಆ ರೀತಿಯ ಒಂದು ಕಲಾಪದಲ್ಲಿ ಸೇರಲು ನನಗೆ ಸಂದರ್ಭವು ದೊರೆತಿಲ್ಲ." ಎಂದು ರಣರಂಗದಲ್ಲಿ ತನ್ನ

ಬಾಹುಗಳ ಬಲವನ್ನು ಪ್ರದರ್ಶಿಸಲಿರುವ ಆಸಕ್ತಿಯನ್ನು ತೋರಿಸುತ್ತ ಚಂದ್ರಹಾಸನು ನುಡಿದನು.

"ಮಗೂ, ಚಂದ್ರಹಾಸ!" ಇದುವರೆಗೆ ಮೌನವನ್ನವಲಂಬಿಸಿದ್ದ ಕುಳಿಂದಕನು ಹೇಳತೊಡಗಿದನು: "ನಾವು ಕುಂತಳೇಂದ್ರರ ಉಪ್ಪನ್ನು ತಿಂದಿರುವೆವು. ಆದರ ಪ್ರತಿಫಲವನ್ನು ತೋರಿಸಲಿರುವ ಸಂದರ್ಭವು ಇಂದು ಸಂಪ್ರಾಪ್ತವಾಗಿರುವುದು. ಕುಂತಳವನ್ನು ಲಾಟದೇಶದವರು ಆಕ್ರಮಿಸ ತೊಡಗಿರುವರಂತೆ. ಅವರನ್ನು ಎದುರಿಸಲು ನಮ್ಮ ನಾಡಿನ ಭಟರು ಆವಶ್ಯಕ ವೆಂದು ಅಮಾತ್ಯರು ಹೇಳುತ್ತಲಿದ್ದಾರೆ. ನೀನು ಅವರ ದಂಡನಾಯಕನಾಗಿ ಯುದ್ಧಭೂಮಿಗ ತೆರಳಬೇಕಾಗಿದೆ."

"ತಮ್ಮ ಆಜ್ಞೆಯು ಮಾನ್ಯವು!"

"ಮಗೂ, ನೀನು ನನ್ನ ಮಾತನ್ನು ನಡೆಯಿಸುವೆ ಎಂಬುದನ್ನು ನಾನು ಬಲ್ಲೆನು; ನಿನ್ನಿಂದ ನಮ್ಮ ವಂಶದ ಕೀರ್ತಿಯು ಹೆಚ್ಚಲಿ!" ಎಂದನು ಕುಳಿಂದ ಕನು ಚಿಂತಾಮಗ್ನನಾಗಿ.

"ತಮ್ಮಾ, ನೀನು ತಂದೆಯ ಮಾತಿನಂತೆ ವರ್ತಿಸಲು ಸಿದ್ಧನಾಗಿರುವ ದನ್ನು ಕಂಡು ನಾನು ಹರ್ಷಿತನಾದೆನು."

"ಯಾವಾಗ ಇಲ್ಲಿಂದ ಪಯಣವನ್ನು ಆರಂಭಿಸಬೇಕು?"ಎಂದು ಚಂದ್ರ ಹಾಸನು ಪ್ರಶ್ನಿಸಿದನು.

"ಇಲ್ಲಿಯ ದಂಡಾಳುಗಳನ್ನು ಸಿದ್ಧಗೊಳಿಸಿ ನೀನು ಅವರೊಡನೆ ಕುಂ-ತಳ ರಾಜಧಾನಿಗೆ ಗಮಿಸಬೇಕು. ಪ್ರಧಾನ ಸೇನಾಪತಿಗಳಾದ ಮಾರ್ತಂಡ ವರ್ಮರು ಈಗಾಗಲೇ ಸಂಗ್ರಾಮಭೂಮಿಗೆ ತೆರಳಿರಬಹುದು. ಆದುದರಿಂದ ನಾನು ನನ್ನ ಮಗನಾದ ಮದನನಿಗೆ ಒಂದು ಓಲೆಯನ್ನು ಕೊಡುವೆನು. ನೀನು ಅದನ್ನು ಅವನಿಗೆ ನೀಡಿದರೆ, ನಿನಗೆ ಬೇಕಾದ ಸೌಕರ್ಯಗಳನ್ನೂ, ಅಲ್ಲಿಂದ ಮುಂದೆ ತೆರಳಲು ಆವಶ್ಯಕವಿರುವ ಮಾರ್ಗದರ್ಶಕರನ್ನೂ ಒದಗಿಸಿ ಕೊಡುವನು. ನೀನು ರಾಜಧಾನಿಗೆ ತಲಪುವಾಗ ನಾನು ಅಲ್ಲಿ ಇರಲಿಕ್ಕಿಲ್ಲ. ಅತ್ಯಾವಶ್ಯವಾದ ಕೆಲಸಗಳಿಗಾಗಿ ವಾಯುವ್ಯ ದಿಕ್ಕಿನಲ್ಲಿರುವ ಕೆಲವು ಪ್ರಾಂತ್ಯ ಗಳಿಗೆ ಹೋಗಬೇಕಾಗಿ ಬಂದಿದೆ."

"ತಮ್ಮ ಆದೇಶದಂತೆಯೇ ಆಗಲಿ!"

ದುಷ್ಟಬುದ್ಧಿಯು ಒಂದು ಓಲೆಯನ್ನು ಬರೆದು, ಅದನ್ನು ಚಿಕ್ಕದಾದ ಒಂದು ರೇಶ್ಮೆನೂಲಿನ ಚೀಲದಲ್ಲಿ ಭದ್ರಪಡಿಸಿ ಚೀಲದ ಬಾಯಿಗೆ ಮುದ್ರೆ ಯನ್ನು ಹಾಕಿದ ನಂತರ ಅದನ್ನು ಚಂದ್ರಹಾಸನ ವಶಕ್ಕೆ ನೀಡಿದನು. ಅವನು

ಅದನ್ನು ತೆಗೆದುಕೊಂಡನು. ಅಮಾತ್ಯನು ಆ ದಿನ ಕುಳಿಂದಕನ ಆತಿಥ್ಯ ವನ್ನು ಸ್ವೀಕರಿಸಿದನು.

ನೇರವು ಪ್ರಭಾತವಾಯಿತು; ಉಷಾವನಿತೆಯು ತನ್ನ ಕೆಂಬಣ್ಣದ ನಗುಮೊಗವನ್ನು ಪ್ರಾಚ್ಯದಿಸೆಯಲ್ಲಿ ತೋರಿ ಭಾಸ್ಕರನ ಆಗಮನ ಸಂದೇಶ ವನ್ನು ವಿಶ್ವಕ್ಕೆ ಅರುಹಿದಳು. ನಿದ್ರಾಂಗನೆಯ ಬಾಹುಗಳ ಬಂಧನದಲ್ಲಿ ಬಿದ್ದಿದ್ದ ಮಾನುಷಲೋಕವು ಜಾಗೃತಾವಸ್ಥೆಯನ್ನು ಹೊಂದಿತು ಇನಿಯರ ಬಾಹು ಗಳ ಮಧ್ಯದಲ್ಲಿ ಸಿಲುಕಿ ನಿದ್ದೆಯ ಸುಖವನ್ನು ಅನುಭವಿಸುತ್ತಲಿರುವ ನಾರಿ ಯರು ಕುಕ್ಕುಟಗಳ ಪ್ರಭಾತ ಗರ್ಜನೆಗಳ ಕಹಳೆಯಿಂದೆಚ್ಚತ್ತು ಸಡಿಲವಾಗಿ ಹೋಗಿದ್ದ ತಮ್ಮ ಉಡುವುಗಳನ್ನು ಸರಿಪಡಿಸಿಕೊಳ್ಳುತ್ತ ತಮ್ಮ ಪತಿಯರ ಚರಣ ಧೂಳಿಯನ್ನು ಶಿರಸ್ಸುಗಳಲ್ಲಿ ಧರಿಸಿಕೊಂಡ ನಂತರ ಶಯನಗೃಹವನ್ನು ಪರಿತ್ಯಜಿಸಿ ಹೊರಗೆ ಬರುತ್ತಲಿರುವರು. ತಾಯಂದಿರು ಇನ್ನೂ ಎಚ್ಚರ ವಾಗದೆ ಜಡನಿದ್ದೆಯಲ್ಲಿ ಬಿದ್ದಿರುವ ತಮ್ಮ ಕಂದರನ್ನು ನೋಡಿ, "ಅಣ್ಣಾ, ಬೆಳಗಾಯಿತು; ನಿದ್ದೆಯಿಂದೆದ್ದೇಳು!" ಎಂದು ನುಡಿಯುತ್ತ, ಅವರನ್ನು ಜಾಗೃತರನ್ನಾಗಿ ಮಾಡತೊಡಗಿರುವರು. ಮುಂಜಾನೆಯಲ್ಲಿ ಎದ್ದು ತಮ್ಮ ಮುಖಗಳನ್ನು ಪ್ರಕ್ಷಾಲಿಸಿಕೊಂಡು ಬಂದ ಕನ್ಯೆಯರು, ಏಳದೆ ಇನ್ನೂ ಹಾಸಿಗೆಯಲ್ಲಿ ಬಿದ್ದಿರುವ ತಮ್ಮಂದಿರನ್ನು ಅವಲೋಕಿಸಿ, "ತಮ್ಮಾ, ಏಳು! ಏಕೆ ಕುಂಭಕರ್ಣನಂತೆ ಮಲಗಿರುವೆ?" ಎಂದು ನುಡಿಯುತ್ತಲಿದ್ದರು. ಗೃಹಿ ಣಿಯರು ತಮ್ಮ ಪ್ರಾತಃಕಾಲದ ದೇಹಶುದ್ಧಿಗಳನ್ನು ನೆರವೇರಿಸಿಕೊಂಡು ಬಂದು ತಮ್ಮ ನಿಕೇತನಗಳನ್ನು ಸಾರಿಸುತ್ತಲೂ ಗೂಡಿಸುತ್ತಲೂ ಇದ್ದರು. ಊರ ಗೊಲ್ಲನು ಕರದಲ್ಲಿ ಒಂದು ಹಿತ್ತಾಳೆಯ ಪಾತ್ರೆಯನ್ನು ಹಿಡಿದು ಕೊಂಡು ಹಾಲು ಕರೆಯುವುದಕ್ಕಾಗಿ ಹಟ್ಟಿಗೆ ತೆರಳುತ್ತಲಿದ್ದನು. ದೂರದ ಒಂದು ಮಾವಿನ ಮರದ ಮೇಲೆ ಕುಳಿತು ಪಿಕವು ಮೃದುಮಧುರವಾಣಿ ಯಲ್ಲಿ "ಕು, ಕು, ಕೂ-ಕೂ...." ಎಂದು ರಾಗಾಲಾಪನೆಯನ್ನು ಮಾಡುತ್ತ ಲಿದ್ದಿತು. ಅರಳಿ ನಿಂತಿರುವ ಸುಮನಸಂದೋಹಗಳನ್ನು ಕಂಡು, ಅವುಗಳಲ್ಲಿ ತುಂಬಿರುವ ನವಮಧುವನ್ನು ಅಪಹರಿಸಲು ಮಧುರೀಕನು ಅತ್ಯಾಸಕ್ತಿ ಯಿಂದ ಝೇಂಕರಿಸುತ್ತ ತನ್ನ ವಸತಿಯಾದ ನಳಿನಿಯನ್ನು ತ್ಯಜಿಸಿ ಹೊರಗೆ ಬಂದನು.

ಮಂತ್ರಿವರ್ಯನಾದ ದುಷ್ಟಬುದ್ಧಿಯು ಈ ಸಂದರ್ಭದಲ್ಲಿ ತನ್ನ ಶಯನ ಗೃಹವನ್ನು ಪರಿತ್ಯಜಿಸಿ ಹೊರಗೆ ಬಂದನು. ಉನ್ನತವಾದ ಮಹಡಿಯ ಮೇಲೆ ನಿಂತು ಅವನು ವಿಶಾಲವಾದ ಜಗತ್ತನ್ನು ನೋಡಲಾರಂಭಿಸಿದನು.

ಪರ್ವತಶ್ರೇಣಿಗಳು, ಬೈಲುಗಳು, ಕಾನನಗಳು, ನಗರಗಳುಇವುಗಳಿಂದ ನಿಬಿಡವಾದ ಕುಳಿಂದ ಪ್ರಾಂತ್ಯವು ಅವನ ಕಣ್ಣುಗಳ ಮುಂದೆ ನಿಂತಿದ್ದಿತು. ದೂರದಲ್ಲಿರುವ ಒಂದು ಗಿರಿಯ ಹಿಂದಿನಿಂದ ಚಿತ್ರಭಾನುವು ತನ್ನ ಮಣಿವರೂಥದಲ್ಲಿ ಆರೂಢನಾಗಿ ಬರುತ್ತಿರುವ ದೃಶ್ಯವು ಅಮಾತ್ಯನ ನೇತ್ರಗಳನ್ನು ಸೆಳೆದುವು. ಕೇಸರೀ ಬಣ್ಣದ ಭಾಸ್ಕರನ ರೂಪವು ನೋಡುವುದಕ್ಕೆ ಅತ್ಯಂತ ಮನೋಹರವಾಗಿದ್ದಿತು. ಉಷೆಯ ಚುಂಬನದಿಂದ ಅವನು ಲಜ್ಜಾವಿಹ್ವಲನಾದುದರಿಂದ ಅವನ ಮುಖಮಂಡಲವು ಅರುಣ ವರ್ಣವನ್ನು ಹೊಂದಿತ್ತು. ದಿವಾಕರನ ಉದಯವಾದೊಡನೆಯೇ ಇದುವರೆಗೆ 'ಜನಸಂಚಾರಶೂನ್ಯವಾಗಿ ಬಿದ್ದಿದ್ದ ಕುಳಿಂದ ನಗರದ ಬೀದಿಗಳು ಜನನಿಬಿಡವಾಗಲಾರಂಭಿಸಿದುವು. ಹಾಲನ್ನು ಮಾರುತ್ತಿರುವ ಗೊಲ್ಲತಿಯು "ಹಾಲು! ಹಾಲು!! ಮೊಸರು!!! ಮೊಸರು!!!!" ಎಂದು ಗಟ್ಟಿಯಾಗಿ ಒದರುತ್ತ ರಾಜಗೇಹದ ಮುಂದಿನ ಬೀದಿಯಲ್ಲಿ ಸಂಚರಿಸುತ್ತಿರುವುದು ದುಷ್ಟಬುದ್ಧಿಯ ನೇತ್ರಗಳಿಗೆ ಗೋಚರವಾಗದೆ ಇರಲಿಲ್ಲ ಕಾಯಿಪಲ್ಯಗಳನ್ನು ಹೊತ್ತುಕೊಂಡು ಒಬ್ಬ ಬೇಸಾಯಗಾರನು ಅವುಗಳನ್ನು ವಿಕ್ರಯಿಸುವದಕ್ಕಾಗಿ ಅತ್ಯಂತ ವೇಗವಾಗಿ ಸಂತೆಗೆ ಗಮಿಸುತ್ತಲಿದ್ದನು. ಅಗಸನು ತನ್ನ ಕತ್ತೆಯ ಮೇಲೆ ಮಲಿನ ವಸ್ತ್ರಗಳ ಒಂದು ದೊಡ್ಡ ಭಾರವನ್ನು ಹೇರಿ ಅವುಗಳನ್ನು ಕ್ಷಾಲಿಸುಲಿಸುವುದಕ್ಕಾಗಿ ನದಿಗೆ ತೆರಳುತ್ತಲಿದ್ದನು.

ಈ ಚಿತ್ರಗಳನ್ನೆಲ್ಲವನ್ನೂ ನೋಡುತ್ತ ಅಮಾತ್ಯಶ್ರೇಷ್ಠನು ಆ ಮಹಡಿಯ ಮೇಲೆಯೇ ನಿಂತಿದ್ದನು ಹಲವು ವಿಚಾರಗಳು ಅವನ ಮೆದುಳನ್ನು ಬಾಧಿಸಿದ್ದುವು. ಯಾವುದೋ ಒಂದು ಸಂಗತಿಯನ್ನು ಕುರಿತು ಅಗಾಧ ರೀತಿಯಲ್ಲಿ ಅವನು ಚಿಂತಿಸುತ್ತಿದ್ದನು. ರಾಜಕಾರಣದಲ್ಲಿ ನಲಿಯುತ್ತಿರುವ ಅವನ ಹೃದಯವು ಪ್ರಕೃತಿದೇವಿಯ ಸೌಂದರ್ಯವನ್ನಾಗಲೀ, ಪ್ರಭಾತದ ಮೋಹನ ರೂಪವನ್ನಾಗಲೀ ಆಸ್ವಾದಿಸಲು ಶಕ್ಯವಾಗಲಿಲ್ಲ.

"ಅಮಾತ್ಯರೆ, ತಾವು ರಾತ್ರಿಯನ್ನು ಸುಖನಿದ್ರೆಯಲ್ಲಿ ಕಳೆದಿರಿ, ಎಂಬುದಾಗಿ ನಾನು ನಂಬುತ್ತೇನೆ." ಎಂದು ಕುಳಿಂದಕನು ಬಂದು ದುಷ್ಟಬುದ್ಧಿಯ ಕ್ಷೇಮವಾರ್ತೆಯನ್ನು ವಿಚಾರಿಸಿದನು.

"ತಮ್ಮ ಆತಿಥ್ಯದಿಂದ ನಾನು ಸಂತೋಷಿತನಾದೆನು" ಎಂಬ ಪ್ರತ್ಯುತ್ತರವು ಅಮಾತ್ಯನಿಂದ ಕುಳಿಂದಕನಿಗೆ ಲಭಿಸಿತು. ಈ ಸಂದರ್ಭದಲ್ಲಿ ರಾಜಮಂದಿರದ ಗೋಪುರದಲ್ಲಿ ಮಹತ್ತಾದ ಒಂದು ಭೇರಿಯನ್ನು ಊದುತ್ತಿರುವ ಸಪ್ಪಳವು ಕೇಳಬರತೊಡಗಿತು. "ಅದೇನು?" ಎಂದು ಅಮಾತ್ಯನು ಸ್ವಲ್ಪ ಆಶ್ಚರ್ಯಚಕಿತನಾಗಿ ಪ್ರಶ್ನಿಸಿದನು.

“ಏನೂ ಇಲ್ಲ; ನಮ್ಮ ಊರ ಪದ್ಧತಿಯು. ದೇಶದಲ್ಲಿ ವಿಶೇಷ ಸಂಭವಗಳೇನಾದರೂ ಜರುಗಿದರೆ--ಅವು ಸೈನಿಕ ಸಂದರ್ಭಗಳಾಗಿದ್ದರೆ-ಈ ರೀತಿಯ ಒಂದು ದೊಡ್ಡ ಭೇರಿಯನ್ನು ಊದುವದು ನಮ್ಮ ಊರ ಪದ್ಧತಿಯು. ಆ ಶಬ್ದವನ್ನು ಕೇಳಿದೊಡನೆಯೇ ಸುತ್ತುಮುತ್ತಲಿನ ಜನರು ಬಂದು ಸೇರುವರು. ಆಗ ನಾವು ವಿಶೇಷವಾರ್ತೆಯನ್ನು ಪ್ರಜೆಗಳಿಗೆ ಅರುಹುವೆವು.”

“ಈಗ ಯಾವ ವಿಶೇಷ ಸಂಭವವು ಜರುಗಿತು?”

“ದಂಡಾಳುಗಳನ್ನು ಸಂಗ್ರಹಿಸಿ ರಣಾಂಗಣಕ್ಕೆ ಕಳುಹಬೇಕವೆ?”

“ಹೌದು; ಇಲ್ಲಿಂದ ತನ್ನ ಯಾವಾಗ ದಂಡಿನೊಡನೆ ಹೊರಡಲು ಚಂದ್ರಹಾಸನಿಗೆ ಸಾಧ್ಯವಾಗಬಹುದು?” ಎಂದನು ಅಮಾತ್ಯನು. “ಎಷ್ಟು ಜಾಗ್ರತೆಯಾಗಿ ತೆರಳಲು ಸಾಧ್ಯವಿದೆಯೋ ಅಷ್ಟು ಉತ್ತಮವು”

“ಮೂರು ದಿನಗಳ ಕಾಲವಿಳಂಬವಾಗಬಹುದು. ನಾಡಿನ ನಾನಾ ಭಾಗಗಳಲ್ಲಿ ಜೀವಿಸುತ್ತಿರುವ ಸೈನಿಕರು ಈ ವಿವರವನ್ನು ಅರಿತು ಬರಬೇಡವೆ? ಪ್ರವಾಸಕ್ಕೆ ಬೇಕಾದ ಸನ್ನಾಹಗಳನ್ನು ಮಾಡಬೇಡವೆ? ಮೂರು ದಿನಗಳಲ್ಲಿ ನನ್ನ ಸೈನಿಕರನ್ನು ಸಂಘಟಿಸಿ ರಾಜಧಾನಿಗೆ ಕಳುಹಿಸುವೆನು.”

“ಒಳ್ಳೆಯದು; ನನಗಿನ್ನು ಇಲ್ಲಿ ಹೆಚ್ಚು ಸಮಯ ನಿಲ್ಲಲು ಸಾಧ್ಯವಿಲ್ಲ. ನಿನ್ನೆ ಹೇಳಿದಂತೆ ವಾಯುವ್ಯದಿಕ್ಕಿನಲ್ಲಿರುವ ಪ್ರಾಂತ್ಯಗಳಿಗೆ ಹೋಗಬೇಕಾಗಿದೆ. ನಾನು ಯುದ್ಧರಂಗಕ್ಕೆ ತೆರಳುವುದಿಲ್ಲ. ಮದನನಿಗೂ ಮಾರ್ತಂಡವರ್ಮನಿಗೂ ಚಂದ್ರಹಾಸನನ್ನು ನೋಡಿ ರಕ್ಷಿಸಲು ಅವಶ್ಯವಿರುವ ಸೂಚನೆಗಳನ್ನು ನೀಡುವೆನು. ನನಗೆ ತೆರಳಲು ತಾವು ಇನ್ನು ಅಪ್ಪಣೆ ಕೊಡಬೇಕೆಂದು ಬೇಡುವೆನು.”

“ತಮಗೆ ಹೆಚ್ಚಿನ ಮಹತ್ವದ ಕೆಲಸಗಳಿಲ್ಲದಿದ್ದರೆ ಇನ್ನು ಒಂದೆರಡು ದಿನಗಳ ಮಟ್ಟಿಗೆ ಈ ಪಾಮರನ ಆತಿಥ್ಯವನ್ನು ಸ್ವೀಕರಿಸಬೇಕೆಂಬುದೇ ನನ್ನ ಬಯಕೆಯು!”

“ಇಲ್ಲ, ಈಗ ಅದಕ್ಕೆ ಸೌಕರ್ಯವಿಲ್ಲ; ನಾನು ಹೋಗುವೆನು. ಮಾಂಡಲಿಕರೇ, ಪ್ರಣಾಮಗಳು!” ಎಂದು ನುಡಿಯುತ್ತ ಅಮಾತ್ಯನು ಮಹಡಿಯ ಮೆಟ್ಟಿಲುಗಳನ್ನು ಇಳಿಯಲು ಪ್ರಾರಂಭಿಸಿದನು. ಕುಳಿಂದಕನು ತನ್ನ ಅತಿಥಿಯನ್ನು ಕಳುಹಲು ಹಿಂಬಾಲಿಸಿದನು.

“ತಾವು ಆಗಾಗ ಈ ಬಡವನಲ್ಲಿಗೆ ಬಂದು ಕೃಪೆತೋರಬೇಕು.”

“ಮಾಂಡಲಿಕರೇ, ತಮ್ಮ ಆತಿಥ್ಯವನ್ನು ಸ್ವೀಕರಿಸಲು ಅಸಲ್ಪವಾದ

ಆಹ್ಲಾದವು ನನಗಿದೆ. ತಮ್ಮಂಥ ಸರಳ ಮನಸ್ಸಿನ ಉದಾರ ಹೃದಯರ ಸ್ನೇಹವೂ ಗೆಳೆತನವೂ ನನಗೆ ಅವಶ್ಯವಿದೆ. ಹೋಗಿ ಬರುವೆನು, ಪ್ರಣಾಮಗಳು!"

"ಪ್ರಣಾಮಗಳು!"

ದುಷ್ಟಬುದ್ಧಿಯು ತನ್ನ ರಥದಲ್ಲಿ ಕುಳಿತು, ಕುಳಿಂದಕನ ದೃಷ್ಟಿಯಿಂದ ಮರೆಯಾದನು; ಅಮಾತ್ಯನು ಕಣ್ಣುಮರೆಯಾಗುವವರೆಗೂ, ಮಾಂಡಲಿಕನು ಆತನನ್ನು ನೋಡುತ್ತಲಿದ್ದನು.

ದೇಶದಲ್ಲಿ ದಂಡಯಾತ್ರೆಗೆ ಹೊರಡುವ ಸುದ್ದಿಯು ಕಾಳ್ಗಿಚ್ಚಿನಂತೆ ಪಸರಿಸಿತು. ಯಾವ ವಿಧದ ಸಾಹಸ ಕೃತ್ಯಗಳಿಗೂ ಅವಕಾಶವಿಲ್ಲದೆ, ಬೇಸರದಿಂದ ಕುಳಿತ ಕುಳಿಂದ ತರುಣರ ಜೀವನಗಳಲ್ಲಿ ಈ ವಾರ್ತೆಯು ಹೊಸ ಉತ್ಸಾಹ, ಹೊಸ ಹುರುಪು ಆವಿರ್ಭವಿಸುವಂತೆ ಮಾಡಿತು. ದೂರದ ನಾಡಿಗೆ ತೆರಳಿ ತಮ್ಮಲ್ಲಿ ತುಂಬಿರುವ ಕಲಿತನವನ್ನು ಪ್ರದರ್ಶಿಸಲು ಅಮೂಲ್ಯವಾದ ಒಂದು ಸಂದರ್ಭವು ಬಂದೊದಗಿದುದಕ್ಕಾಗಿ ಜನರು ಆಹ್ಲಾದಿಸಿದರು. ಇದು ವರೆಗೆ ಉಪಯೋಗಶೂನ್ಯವಾಗಿ ಒಂದು ಮೂಲೆಯಲ್ಲಿ ಬಿದ್ದಿರುವ ಖಡ್ಗ, ಈಟಿ, ಗದೆ ಮೊದಲಾದ ಶಸ್ತ್ರಗಳನ್ನು ಜನರು ತೆಗೆದು, ಅವುಗಳನ್ನು ಮಸೆದು ಸರಿಪಡಿಸಲಾರಂಭಿಸಿದರು. ಶತ್ರುಗಳ ನೆತ್ತರಿನ ನದಿಯಲ್ಲಿ ಆಡಬೇಕೆಂಬ ಭೀಷಣಾಹ್ಲಾದದಲ್ಲಿರುವ ಆಸುರೀಯ ಲಾಲಸೆಯು ಕುಳಿಂದ ನಿವಾಸಿಗಳ ಬದುಕಗಳಲ್ಲಿ ಮಿಂಚತೊಡಗಿತು, ತಮ್ಮ ಕುದುರೆ, ಕತ್ತೆ ಮೊದಲಾದ ವಾಹನಗಳನ್ನು ಅವರು ಸಜ್ಜುಗೊಳಿಸತೊಡಗಿದರು ಇದುವರೆಗೆ ಕೇಳಿ ಬಾರದಿದ್ದ ರಣಗೀತೆಗಳು ಪುನಃ ನಾಡ ಜನರ ವದನ ಮಂಡಲಗಳಿಂದ ಹೊರಬೀಳತೊಡಗಿದುವು. ಉತ್ಸಾಹ, ಹರ್ಷ ಇವುಗಳು ಕುಳಿಂದಪ್ರಾಂತ್ಯದಲ್ಲಿ ಹೆಚ್ಚಿದುವು.

ರಾಜಾಜ್ಞೆಯು ಬಂದಿತು; ಮೂರನೆಯ ದಿನ ಯುದ್ಧಕ್ಕೆ ತೆರಳಬೇಕಾದ ಪ್ರತಿಯೊಬ್ಬರೂ ರಾಜನಿಕೇತದ ಮುಂದೆ ಬಂದು ಸೇರಬೇಕೆಂಬ ಸುದ್ದಿಯನ್ನು ಚಾರರು ಜನರಿಗೆಲ್ಲಾ ಅರುಹುತ್ತ ನಾಡಿನಲ್ಲೆಲ್ಲ ಸಂಚರಿಸಿದರು. ಸೈನಿಕರು ಊರುಗಳಲ್ಲಿ ಸಂಚರಿಸಿ, ಸೈನ್ಯಕ್ಕೆ ಸೇರಲಿರುವ ಜನರನ್ನು ಆರಿಸಿ ತೆಗೆಯಲು ಪ್ರಾರಂಭಿಸಿದರು. ಜನರು ದಂಡಯಾತ್ರೆಗೆ ಹೊರಡಲಿರುವ ದಿನವನ್ನು ಕಾಯತೊಡಗಿರುವರು.

ನಿಶ್ಚಿತ ದಿನವು ಬಂದಿತು. ಪ್ರಾಂತ್ಯದ ನಾನಾ ಭಾಗಗಳಿಂದ ಜನರು ಕುಳಿಂದಕ್ಕೆ ಬರತೊಡಗಿದರು. ತಾಯಿಯಂದಿರು ತಮ್ಮ ಮಕ್ಕಳನ್ನು ಆಶೀರ್ವದಿಸಿ

ದಂಡಯಾತ್ರೆಗೆ ಕಳುಹಿದರು. ಹೊಸದಾಗಿ ದಾಂಪತ್ಯಜೀವನದಲ್ಲಿ ಕಾಲಿಟ್ಟ ತರುಣರು ತಮ್ಮ ನಲ್ಲೆಯರೊಡನೆ ಪ್ರೇಮಪೂರ್ವಕವಾದ ನುಡಿಗಳನ್ನಾಡಿ, ಅವರನ್ನು ಅಪ್ಪಿಗೊಂಡು, ಸಂತೈಸಿದ ನಂತರ ಬೀಳ್ಕೊಂಡರು. ತರುಣಿಯರು ತಮ್ಮ ಇನಿಯರ ಲಲಾಟಗಳಲ್ಲಿ ವಿಜಯ ತಿಲಕಗಳನ್ನಿಟ್ಟು ಕಳುಹಿದರು. ಎಲ್ಲರೂ ಅರಸನ ಆಜ್ಞೆಯನ್ನು ಮಾನಿಸುವುದಕ್ಕಾಗಿ ಮುಂದೆ ಬಂದರು. ಮೃತ್ಯುವಿನ ಲೀಲಾನಿವಾಸಭೂಮಿಯಾದ ರಣಾಂಗಣಕ್ಕೆ ತಮ್ಮ ರಮಣಂದಿರನ್ನು ಕಳುಹಲು ಮಡದಿಯರು ಕಂಬನಿಗಳನ್ನು ಸುರಿಸಲಿಲ್ಲ. ತಮ್ಮ ಮುದ್ದು ಗೂಸುಗಳಿಂದ ಅಗಲುವ ದುಃಖವನ್ನು ನೆನೆದು, ತಾಯಂದಿರು ಬಾಷ್ಪಕಣಗಳನ್ನು ಹೊರಸೂಸಲಿಲ್ಲ. ಹರ್ಷದಿಂದ ನಗುಮೊಗದೊಡನೆ ಆ ವನಿತೆಯರು ತಮ್ಮ ಗಂಡಂದಿರನ್ನೂ, ಮಕ್ಕಳನ್ನೂ ರಣಾಂಗಣಕ್ಕೆ ಕಳುಹಿದರು.

ರಾಜಗೇಹದ ಮುಂದೆ ಜನರು ನೆರೆದರು. ವೃದ್ಧನಾದ ಕುಳಿಂದಕನು ತನ್ನ ಪ್ರಜೆಗಳನ್ನು ನೋಡಿದನು. ಅವರಲ್ಲಿ ಹರಿದಾಡುತ್ತಿರುವ ಶೌರ್ಯಸಂಜೀವನವನ್ನು ಕಂಡು ಅವನ ಎದೆಯು ಸಂತೋಷದಿಂದ ಉಬ್ಬಿತು. ಅವನು ಕಡಲಿನಂತೆ ಅಲ್ಲಿ ನೆರೆದಿದ್ದ ಜನಸಂದಣಿಯೊಡನೆ ಹೀಗೆ ನುಡಿದನು: “ಪ್ರಜೆಗಳೇ, ನಿಮ್ಮಗಳ ಉತ್ಸಾಹವನ್ನು ಕಂಡು ಅತ್ಯಂತ ಸಂತೋಷವಾಗಿದೆ. ನಿಮ್ಮ ನೆತ್ತರಿನಿಂದ ಕುಳಿಂದಸಿಂಹಾಸನವನ್ನು ನೀವು ಯಾವ ರೀತಿ ಇದುವರೆಗೆ ಕಾಪಾಡಿದಿರಿ ಎಂಬುದನ್ನು ನಾನು ಬಲ್ಲೆನು; ಅದೆಷ್ಟು ಸಾರಿ ಜೀವದಾನವನ್ನು ನೀಡಲು ಸಿದ್ಧರಾಗಿ ನೀವು ಮುಂದೆ ಬಂದುದನ್ನು ನಾನು ಮರೆತಿಲ್ಲ. ನಿಮ್ಮ ಧೈರ್ಯಸಾಹಸಗಳ ಕತೆಯನ್ನು ಕೇಳುವಾಗ ಶತ್ರುಗಳ ಎದೆಗಳು ಬಿರಿಯುತ್ತಲಿರುವುವು. ಪುನಃ ಸಿಂಹಾಸನವನ್ನು ರಕ್ಷಿಸಲು ನಿಮ್ಮ ಬಾಹುಗಳ ಬಲವು ಈಗ ಅವಶ್ಯವಾಗಿ ಬಂದಿದೆ. ನಿಮ್ಮ ಕಲಿತನವನ್ನು ತೋರಿಸಿ, ಈ ದಂಡಯಾತ್ರೆಯಲ್ಲಿ ಕುಂತಳಸಿಂಹಾಸನವನ್ನು ಭದ್ರಪಡಿಸಿ, ಕುಳಿಂದಕ್ಕೆ ನೀವು ಕೀರ್ತಿಯನ್ನು ತರುವಿರಿ ಎಂದು ನಂಬುತ್ತೇನೆ; ಆದರೆ, ನನ್ನ ಮಕ್ಕಳೇ, ಒಂದು ವ್ಯಸನವು ನನಗಿರುವದು. ನಾನು ಅರವತ್ತು ವರುಷಗಳ ಮುದುಕನಾದೆನು. ನಿಮ್ಮ ಮುಂದಾಳುತನವನ್ನು ವಹಿಸಿ, ಇದುವರೆಗೆ ಅನೇಕ ಕೊಳಗುಳಗಳಲ್ಲಿ ಕಾದಾಡಿದಂತೆ, ಇನ್ನು ಹೋರಾಡಲು ನಾನು ಶಕ್ತಿಯಿಲ್ಲದವನಾಗಿದ್ದೇನೆ. ನನ್ನ ಬಾಹುಗಳ ಶಕ್ತಿಯು ಕುಗ್ಗಿದೆ; ತಲೆಗೂದಲುಗಳು ನೆರೆತು ಹೋಗಿವೆ; ಕಣ್ಣುಗಳು ಕಾಣುವದಿಲ್ಲ. ಆದುದರಿಂದ ಈ ವೃದ್ಧನನ್ನು ನೀವು ಕ್ಷಮಿಸುವಿರೆಂದು ನಾನು ನಂಬುತ್ತೇನೆ. ಆದರೂ ನಿಮ್ಮ ಮುಂದಾಳಾಗಿ ಚಂದ್ರಹಾಸನು ಬರುವವನಾಗಿದ್ದಾನೆ. ಅವನು ನನ

ಗೆಷ್ಟು ಮುದ್ದಿನವನು ಎಂಬುದು ನೀವೆಲ್ಲ ತಿಳಿದ ಸಂಗತಿಯಾಗಿದೆ. ಯುದ್ಧ ರಂಗದಲ್ಲಿ ಅವನನ್ನು ಕಾಪಾಡಿ, ಕುಳಿಂದಕ್ಕೆ ಯಶಸ್ಸನ್ನು ಸಂಪಾದಿಸಬೇಕೆಂಬುದೇ ನಾನು ನಿಮಗೆ ನೀಡುತ್ತಿರುವ ಉಪದೇಶ." ಎಂದು ಹೇಳಿ, ಮಾಂಡಲಿಕನು ಮೌನವನ್ನವಲಂಬಿಸಿದನು.

ಚಂದ್ರಹಾಸನು ಮುಂದೆ ಬಂದು ನುಡಿದನು: "ಗೆಳೆಯರೆ! ಎಷ್ಟೋ ಕದನಗಳಲ್ಲಿ ಕುಂತಳಕ್ಕೆ ನಿಮ್ಮ ನೆತ್ತರವನ್ನು ಸುರಿಸಿ ನೀವು ವಿಜಯಶ್ರೀಯನ್ನು ಸಂಪಾದಿಸಿ ಕೊಟ್ಟಿರುವಿರಿ ಎಂಬುದು ವಿಶ್ವವಿಶ್ರುತ ಸಂಗತಿಯಾಗಿದೆ. ಸ್ವಾಮಿನಿಷ್ಠರಾದ ನಿಮಗೆ ಅದು ಅತ್ಯಂತ ಅಭಿಮಾನವೇ ಆಗಿದೆ. ಕುಂತಳ ಸಿಂಹಾಸನವು ಯಾವ ಬಾಧೆಗೂ ಒಳಗಾಗದಂತೆ ನೋಡಿ ಪರಿಪಾಲಿಸುವದು ನಮ್ಮ ಕರ್ತವ್ಯವೇ ಸರಿ. ಆದುದರಿಂದ ಈ ದಂಡಯಾತ್ರೆಗೆ ನೀವು ಹೊರಡಬೇಕಾಗಿ ಬಂದಿದೆ. ನಾನಾದರೋ, ಯುದ್ಧರಂಗದ ಪರಿಚಯವಿಲ್ಲದ ತರುಣನು; ನನಗೆ ರಣಶಾಸ್ತ್ರದ ಅನುಭವವಿಲ್ಲ; ಆದುದರಿಂದ ನೀವು ನನ್ನನ್ನು ಮುಂದಾಳು ಎಂದು ಹೇಳುವುದರ ಬದಲು, ಅನುಯಾಯಿ ಎಂದರೆ ಅದು ಹೆಚ್ಚಿನ ಸೊಗಸು. ಮುಂದಾಳಿನಲ್ಲಿರಬೇಕಾದ ಯಾವ ಗುಣಗಳೂ ನನ್ನಲ್ಲಿ ಇಲ್ಲ. ನನ್ನ ಪೂಜ್ಯ ತಂದೆಯವರ ಆಶೀರ್ವಾದದಿಂದಲೂ, ನಿಮ್ಮ ಸ್ನೇಹದಿಂದಲೂ ನಾನು ಧೈರ್ಯ ಪಟ್ಟು ಆ ಭಾರವನ್ನು ಹೊರಲು ಸಿದ್ಧನಾದೆನು ಆ ಭಾರವನ್ನು ವಹಿಸಿರುವ ನನಗೆ ನೀವು ಸಕಲಸಹಾಯಗಳನ್ನು ನೀಡಬೇಕೆಂಬುದೇ ನನ್ನ ಅಪೇಕ್ಷೆಯು."

"ಕುಂತಳೇಂದ್ರನಿಗೆ ವಿಜಯವಾಗಲಿ!" "ಕುಳಿಂದ ಮಹಾರಾಜರಿಗೆ ವಿಜಯವಾಗಲಿ!" "ಚಂದ್ರಹಾಸ ರಾಜಕುಮಾರರಿಗೆ ವಿಜಯವಾಗಲಿ!" ಎಂಬಿತ್ಯಾದಿ ಘೋಷಗಳು ಚಂದ್ರಹಾಸನು ತನ್ನ ನುಡಿಗಳನ್ನು ಸಮಾಪ್ತಿಗೊಳಿಸಿದೊಡನೆಯೇ ಸೈನಿಕರ ವದನಮಂಡಲಗಳಿಂದ ಹೊರಬಿದ್ದು ಗಗನವಲಯದಲ್ಲಿ ವ್ಯಾಪಿಸಿದುವು.

ಚಂದ್ರಹಾಸನು ಕುಳಿಂದಕನಿಗೆ ನಮಿಸಿದನು; ಕುಳಿಂದಕನು ತರುಣನಿಗೆ ಉಪದೇಶಗಳನ್ನೂ ರಣಾಂಗಣದಲ್ಲಿ ಯಾವ ರೀತಿ ಕಾದಾಡಬೇಕೆಂಬ ಸೂಚನೆಗಳನ್ನೂ ನೀಡಿದನು. ತಾಯಿಯು ಬಂದು ಮಗನ ಹಣೆಯ ಮೇಲೆ ವಿಜಯತಿಲಕವನ್ನಿಟ್ಟು ಹರಸಿದಳು ತಾಯಿಯ ಚರಣಗಳಲ್ಲಿ ಚಂದ್ರಹಾಸನು ಬಿದ್ದನು.

"ಮಗೂ, ವಿಜಯಿಯಾಗಿ ಬಾ!" ಎಂದಳು ಜನನಿ

"ತಮ್ಮೆಲ್ಲರ ಆಶೀರ್ವಾದದಿಂದ ಅದು ಲಭ್ಯವಾಗುವದು!" ಎಂಬದು ಮಗನ ಪ್ರತ್ಯುತ್ತರವಾಗಿದ್ದಿತು.

ಚಂದ್ರಹಾಸನು ತನ್ನ ಧವಳವರ್ಣದ ಹಯದ ಮೇಲೆ ಆರೂಢನಾದನು. ಭಟರು ಪುರಪ್ರದಕ್ಷಿಣೆಯನ್ನು ಮಾಡಿ ದಂಡಯಾತ್ರೆಗೆ ಹೊರಟರು. ರಣಗೀತೆಗಳು ದಿಗಂತ್ಯಪರ್ಯಂತ ವ್ಯಾಪಿಸಿದುವು. ಬಿಳೀ ಕುದುರೆಯ ಮೇಲೆ ಕುಳಿತಿರುವ ಚಂದ್ರಹಾಸನನ್ನು ಅವನು ಕಣ್ಮರೆಯಾಗುವವರೆಗೆ ಕುಳಿಂದಕನೂ ಅವನ ರಾಣಿಯೂ ಅಶ್ರುಪೂರ್ಣಲೋಚನರಾಗಿ ತಮ್ಮ ಮಹಡಿಯ ಮೇಲೆ ನಿಂತು ನೋಡಿದರು.

---

## ಕಾಡಿನಲ್ಲಿ.

ಇಪ್ಪತ್ತನೆಯ ಶತಮಾನದಲ್ಲಿ ತೋರಿ ಬರುವ ಯಾಂತ್ರಿಕಸಾಮಗ್ರಿಗಳ ಸೌಕರ್ಯವು ಪೌರಾಣಿಕ ಕಾಲದಲ್ಲಿ ಇರಲಿಲ್ಲ. ಇಂದು ವಿಮಾನಗಳ ಮೂಲಕ ಮನುಷ್ಯನು ಒಂದು ಪಕ್ಷದೊಳಗಾಗಿ ವಿಶ್ವಪ್ರವಾಸವನ್ನು ಸಾಂಗಗೊಳಿಸಿ, ಹದಿನಾರನೆಯ ದಿನ ತನ್ನ ಸ್ವಗೃಹಕ್ಕೆ ತಲುಪಿ, ತನ್ನ ಮಡದಿಯು ಮಾಡಿಕೊಟ್ಟ ಚಹವನ್ನು ಕುಡಿಯಲು ಸಾಧ್ಯವಿದೆ ಈಗ ಇಷ್ಟರಮಟ್ಟಿಗೆ ವಿಜ್ಞಾನವು ಪಯಣಸೌಕರ್ಯವನ್ನು ದಯಪಾಲಿಸಿರುವದು; ಆದರೆ ಆ ಕಾಲವಲ್ಲಿ ಹೀಗಿರಲಿಲ್ಲ; ವಿಜ್ಞಾನವು ಇಷ್ಟರಮಟ್ಟಿಗೆ ವಿಕಾಸವನ್ನು ಹೊಂದಿರಲಿಲ್ಲ ವಿಮಾನ, ಉಗಿಬಂಡಿ, ಉಗಿಹಡಗು, ಮೋಟಾರುಗಾಡಿ ಎಂಬಿತ್ಯಾದಿ ಪ್ರವಾಸಸೌಕರ್ಯಗಳು ಆ ಕಾಲದಲ್ಲಿ ಇರಲಿಲ್ಲ. ಆ ಕಾಲದ ಜನರು ಗಾಡಿ, ಕುದುರೆ ಎಂಬಿವುಗಳನ್ನು ಪ್ರವಾಸಗಳಿಗಾಗಿ ಉಪಯೋಗಿಸುತ್ತಲಿದ್ದರು. ಆದುದರಿಂದ ಪ್ರವಾಸವನ್ನು ಮುಗಿಸಲು ಹೆಚ್ಚಿನ ಕಾಲವಿಳಂಬವಾಗುತ್ತಲಿದ್ದಿತು.

ಚಂದ್ರಹಾಸನ ದಂಡಾದರೂ ಅಂದಿನವರ ದೃಷ್ಟಿಯಲ್ಲಿ ವಾಯುವೇಗದಲ್ಲಿ ಮುಂದೆ ಸಾಗಿತ್ತೆಂದಿದ್ದರೂ, ಇಂದಿನವರ ದೃಷ್ಟಿಯಲ್ಲಿ ಅದು ಕೂರ್ಮದ ಚಲನೆಯಾಗಿದೆ ಎಂದೆನ್ನಬಹುದು. ಇಂದು ಒಂದು ದಿನದಲ್ಲಿ ನೂರಾರು ಹರದಾರಿಗಳಷ್ಟು ದೂರ ಯಾಂತ್ರಿಕ ಸಹಾಯದಿಂದ ನಾವು ತಲುಪಬಹುದು; ಆದರೆ ಆಗ ನಾಲ್ಕು ಹರದಾರಿಗಳಿಗಿಂತ ಹೆಚ್ಚು ದೂರ ಒಂದು ದಿನದಲ್ಲಿ ಪ್ರಯಾಣ ಮಾಡಲು ಸಾಧ್ಯವಿರಲಿಲ್ಲ! ಆದುದರಿಂದ ಚಂದ್ರಹಾಸನ ಪ್ರಯಾಣವು ನಿಧಾನವಾಗಿಯೇ ಮುಂದುವರಿದಿತ್ತೆಂದು ಹೇಳಬಹುದು. ದಿನವೂ ಒಂದೆರಡು ಗಾವುದ ದೂರವಲ್ಲದೆ ಅದಕ್ಕಿಂತ ಹೆಚ್ಚು

ಯಾತ್ರೆ ಮಾಡಲು ಸಾಧ್ಯವಿರಲಿಲ್ಲ. ಕಾಲಾಳುಗಳು ನಡೆದು ಹೋಗುವುದರಿಂದ ದಂಡಯಾತ್ರೆಯು ಯಾವಾಗಲೂ ಅತ್ಯಂತ ಸಾವಕಾಶವಾಗುತ್ತಿತ್ತು.

ಒಂದು ದಿನಕ್ಕೆ ಎರಡು ಗಾವುದ ದೂರ ಮುಂದೆ ತೆರಳುವುದು; ಅಲ್ಲಿ ಪಾಳಯವನ್ನು ಹೊಡೆದು ವಿಶ್ರಾಮವನ್ನು ಪಡೆಯುವುದು; ಮರುದಿನ ಪುನಃ ಮುಂದೆ ಸಾಗುವುದು. ಈ ರೀತಿಯಾಗಿತ್ತು ಆ ದಂಡಯಾತ್ರೆ! ಈ ಪ್ರಯಾಣದಲ್ಲಿ ಸಹಸ್ರಾರು ಜನರಿದ್ದುದರಿಂದ ಚಂದ್ರಹಾಸನಿಗೆ ಬೇಸರವಾಗಿ ತೋರಲಿಲ್ಲ; ಇದು ಸಹಜವು! ವಿವಿಧ ಸ್ವಭಾವಗಳ, ವಿವಿಧ ಭಾವನೆಗಳ ಜನರು ಒಂದು ದಿಕ್ಕಿನಲ್ಲಿ ಕಲೆತರೆ, ಅಲ್ಲಿ ವೈಚಿತ್ರ್ಯಗಳಲ್ಲದೆ ಇನ್ನಾವುದೂ ಗೋಚರವಾಗುವುದಿಲ್ಲ ವಿನೋದದ ಮಾತು-ಕತೆಗಳು, ವಿಚಿತ್ರ ವರ್ತನೆಯ ಜನರು ಇವರೆಲ್ಲರನ್ನು ನೋಡುವುದು ಅತ್ಯಂತ ಆಹ್ಲಾದವು! ಬೆಳಗಾಗಲು ಇರುವೆಗಳ ಸಾಲುಗಳು ತೆರಳುತ್ತಿರುವಂತೆ, ದೃಷ್ಟಿ ತಲುಪದಷ್ಟು ಉದ್ದವಾಗಿರುವ ಸೈನಿಕರ ಸಾಲುಗಳು ಪ್ರಯಾಣಕ್ಕೆ ಸಿದ್ಧವಾಗಿ ನಿಂತಿರುವುದು ಚಂದ್ರಹಾಸನಿಗೆ ಗೋಚರವಾಗುತ್ತಿದ್ದಿತು ಒಂದೊಂದು ಹೆಜ್ಜೆಯನ್ನು ಮುಂದಿಡುತ್ತ ತೆರಳುತ್ತಿರುವ ಈ ಜನರ ಗುಂಪುಗಳನ್ನು ಕಂಡು ಆಶ್ಚರ್ಯಚಕಿತರಾಗಿ, ಹತ್ತಿರದ ಊರಿನವರು ತಮ್ಮ ಕಣ್ಣುರೆಪ್ಪೆಗಳನ್ನು ಮುಚ್ಚಿ ನೋಡುತ್ತಿದ್ದರು. ಯಾವುದೋ ಒಂದು ಸೈನಿಕ ಕಲಾಪದ ಸೂಚನೆಯೆಂದು ತಿಳಿದವರು ತಮ್ಮ ನೋಟಗಳಲ್ಲಿ ಭಯವನ್ನು ಸೂಚಿಸುತ್ತಲಿದ್ದರು. ಗ್ರಾಮೀಣ ಕನ್ಯೆಯರು ತಮಗೆ ಈ ಜನರಿಂದ ಯಾವ ವಿಪತ್ತು ಸಂಭವಿಸುವುದೋ ಎಂಬ ಭಯದೊಡನೆ ತಮ್ಮ ಗೃಹಗಳನ್ನು ಸೇರಲು ಅತ್ಯಾತುರದಿಂದ ಓಡತೊಡಗಿದರು.

ಜನರು ತಮ್ಮ ಕಡೆಗೆ ತೋರುತ್ತಲಿದ್ದ ವಿಚಿತ್ರ ವರ್ತನೆಯು ಚಂದ್ರಹಾಸನು ವಿನೋದ ಪಡೆಯುವಂತೆ ಮಾಡಿತು ಹಲವು ಸ್ಥಳಗಳಲ್ಲಿ ಹಳ್ಳಿಯ ಜನರನ್ನು ಕಂಡು ಮಾತಾಡಲು ಪ್ರಯತ್ನಿಸಿದನು ಚಂದ್ರಹಾಸನು; ಆದರೆ ಮಾತಾಡುವುದು ಹಾಗಿರಲಿ, ದಂಡನ್ನು ಕಂಡು ಬೆದರಿ ಜನರು ಪಲಾಯನ ಮಂತ್ರವನ್ನು ಜಪಿಸಿದರು. ಸೈನಿಕರು ಅವರಿಗೆ ತಾವು ಯಾವ ಕೇಡು ಮಾಡುವವರಲ್ಲವೆಂದು ನುಡಿದರೂ, ಹಳ್ಳಿಗಾಡಿನವರು ಆ ಮಾತುಗಳನ್ನು ನಂಬುತ್ತಿರಲಿಲ್ಲ. ಸೈನಿಕರು ಅವರಿಗೆ ಯಮದೂತರಾಗಿ ತೋರುತ್ತಲಿದ್ದರು.

ಈ ರೀತಿ ಸಾಗಿತು ಆ ಪ್ರವಾಸ. ಹಲವು ಊರುಗಳನ್ನು, ನಾಡುಗಳನ್ನು, ಕಾಡುಗಳನ್ನು, ಬಯಲುಗಳನ್ನು, ನದಿಗಳನ್ನು ದಾಟಿ ಕುಳಿಂದದ ಭಟರು

ಕುಂತಳ ರಾಜಧಾನಿಯನ್ನು ಕುರಿತು ಪ್ರಯಾಣ ಮಾಡುತ್ತಲಿದ್ದರು. ಕಳಿಂದದಿಂದ ರಾಜಧಾನಿಯು ಇನ್ನೂರು ಗಾವುದಗಳ ದೂರವಿದ್ದುದರಿಂದ ಅಲ್ಲಿಗೆ ತಲುಪಲು ಹತ್ತಿಪ್ಪತ್ತು ದಿನಗಳು ಬೇಕಾಗಿದ್ದುವು. ಚಂದ್ರಹಾಸ ನಾದರೂ ಕುಂತಳ ನಗರವನ್ನು ಇದುವರೆಗೆ ನೋಡಿರಲಿಲ್ಲ. ಆ ನಗರವು ಭಾರತವರ್ಷದಲ್ಲಿ ಅತ್ಯಂತ ನಾಗರೀಕತೆಯನ್ನು ಹೊಂದಿದುದೆಂದು ಆ ಕಾಲ ದಲ್ಲಿ ಸುಪ್ರಸಿದ್ಧವಾಗಿದ್ದಿತು. ಇದಲ್ಲದೆ ಒಂದು ಸಾಮ್ರಾಜ್ಯದ ರಾಜಧಾನಿ ಯಾಗಿದ್ದುದರಿಂದ ರಾಜಧಾನಿಗಳಲ್ಲಿ ತೋರಿ ಬರುವ ವೈಭವವು ಕುಂತಳ ನಗರದಲ್ಲಿ ರಾರಾಜಿಸುತ್ತಲಿದ್ದಿತು. ಇಂಥ ಒಂದು ನಗರವನ್ನು ನೋಡ ಬೇಕೆಂಬ ಆಗ್ರಹವು ಚಂದ್ರಹಾಸನಲ್ಲಿ ಜನಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಕುಂತಳ ರಾಜನಂದಿನಿಯು ರೂಪರಾಶಿಯು ಆ ಕಾಲದಲ್ಲಿ ಸುಪ್ರಸಿದ್ಧ ವಾಗಿದ್ದುದರಿಂದ, ಚಂದ್ರಹಾಸನು ಅವಳನ್ನೂ ಒಮ್ಮೆ ನೋಡಬೇಕೆಂದು ಬಯಸಿದನು; ಆದರೆ ತನ್ನಂಥ ಅನ್ಯನಿಗೆ ಅವಳ ದರ್ಶನವು ಲಭಿಸುವುದೆಂಬ ನಂಬಿಕೆಯಿರಲಿಲ್ಲ.

ದುಷ್ಟಬುದ್ಧಿಯನ್ನು ಕುರಿತೂ ಚಂದ್ರಹಾಸನು ನೆನೆಯದೆ ಇರಲಿಲ್ಲ; ದುಷ್ಟಬುದ್ಧಿಯ ಆ ಕಣ್ಣುಗಳು ಅವನೊಬ್ಬ ತಂತ್ರಜ್ಞನೆಂಬುದನ್ನು ಸೂಚಿ ಸುತ್ತಿವೆ ಎಂದು ಚಂದ್ರಹಾಸನು ತನ್ನೊಳಗೆ ತಾನೇ ಚಿಂತಿಸಿದನು. ಕುಂತ ಳೇಶನನ್ನೇ ತನ್ನ ಕರದ ಗೊಂಬೆಯನ್ನಾಗಿ ಮಾಡಿ, ಸಾಮ್ರಾಜ್ಯದ ಎಲ್ಲಾ ಮೂಲೆಗಳಲ್ಲಿಯೂ ತನ್ನ ಅಧಿಕಾರವನ್ನು ಪ್ರದರ್ಶಿಸುತ್ತಲಿರುವ ಅಮಾತ್ಯನ ಬುದ್ಧಿಕೌಶಲವನ್ನು ನೆನೆದು ಚಂದ್ರಹಾಸನು ಬೆರಗಾಗಿ ಹೋದನು; ಆದರೆ ಅಮಾತ್ಯನ ಎದೆಯು ಕಾಪಟ್ಯವಾದ ತುಂಬಿದೆ ಎಂದು ಅವನ ಮನಸ್ಸು ನುಡಿಯುತ್ತಲಿದ್ದಿತು. ಕುಂತಳಕ್ಕೆ ದುಷ್ಟಬುದ್ಧಿಯು ಬಣ್ಣಿಸಿದಷ್ಟು ತೀವ್ರ ವಾದ ವಿಪತ್ತು ಬಂದೊದಗಿದೆ ಎಂಬ ನಂಬಿಕೆಯು ಚಂದ್ರಹಾಸನಿಗಿರಲಿಲ್ಲ. ನಿಜವಾಗಿಯೂ ಅಷ್ಟು ದುರ್ಘಟವಾದ ವಿಪತ್ತು ಬಂದೊದಗಿದ್ದರೆ, ಆ ಕಾರ್ಯ ವನ್ನು ತನ್ನ ಸಂಭಾಷಣೆಯ ಪ್ರಾರಂಭದಲ್ಲಿಯೇ ಉಸುರದೆ, ಅಮಾತ್ಯನು ಅನಾವಶ್ಯಕ ಮಾತುಗಳಲ್ಲಿ ಏಕೆ ಹೊತ್ತನ್ನು ಕಳೆದನು? ತಂತ್ರಜ್ಞನಾದ ಅವನು ಪ್ರಾರಂಭದಲ್ಲಿಯೆ ತನ್ನ ಪ್ರಯತ್ನವನ್ನು ಪ್ರಾರಂಭಿಸುತ್ತಿದ್ದನಲ್ಲವೇ? ಈ ವರ್ತನೆಯು ಅಮಾತ್ಯನಲ್ಲಿರುವ ಯಾವದೋ ಒಂದು ಕಾಪಟ್ಯದ ಲಕ್ಷಣ ವೆಂದು ಚಂದ್ರಹಾಸನು ಭಾವಿಸಿದನು; ಇದಲ್ಲದೆ ದುಷ್ಟಬುದ್ಧಿಯು ವಿವರಿಸಿ ದಂತೆ ಪರಚಕ್ರದ ಬಾಧೆಯು ಅಷ್ಟು ತೀವ್ರವಾದುದಾಗಿದ್ದರೆ, ಈ ಸಂಗತಿ ಯನ್ನು ಚಾರರ ಮೂಲಕ ತಾನು ತಿಳಿಯದೆ ಇರುತ್ತಿದ್ದೆನೆ? ಏನೇ ಇರಲಿ,

ದುಷ್ಟಬುದ್ಧಿಯ ಹೃದಯದಲ್ಲಿ ಕಾಪಟ್ಯವಿದೆ ಎಂದು ಚಂದ್ರಹಾಸನು ಊಹಿಸಿ ತಿಳಿದುಕೊಂಡನು. ಸ್ವಲ್ಪಹೊತ್ತು ಚಂದ್ರಹಾಸನು ತನ್ನನ್ನು ವಿಪತ್ತುಗಳ ಕಡಲಿನಲ್ಲಿ ನೂಡುವುದಾಗಿರಬಹುದು ಅಮಾತ್ಯನ ಉದ್ದೇಶವೆಂದೂ ಭಾವಿಸಿದನು. ಛೇ! ಅದಕ್ಕೇನು ಕಾರಣವು? ತನಗೂ ಅಮಾತ್ಯನಿಗೂ ಯಾವ ಸಂಬಂಧವೂ ಇಲ್ಲ. ಅವನೆಷ್ಟು ವಿನಯಪೂರ್ವಕವಾಗಿ ಮಾತನಾಡಿದನು! ಅನ್ಯರು ದುಷ್ಟರೆಂದು ಬಗೆಯುವುದುಚಿತವಲ್ಲವೆಂದು ತನ್ನೊಳಗೆ ತಾನೇ ನುಡಿದುಕೊಂಡನು ಚಂದ್ರಹಾಸನು.

ಹಲವು ಸಂಗತಿಗಳನ್ನು ಕುರಿತು ಅವನು ಆಲೋಚಿಸಿದನು. ದುಷ್ಟಬುದ್ಧಿಯ ನುಡಿಗಳು, ವರ್ತನೆಗಳು ಅವನಿಗೆ ಒಂದು ರಹಸ್ಯವಾಗಿ ತೋರಿದುವು. ಆತನ ವಿನಯ ಮತ್ತು ಆದರ ಪರಿಪೂರ್ಣವಾದ ನುಡಿಗಳ ಹಿಂದೆ ಕರಾಳ ರೂಪದ ಒಂದು ಭಯಂಕರ ಶಕ್ತಿಯು ನಿಂತಿದ್ದಂತೆ ಚಂದ್ರಹಾಸನಿಗೆ ತೋರಿತು. ಅಮಾತ್ಯನ ನೇತ್ರಗಳಲ್ಲಿ ತನ್ನ ಕಾರ್ಯಸಾಧನೆಗಾಗಿ ಎಂಥ ಭಯಂಕರ ಕೃತ್ಯವನ್ನು ಸಹ ಜರುಗಿಸಲಿರುವ ಎದೆಗಾರಿಕೆಯನ್ನು ಚಂದ್ರಹಾಸನು ಕಂಡಿದ್ದನು; ಆದರೆ ದುಷ್ಟಬುದ್ಧಿಯ ಬಾಹ್ಯವರ್ತನೆಯು ಆತನೊಬ್ಬ ಅಸುರೀಲಾಲಸೆಯುವನೆಂದು ನುಡಿಯಲು ಬರುವಂತಿರಲಿಲ್ಲ.

ಹದಿನಾರು ದಿನಗಳು ಕಳೆದವು; ದಂಡಯಾತ್ರೆಯಲ್ಲಿ ಯಾವ ವಿಶೇಷ ಸಂಭವಗಳೂ ಜರುಗಲಿಲ್ಲ. ಸೈನಿಕರೂ ಚಂದ್ರಹಾಸನೂ ಸಹರ್ಷಭರಿತರಾಗಿ ಮುಂದೆ ಸಾಗುತ್ತಲಿದ್ದರು. ಹದಿನೇಳನೇ ದಿನದ ಸಂಜೆಯು ಬಂದಿತು; ದಂಡಿನವರು ತಮ್ಮ ಆ ದಿನದ ಪಯಣವನ್ನು ಸಾಕು ಮಾಡಿದರು. ಅವರು ಪಾಳಯವನ್ನು ಹೊಡೆದುದು ಒಂದು ಕಾಡಿನ ಮಧ್ಯದಲ್ಲಿ ಹರಿಯುತ್ತಿರುವ ಒಂದು ಚಿಕ್ಕನದಿಯ ತೀರದಲ್ಲಾಗಿದ್ದಿತು. ಭಟರು ತಮ್ಮ ಪಯಣದ ಆಯಾಸವನ್ನು ಪರಿಹರಿಸುವಬಕ್ಕಾಗಿ ನದಿಗೆ ತೆರಳಿದರು. ಶೀತಲವಾದ ಜಲದಲ್ಲಿ ಸ್ನಾನವನ್ನು ಮಾಡಿ ಅವರು ತಮ್ಮ ಶರೀರಗಳ ಬಳಲಿಕೆಯನ್ನು ಹೋಗಲಾಡಿಸಿಕೊಂಡರು. ಹಲವು ಜನರು ಬೆಂಕಿಯನ್ನು ಹೊತ್ತಿಸಿ ತಮ್ಮ ಆದಾರಗಳನ್ನು ಪಾಕ ಮಾಡಲು ಪ್ರಾರಂಭಿಸಿದರು. ಇನ್ನು ಕೆಲವರು ನದಿಯ ತೀರದಲ್ಲಿ ಹರಡಿರುವ ಮರಳಿನ ಮೇಲೆ ಕುಳಿತು ಸ್ವೈರವಾಗಿ ಉಲ್ಲಾಸಪೂರ್ಣ ನುಡಿಗಳನ್ನಾಡುತ್ತ ಹರ್ಷಚಿತ್ತರಾಗಿದ್ದರು. ಒಬ್ಬನು ಹಿಂದಿನ ಕಾಲದ, ಅಂದರೆ ರಾಮಾಯಣ ಕತೆಗೆ ಸಂಬಂಧಿಸಿದ ಒಂದು ಐತಿಹ್ಯವನ್ನು ಹೇಳುತ್ತಲಿದ್ದನು. ಹತ್ತಿಪ್ಪತ್ತು ಮಂದಿ ಅವನ ಸುತ್ತಲೂ ಗುಂಪುಗೂಡಿಕೊಂಡು ಅವನು ಹೇಳುತ್ತಿರುವ ನುಡಿಗಳನ್ನು ಶ್ರಾವಿಸುತ್ತಲಿದ್ದರು.

ಚಂದ್ರಹಾಸನು ನದಿಯಲ್ಲಿ ತಿಳಿನೀರನ್ನು ಕುಡಿದು ತನ್ನ ಪಿಪಾಸೆಯನ್ನು ಪರಿಹರಿಸಿಕೊಂಡನು. ಬೆವರಿನಿಂದ ಕಂಗಾಲಾದ ತನ್ನ ಮೊಗವನ್ನು ನೀರಿನಿಂದ ಕ್ಷಾಲಿಸಿದನು. ಅನಂತರ ತನ್ನ ಗೆಳೆಯನಾದ ನಾಗರಾಜನನ್ನು ಕರೆದುಕೊಂಡು ನದಿಯ ತೀರಥಲ್ಲಿ ಸಂಚರಿಸುತ್ತ ಸ್ವಲ್ಪ ದೂರ ತೆರಳಿದನು. ಈ ನಾಗರಾಜನು ಚಂದ್ರಹಾಸನ ಬಾಲ್ಯಗೆಳೆಯನಾಗಿದ್ದನು. ಚಿಕ್ಕದಾದ ಆ ಮೊಗದಲ್ಲಿ ನಿಷ್ಕಲಂಕತೆಯೂ ಹರ್ಷವೂ ಅಲ್ಲದೆ ಬೇರೆ ಯಾವುದೂ ಕಾಣುತ್ತಿರಲಿಲ್ಲ. ವಯಸ್ಸು ೨೦-೨೨ ಆಗಿರಬಹುದು; ಚಂದ್ರಹಾಸನಂತೆ ಅಷ್ಟು ಸುಂದರನಲ್ಲದಿದ್ದರೂ ವಿರೂಪಿಯಾಗಿರಲಿಲ್ಲ. ಅವನ ಮಾತುಗಳು ಅತ್ಯಂತ ಮೃದುಮಧುರವಾಗಿದ್ದು, ಕೇಳುವವರ ಮನಸ್ಸಿನಲ್ಲಿ ಆಹ್ಲಾದವನ್ನು ಜನಿಸಲು ಪರ್ಯಾಪ್ತವಾದವುಗಳಾಗಿದ್ದವು. ಚಂದ್ರಹಾಸನಂತೆ ರಣಧೀರನೂ ಅವನಾಗಿರಲಿಲ್ಲ; ಆದರೆ ಅವನ ಬನುಕಿನಲ್ಲಿ ತುಂಬಿರುವ ಹಾಸ್ಯರಸವು ಸುಧಾಂಶು ಕಿರಣಗಳಂತೆ ಎಲ್ಲರಲ್ಲಿಯೂ ಅತ್ಯಾಹ್ಲಾದವು ಜನಿಸುವಂತೆ ಮಾಡುತ್ತಿದ್ದಿತು. ನಾಗರಾಜನು ಚಂದ್ರಹಾಸನ ಮೇಲೆ ಅತ್ಯಂತ್ಯ ಸ್ನೇಹವನ್ನಿಟ್ಟಿದ್ದನು. ದಂಡಯಾತ್ರೆಯು ಆ ತರುಣನಿಗೆ ಸಂತೋಷದಾಯಕವಲ್ಲದಿದ್ದರೂ ಚಂದ್ರಹಾಸನ ಮೇಲಿರುವ ಮಮತೆಯ ಪ್ರೇರಣೆಯಿಂದ ಅವನು ಬಂದಿದ್ದನು. ಚಂದ್ರಹಾಸನಿಗಾದರೂ ತನ್ನ ಗೆಳೆಯನನ್ನು ತ್ಯಜಿಸುವುದೆಂದರೆ ಸಂಕಟದ ಕೆಲಸವಾಗಿದ್ದಿತು.

ಗೆಳೆಯರಿಬ್ಬರೂ ಹತ್ತೆಂಟು ಮಾರುಗಳ ದೂರ ನಡೆದರು; ದ್ರುಮಲತಾದಿಗಳಿಂದ ನಿಬಿಡವಾದ ಆ ವಿಪಿನಪ್ರದೇಶವು ಅತ್ಯಂತ ಮನೋಹರವಾಗಿದ್ದಿತು. ಶಾಂತತೆಯ ಚಿತ್ರವನ್ನು ಸೃಷ್ಟಿದೇವತೆಯು ಆ ಪ್ರದೇಶದಲ್ಲಿ ಬರೆಯುತ್ತಿದ್ದಳು. ಗೆಳೆಯರಿಬ್ಬರೂ ಆನೆಯ ಬೆನ್ನಿನ ಹಾಗೆ ಹೊಳೆಯುತ್ತಿರುವ ನೈಸರ್ಗಿಕ ರಮಣೀಯತೆಯನ್ನು ಆಸ್ವಾದಿಸಲು ಪ್ರಾರಂಭಿಸಿದರು. ಕೆಲವು ನಿಮಿಷಗಳವರೆಗೆ ಮೌನವನ್ನವಲಂಬಿಸಿ, ಪ್ರಕೃತಿದೇವಿಯ ಮೋಹನರೂಪವನ್ನು ಸವಿಯುತ್ತಲಿದ್ದರು.

ಗೆಳೆಯರಿಬ್ಬರೂ ತನ್ಮಯರಾಗಿರಲು, ನೇರವು ಸಂಧ್ಯೆಯಾಗುತ್ತ ಬಂದಿತು. ಅವರಿಬ್ಬರೂ ತಮ್ಮ ಪಾಳಯಕ್ಕೆ ತೆರಳಲು ಅನುವಾದರು ಅಷ್ಟರಲ್ಲಿ ಒಂದು ಚೀತ್ಕಾರವು ವಾಯುಮಂಡಲವನ್ನು ಭೇದಿಸಿಕೊಂಡು ಬಂದು ಅವರ ಶ್ರೋತ್ರೇಂದ್ರಿಯಗಳಲ್ಲಿ ಪತಿಸಿತು ಚಂದ್ರಹಾಸನು ಭಯವಿಹ್ವಲನಾಗಿ:—"ಏನು ಶಬ್ದ ಅದು?" ಎಂದು ತನ್ನ ಗೆಳೆಯನ ಮೋರೆಯನ್ನು ನೋಡುತ್ತ ಪ್ರಶ್ನಿಸಿದನು. ನಾಗರಾಜನಾದರೂ ಆ ರವವು ಎಲ್ಲಿಂದ

ಬಂತೆಂದು ಆಲೋಚಿಸತೊಡಗಿದನು. ಪುನಃ ಅದೇ ಚೀತ್ಕಾರವು ಮೊದಲಿಗಿಂತ ಸ್ಪಷ್ಟವಾಗಿ, ಮೊದಲಿಗಿಂತ ವ್ಯಕ್ತವಾಗಿ ಕೇಳಿ ಬಂದಿತು. ಯುವಕರಿಬ್ಬರೂ ಮಾತಾಡದೆ ಮೌನವನ್ನವಲಂಬಿಸಿದರು. "ಹೆಂಗಸಿನ ಸ್ವರ!" ಎಂದು ಮೌನವನ್ನು ಭಂಜಿಸಿದನು ನಾಗರಾಜನು.

"ಕಾಡಿನಲ್ಲಿ ಹೆಂಗಸಿನ ಚೀತ್ಕಾರವು ಕೇಳಿಬರಲು ಕಾರಣವೇನು?" ಎಂದು ಚಂದ್ರಹಾಸನು ನುಡಿದನು.

"ಬಹುಶಃ ಅಪಾಯದಲ್ಲಿ ಸಿಕ್ಕಿರಬಹುದು"

"ಅವಳನ್ನು ರಕ್ಷಿಸುವದು ನಮ್ಮ ಕರ್ತವ್ಯವಲ್ಲವೆ?" ಎಂದು ನುಡಿದು, ಒರೆಯಿಂದ ಖಡ್ಗವನ್ನು ಹಿರಿದುಕೊಂಡು, ಆ ನಾದವು ಕೇಳಿ ಬಂದ ಕಡೆಗೆ ಚಂದ್ರಹಾಸನು ಧಾವಿಸಿದನು.

ನಾಗರಾಜನು ಗೆಳೆಯನನ್ನು ಹಿಂಬಾಲಿಸಿದನು. ಆ ತರುಣರಿಬ್ಬರೂ ಕರಗಳಲ್ಲಿ ಖಡ್ಗಗಳನ್ನು ಹಿಡಿದುಕೊಂಡು ಕಾಡಿನಲ್ಲಿ ಮುಂದೆ ಗಮಿಸಿದರು. ಆ ನೇರವು ಸಂಧ್ಯಾಸಮಯವಾದುದರಿಂದ ಕಾಡಿನಲ್ಲಿ ಕತ್ತಲೆಯು ಹರಡಿದ್ದಿತು ಅವರಿಬ್ಬರೂ ಕಲ್ಲು-ಮುಳ್ಳುಗಳನ್ನು ತುಳಿಯುತ್ತ ಕುತೂಹಲಚಿತ್ತರಾಗಿ ನಡೆದರು.

ಹೆಚ್ಚು-ಕಡಿಮೆ ನೂರು ಮಾರುಗಳಷ್ಟು ದೂರ ಅವರು ಹೋಗಿರಬಹುದು ಕತ್ತಲೆಯಲ್ಲಿ ಯಾರೋ ಮಾತಾಡುತ್ತಿರುವ ಸಪ್ಪಳವು ಬಂದು ಅವರ ಶ್ರವಣೇಂದ್ರಿಯಗಳಲ್ಲಿ ಪತಿಸಿತು. ಒಂದು ಮರದ ಹಿಂದೆ ನಿಂತು ಅವರು ಕೇಳ ಬರುತ್ತಿರುವ ನುಡಿಗಳನ್ನು ಶ್ರಾವಿಸತೊಡಗಿದರು.

ಕತ್ತಲೆಯಲ್ಲಿ ಒಂದು ಭಯಂಕರವಾದ ಕಂಠಸ್ವರವು ಕೇಳಬಂದಿತು. ಅದು ಪುರುಷನ ಕಂಠದಿಂದ ಹೊರಟ ನಾದವೆಂದು ನಿರ್ವಿವಾದವಾಗಿ ಹೇಳಬಹುದು. "ನೀನು ಚೀರಿದರೆ, ನಿನ್ನನ್ನು ಕಾಪಾಡಲು ಯಾರೂ ಬರುವಂತಿಲ್ಲ; ನಿನ್ನ ಕೂದಲುಗಳಿಗೆ ಸಹ ಧಕ್ಕೆಯು ತಗಲದಂತೆ ನೋಡಿ ರಕ್ಷಿಸುವೆವೆಂದು ನಾನು ಹೇಳಲಿಲ್ಲವೆ?"

"ಆದರೆ ನಿಮ್ಮೊಡನೆ ಬರುವದು ಹೇಗೆ? ನೀವು ಯಾರು? ನನ್ನನ್ನು ಈ ಕಾಡಿಗೆ ಏಕೆ ಕೊಂಡು ಬಂದಿರಿ? ವೃದ್ಧನಾದ ನನ್ನ ತಂದೆಯಿಂದ ನನ್ನನ್ನು ಅಗಲಿಸುವದರಿಂದ ನಿಮಗೆ ಯಾವ ಪ್ರಯೋಜನವಿದೆ?" ಎಂಬ ಹೆಂಗಸಿನ ಕೀರಳ ನಾದವು ಕೇಳ ಬಂದಿತು ಆ ಹೆಂಗಸು ಯಾರು? ಅವಳನ್ನೇಕೆ ಅವಳ ಇಷ್ಟಕ್ಕೆ ವಿಪರೀತವಾಗಿ ಈ ಜನರು ಕೊಂಡು ಬಂದರು? ಎಂದು ಚಂದ್ರಹಾಸನು ಆಲೋಚಿಸತೊಡಗಿದನು; ಆದರೆ ಹೊಳೆಯಲಿಲ್ಲ

"ರಾಜಕುಮಾರಿ! ಈಗ ನೀನು ನಮ್ಮ ಬಂಧನದಲ್ಲಿರುವೆಯೆಂಬುದನ್ನು ನೆನಪಿನಲ್ಲಿಡು. ನಿನಗೆ ಯಾವ ವಿಪತ್ತುಗಳೂ ನಮ್ಮಿಂದ ಸಂಭವಿಸಲಾರವು. ನಿನ್ನನ್ನು ನಾವೇಕೆ ಬಂಧಿಸಿದುದೆಂಬುದು ಕಾಲಕ್ರಮೇಣ ತಿಳಿಯುವದು." ಎಂಬ ಆ ಮೊದಲಿನ ಭಯಂಕರ ನಾದವೇ ವಿಪಿನದಲ್ಲಿ ಪುನಃ ಮೊಳಗಿತು.

"ಯಾವ ರಾಜಕುಮಾರಿ?" ಎಂಬುದಾಗಿ ಚಂದ್ರಹಾಸನು ತನ್ನ ಗೆಳೆಯನನ್ನು ಪ್ರಶ್ನಿಸಿದನು.

"ಯಾವ ರಾಜಕುಮಾರಿಯೆಂಬುದನ್ನು ನಾವು ಹೇಗೆ ತಿಳಿಯಬೇಕು? ಯಾವುದೋ ಒಂದು ದೇಶದ ರಾಜಕುಮಾರಿಯು ಇವಳಾಗಿರುವಳೆಂದೂ, ಯಾರೋ ದುಷ್ಟರು ಇವಳನ್ನು ಅಪಹರಿಸಿ ಇಲ್ಲಿಗೆ ತಂದಿರುವರೆಂದೂ ಮಾತ್ರ ನಿರ್ವಿವಾದವಾಗಿ ನಾವು ಊಹಿಸಬಹುದು."

"ಈ ದುಷ್ಟರ ಕರಗಳಿಂದ ಆ ವನಿತೆಯನ್ನು ರಕ್ಷಿಸುವದು ನಮ್ಮ ಕರ್ತವ್ಯವಲ್ಲವೆ?" ಎಂದು ಉತ್ಸುಕನಾಗಿ ಹೇಳಿದನು ಚಂದ್ರಹಾಸನು.

"ನಿಶ್ಚಯವಾಗಿಯೂ! ಸಂಕಟಕ್ಕೆ ಸಿಕ್ಕಿರುವ ನಾರಿಯನ್ನು ಸಲಹುವದು ಪುರುಷನ ಧರ್ಮವು!"

ಚಂದ್ರಹಾಸನು ತನ್ನ ಖಡ್ಗವನ್ನು ಹಿರಿದು ಹೆಜ್ಜೆಯನ್ನು ಮುಂದಿಡತೊಡಗಿದನು; ನಾಗರಾಜನು ಅವನನ್ನು ಹಿಂಬಾಲಿಸಿದನು. ಅಂಧಕಾರವು ಹೆಚ್ಚಿದುದರಿಂದ ಈ ತರುಣರು ತಮ್ಮ ಬಳಿಗೆ ಬರುತ್ತಿದ್ದುದು ಆ ಘಾತುಕರಿಗೆ ಗೋಚರವಾಗಲಿಲ್ಲ. ತಮ್ಮನ್ನು ಹಿಂಬಾಲಿಸಲು ವಿಸಮ್ಮತಿಯನ್ನು ಸೂಚಿಸುತ್ತಲಿದ್ದ ಆ ತರುಣಿಯನ್ನು ಅವರು ಬಲಾತ್ಕಾರವಾಗಿ ಹಿಡಿದೊಯ್ಯಲು ಯತ್ನಿಸುತ್ತಿದ್ದರು. ತಮ್ಮ ಈ ಕೃತ್ಯಗಳನ್ನು ನಿಷೇಧಿಸಲು ಸಮೀಪದಲ್ಲಿ ಯಾರೂ ಇಲ್ಲವೆಂದು ನೆನೆದುದರಿಂದ ಅವರು ಭಯಹೀನರಾಗಿದ್ದರು. ಚಂದ್ರಹಾಸನೂ ನಾಗರಾಜನೂ ಬರುವಾಗ ಉಂಟಾದ ಕಾಲುಗಳ ಸಪ್ಪಳವು ಅವರನ್ನು ಎಚ್ಚರಿಸಿತು; ಆದರೆ ಅದು ಕಾಡಿನಲ್ಲಿರುವ ಮೃಗಗಳ ಚಲನೆಯಿಂದುಂಟಾದ ರವವೆಂಬುದಾಗಿ ಅವರು ತಿಳಿದರು. ಆ ಜನರು ನಾಲ್ಕುಮಂದಿಯಿದ್ದರು; ಅವರಲ್ಲಿ ಬಲಿಷ್ಠನಾದ ಒಬ್ಬನು ಇತರರ ಮುಂದಾಳೆಂಬುದು ವ್ಯಕ್ತವಾಗುತ್ತಲಿದ್ದಿತು. ಅದುವರೆಗೆ ಆ ವನಿತೆಯೊಡನೆ ಮಾತಾಡುತ್ತಲಿದ್ದ ವ್ಯಕ್ತಿಯೇ ಅವನಾಗಿದ್ದನು. ಅವನ ಸ್ವರವು ಅತ್ಯಂತ ಪೌರುಷವಾಗಿದ್ದು, ಅದು ಅಂತರಂಗದಲ್ಲಿ ತುಂಬಿರುವ ಕಾಠಿಣ್ಯವನ್ನು ಹೊರ ಚೆಲ್ಲುತ್ತಲಿದ್ದಿತು.

ಚಂದ್ರಹಾಸನೂ ನಾಗರಾಜನೂ ಆಕಸ್ಮಿಕವಾಗಿ ಬಂದು ತಮ್ಮ ಮುಂದೆ ನಿಂತುದನ್ನು ಕಂಡು ಆ ದುಷ್ಟರು ಭಯವಿಹ್ವಲರಾದರು. ನಿರ್ಜನ ವಾದ ವಿಪಿನದಲ್ಲಿ ಧೈರ್ಯವನ್ನು ತಾಳಿ, ಭಯಂಕರ ಕೆಲಸಗಳಿಗೆ ಉದ್ಯುಕ್ತ ರಾಗಿರಲು, ತಮ್ಮ ಮಾತುಗಳನ್ನು ಅನ್ಯರು ಶ್ರಾವಿಸಿದರೆಂಬುದು ತಿಳಿಯಲು, ಅವರ ಭಯವು ಇನ್ನಿಷ್ಟು ಹೆಚ್ಚಿತು.

"ನೀವು ಯಾರು? ಈ ಹೆಂಗಸನ್ನು ಅದೇಕೆ ಅವಳ ಇಷ್ಟಕ್ಕೆ ವಿಪರೀತ ವಾಗಿ ಕಾಡಿಗೆ ಕೊಂಡು ಬಂದಿರುವಿರಿ?" ಎಂದು ಚಂದ್ರಹಾಸನು ಗರ್ಜಿಸಿದನು.

"ನಾವು ಯಾರಾದರೆ ನಿಮಗೇನು? ನಮ್ಮ ಕೆಲಸಗಳಿಗೆ ಅಡ್ಡಿ ಮಾಡಲು ನಿಮಗೆ ಯಾವ ಅಧಿಕಾರವಿದೆ?" ಎಂದು ನೀಚರ ಮುಂದಾಳು ಪ್ರತ್ಯುತ್ತರ ವನ್ನು ನೀಡಿದನು.

"ನಿಮ್ಮ ನುಡಿಗಳನ್ನು ಆಶ್ರಾವಿಸಿದ ನಂತರ ಯಾವುದೋ ಒಂದು ದುಷ್ಟ ಕೃತ್ಯದಲ್ಲಿ ನೀವು ಉದ್ಯುಕ್ತರಾಗಿರುವಿರಿ ಎಂಬುದು ತಿಳಿಯ ಬಂದಿತು. ನಿಮ್ಮ ಕ್ರೂರತೆಗೆ ಬಲಿಯಾಗಿರುವ ಈ ಹೆಂಗಸನ್ನು ರಕ್ಷಿಸುವದು ನನ್ನ ಕರ್ತವ್ಯವಾಗಿದೆ" ಎಂದು ನುಡಿಯುತ್ತ ಸ್ವಲ್ಪ ದೂರದಲ್ಲಿ ನಿಂತಿರುವ ವನಿ ತೆಯ ಬಳಿಗೆ ಅವನು ತನ್ನ ದೃಷ್ಟಿಯನ್ನು ಚೆಲ್ಲಿದನು. ಕತ್ತಲೆಯಾಗಿದ್ದುದ ರಿಂದ ಆ ಮಹಿಳೆಯ ರೂಪು ಸುವ್ಯಕ್ತವಾಗಿ ಚಂದ್ರಹಾಸನ ನೇತ್ರಗಳಿಗೆ ಗೋಚರವಾಗಲಿಲ್ಲ ಆದರೂ ಅವಳೋರ್ವ ತರುಣಿಯೆಂಬುದನ್ನು ಮಾತ್ರ ಅವನು ತಿಳಿದುಕೊಂಡನು.

"ನೀವು ಬಂದ ದಾರಿಯನ್ನು ಹಿಡಿದು ಹಿಂದಕ್ಕೆ ತೆರಳಿರಿ! ನಮ್ಮ ಕೆಲ ಸಕ್ಕೆ ವಿಘ್ನವನ್ನುಂಟು ಮಾಡಿದರೆ ಅದರ ಫಲವನ್ನು ಅನುಭವಿಸಬೇಕಾ ದೀತು!"

"ನಿಮ್ಮ ಬೆದರಿಕೆಗಳಿಗೆ ಅಂಜುವವರು ನಾವಲ್ಲ; ಈ ಹೆಂಗಸನ್ನು ತ್ಯಜಿಸಿ ಈ ಕ್ಷಣದಲ್ಲಿ ನೀವು ಇಲ್ಲಿಂದ ತೆರಳದಿದ್ದರೆ, ನೀವು ಸಾಯಬೇಕಾಗು ವುದು!"

ಯುವಕನ ಈ ಮಾತುಗಳು ದೂರದಲ್ಲಿ ನಿಂತಿರುವ ವನಿತೆಯ ಹೃದಯ ದಲ್ಲಿ ಆಶೆಯನ್ನು ಹುಟ್ಟಿಸಿದುವು. ತನ್ನನ್ನು ಈ ದುಷ್ಟರ ಕರದಿಂದ ರಕ್ಷಿಸ ಲಿರುವ ದೈವಿಕ ಸಹಾಯವು ಈ ತರುಣರ ಮೂಲಕ ಲಭಿಸಿತೆಂದು ಅವಳು ಬಗೆದಳು. ತರುಣನಾದ ಚಂದ್ರಹಾಸನ ಕಂಠಸ್ವರವು ಮಧುರವಾಗಿದ್ದುದರಿಂದ ಅವಳ ಮನಸ್ಸನ್ನು ಆಕರ್ಷಿಸಿತು. ಒಂದು ಬಾರಿ ಅವನ ಕಡೆಗೆ ತನ್ನ ದೃಷ್ಟಿಯನ್ನು ಚೆಲ್ಲಿದಳು; ಆದರೆ ಕತ್ತಲೆಯಲ್ಲಿ ನೋಡಲು ಸಾಧ್ಯವಿರಲಿಲ್ಲ.

ಮನುಷ್ಯರು ತಮ್ಮ ಒರೆಗಳಿಂದ ಖಡ್ಗಗಳನ್ನು ಹಿರಿದರು. ಚಂದ್ರಹಾಸನೂ, ನಾಗರಾಜನೂ ಅಸಿಗಳನ್ನು ಝಳಪಿಸುತ್ತ, ದುಷ್ಟರ ಮೇಲೆ ಏರಿ ಹೋದರು. ಚಿಕ್ಕದಾದ ಒಂದು ಕಾಳಗವೇ ಅಲ್ಲಿ ನಡೆಯಿತೆಂದು ಹೇಳಬಹುದು. ತನ್ನ ಖಡ್ಗವನ್ನು ತಿರುಗಿಸುತ್ತ ಶತ್ರುಗಳ ಪ್ರಹಾರಗಳನ್ನು ತಡೆದುಕೊಂಡು ಚಂದ್ರಹಾಸನು ತನ್ನ ಆಯುಧವನ್ನು ಶತ್ರುಗಳ ಮೇಲೆ ಪ್ರಯೋಗಿಸುತ್ತಲಿದ್ದನು ಶತ್ರುಗಳಾದರೂ ಧೀರರಿದ್ದರು. ಅವರು ನಾಲ್ವರೂ ನಾಲ್ಕು ಭಾಗಗಳಿಂದ ಆವರಿಸಿ ಈ ತರುಣರನ್ನು ಮುತ್ತಿದರು. ಖಣ, ಖಣ ಎಂಬ ಖಡ್ಗಗಳ ಸಪ್ಪಳವು ವಿಪಿನಾಂತರದಲ್ಲಿ ವ್ಯಾಪಿಸಿದ್ದ ಶಾಂತತೆಯನ್ನು ಭಂಜಿಸಿದುವು. ಖಡ್ಗಗಳು ಒಂದಕ್ಕೊಂದು ತಗಲುವುದರಿಂದ ಬೆಂಕಿ ಕಿಡಿಗಳು ಹೊರಟು ಹೊರಚಲ್ಲುತ್ತಲಿದ್ದುವು. ತರುಣರಾದರೋ ಇಬ್ಬರು; ನಾಲ್ಕು ಮಂದಿ ಪ್ರಬಲರಾದವರೊಡನೆ ಹೋರಾಡಬೇಕಾಗಿದ್ದಿತು. ನಾಲ್ಕು ಭಾಗಗಳಿಂದಲೂ ಬರುತ್ತಿರುವ ಖಡ್ಗಪ್ರಹಾರಗಳನ್ನು ತಡೆದುಕೊಂಡು, ಶತ್ರುಗಳ ಮೇಲೆ ಏರಿ ಹೋಗುವುದೆಂದರೆ ಅತ್ಯಂತ ಪ್ರಯಾಸವಾದ ಕೆಲಸವು! ಆದರೂ ಚಂದ್ರಹಾಸನು ಅಳುಕದೆ, ತನ್ನ ಮೇಲೆ ಬೀಳುತ್ತಿರುವ ತಾಡನಗಳನ್ನು ಸಹಿಸಿಕೊಂಡು ಕಾದಾಡತೊಡಗಿದನು.

ತರುಣಿಯು ದೂರದಲ್ಲಿ ನಿಂತು, ಕಾಳಗದಲ್ಲಿ ಯಾರು ವಿಜಯವನ್ನು ಹೊಂದುವರೆಂದು ಅತ್ಯಂತ ಕುತೂಹಲಭರಿತಳಾಗಿ ವೀಕ್ಷಿಸತೊಡಗಿದಳು. ಚಂದ್ರಹಾಸನ ಪ್ರಹಾರಗಳಿಂದ ಘಾತುಕರ ಕತ್ತಿಳಿಯುವುದನ್ನು ನೋಡುವಾಗ ಅವಳ ಹೃದಯದಲ್ಲಿ ಆಶೆಯು ಅಂಕುರಿಸುತ್ತಿದ್ದಿತು "ಜಗದೀಶ್ವರಾ! ಈ ತರುಣನಿಗೆ ವಿಜಯವನ್ನು ಪ್ರದಾನ ಮಾಡು" ಎಂಬ ಪ್ರಾರ್ಥನೆಯು ಅವಳ ಅಂತರಾಳದಿಂದ ಹೊರಬರುತ್ತಿದ್ದಿತು. ಚಂದ್ರಹಾಸನ ದೇಹವನ್ನು ಸೀಳಲು ಬರುತ್ತಿರುವ ಶತ್ರುಗಳ ಆಯುಧಗಳನ್ನು ಕಾಣುವಾಗ ಅವಳ ಮನವು ಭೀತಿಯಿಂದ ತಲ್ಲಣವನ್ನು ಹೊಂದುತ್ತಲಿದ್ದಿತು; ಭಯವು ಆಗಾಗ ಅವಳ ನೇತ್ರಗಳಿಂದ ಬಾಷ್ಪವನ್ನು ಹರಿಸುವಂತೆ ಮಾಡುತ್ತಲಿದ್ದಿತು.

ಈ ರೀತಿ ಅರ್ಧ ತಾಸು ಪರ್ಯಂತ ಕದನವು ಮುಂದುವರಿದಿತು; ಘಾತುಕರ ಖಡ್ಗವು ಬಂದು ಚಂದ್ರಹಾಸನ ಬಲದ ಭುಜದ ಮೇಲೆ ತನ್ನ ಸ್ಥಾನವನ್ನು ಹೊಂದಿ ತನ್ನ ದಾಹವನ್ನು ತೀರಿಸಲು ಬೇಕಾದ ನೆತ್ತರವನ್ನು ಹುಡುಕಲು ಗಾಯವನ್ನು ಮಾಡಿತು. ಆ ಪ್ರಹಾರವನ್ನು ಸಹಿಸಲಾರದೆ ಅವನು ನೆಲದ ಮೇಲೆ ಬಿದ್ದನು. ತಮ್ಮ ವೈರಿಗಳಲ್ಲಿಯ ಒಬ್ಬನು ಭೂಪತನವನ್ನು ಹೊಂದಿದ್ದನ್ನವಲೋಕಿಸಿ, ಘಾತುಕರ ಉತ್ಸಾಹವು ದ್ವಿಗುಣೀಭವಿಸಿತು.

ನಾಗರಾಜನ ಮೇಲೆಯೂ ಅವರು ಏರಿ ಹೋಗಿ ಅವನನ್ನು ಪರಾಜಯ ಗೊಳಿಸಲು ಯತ್ನಿಸಿದರು. ನಾಗರಾಜನು ಅಷ್ಟು ದೊಡ್ಡ ಕಲಿಯಲ್ಲವೆಂಬು ದನ್ನು ನಾನು ನಿಮಗೆ ಹಿಂದೆಯೇ ಹೇಳಿದ್ದೇನೆ. ರಣಶಾಸ್ತ್ರದ ಪಾಂಡಿತ್ಯವು ಅವನಿಗೆ ಲಭಿಸಿರಲಿಲ್ಲ; ಕಾದಾಡುವುದೆಂದರೆ ಅವನ ಧಮನಿಗಳಲ್ಲಿರುವ ನೆತ್ತರು ಹೆಪ್ಪುಗಟ್ಟಿದಂತಾಗುತ್ತಿತ್ತು. ತನ್ನ ಗೆಳೆಯನಲ್ಲಿರುವ ಧೈರ್ಯ-ಸಾಹಸಗಳನ್ನು ಅವಲಂಬಿಸಿ ಅವನು ಇದುವರೆಗೆ ಹೋರಾಡುತ್ತಿದ್ದನು ಚಂದ್ರಹಾಸನು ಶತ್ರುಗಳ ಪ್ರಹಾರಕ್ಕೆ ಬಲಿಯಾಗಿ ಭೂಮಿಯಲ್ಲಿ ಬಿದ್ದುದನ್ನು ಕಂಡು ಅವ ನಲ್ಲಿ ಅಂಜಿಕೆಯು ತಲೆದೋರಲಾರಂಭಿಸಿತು.

“ಗೆಳೆಯಾ! ನಾನು ಪ್ರಬಲವಾದ ಪ್ರಹಾರದಿಂದ ಬಿದ್ದಿರುವೆನು; ಕಾದಾ ಡಲು ನನಗೆ ಇನ್ನು ಶಕ್ತಿಯಿಲ್ಲ. ನೆತ್ತರವು ಧಾರೆ ಧಾರೆಯಾಗಿ ಹರಿಯು ತ್ತಿರುವದು. ನಿನ್ನ ಬಾಹುಗಳ ಬಲದಿಂದ ಈ ಚಾಂಡಾಲರ ಪಾಶದಲ್ಲಿ ಸಿಲು ಕಿರುವ ಹೆಂಗಸನ್ನು ಸಲುಹಬೇಕಾಗಿದೆ!” ಎಂದು ನುಡಿದು, ಚಂದ್ರಹಾಸನು ಭೂಮಿಯಿಂದ ಎದ್ದು ನಿಲ್ಲಲು ಪ್ರಯತ್ನಿಸಿದನು.

“ಚಂದ್ರಹಾಸ! ಈ ಭೀಮಕಾಯರೊಡನೆ ಕಾದಾಡಲು ಹೇಗೆ ಸಾಧ್ಯ! ಶಕ್ತಿಯನ್ನು ವ್ಯಯಗೊಳಿಸಿ ಯಾವ ಪ್ರಯೋಜನವಿದೆ?”

“ಕದನದಲ್ಲಿ ಹಿಂಜರಿಯುವದು ಒಳ್ಳೆಯದಲ್ಲ; ನಾವು ಹಿಂಜರಿದರೆ, ಒಬ್ಬ ಹೆಂಗಸು ಈ ದುಷ್ಟರ ಹಿಂಸೆಗಳಿಗೆ ಬಲಿಯಾಗುವಳು ಎಂಬುದನ್ನು ನೆನಪಿ ನಲ್ಲಿಡು!” ಎಂದೆನ್ನುತ್ತ, ನೆಲದಲ್ಲಿ ಬಿದ್ದಿರುವ ಕತ್ತಿಯನ್ನು ತೆಗೆದುಕೊಂಡು: “ಗೆಳೆಯಾ! ನೀನು ಶತ್ರುಗಳನ್ನು ಎದುರಿಸು! ಅವರು ಒಂದು ಹೆಜ್ಜೆ ಮುಂದಿಡದಂತೆ ಜಾಗ್ರತನಾಗು!”

ಎಂದು ನುಡಿಯುತ್ತ, ಚಂದ್ರಹಾಸನು ದೂರದಲ್ಲಿ ನಿಂತಿರುವ ಹೆಂಗಸಿನ ಬಳಿಗೆ ಹೋದನು. ಗಾಯದಿಂದ ಬಳಲುತ್ತ ತನ್ನ ಕಡೆಗೆ ಬರುತ್ತಿರುವ ಕುಳಿಂದ ರಾಜಕುಮಾರನನ್ನು ವೀಕ್ಷಿಸಿ, ಆ ತರುಣಿಯ ಹೃದಯದಲ್ಲಿ ಮರು ಕವು ಸಂಜಾತವಾಯಿತು. ತನ್ನನ್ನು ರಕ್ಷಿಸುವದಕ್ಕಾಗಿ ಪ್ರಾಣಾಪಾಯವನ್ನು ಸಹ ಈ ಧೀರನು ಲೆಕ್ಕಿಸಲಿಲ್ಲವೆಂಬುದು ಅವಳ ನೆನಪಿಗೆ ಬರಲು, ಹೃದಯ ದಲ್ಲಿ ಕೃತಜ್ಞತೆಯು ತುಂಬಿ ಬಾಷ್ಪರೂಪದಲ್ಲಿ ಹೊರಸೂಸಲಾರಂಭಿಸಿತು.

“ತಾಯಿ, ನೀವು ವಿಪತ್ತಿನಲ್ಲಿ ಎಂದು ನೆನೆಯುತ್ತೇನೆ; ದುಷ್ಟರ ಕರ ಗಳಿಂದ ನೀವು ವಿಮುಕ್ತರಾಗಲು ಹಾರೈಸುತ್ತಿದ್ದರೆ, ಒಡನೆಯೇ ನನ್ನನ್ನು ಹಿಂಬಾಲಿಸಬೇಕು!” ಎಂದನು ಚಂದ್ರಹಾಸನು ಇರುಳು ತುಂಬಿದ ಆ ರಾತ್ರಿ ಯಲ್ಲಿ.

"ಎಲ್ಲಿಗೆ?-ನೀವು ಯಾರು?" ಎಂದು ಸಂಕೋಚಭರಿತಳಾಗಿ ಪ್ರಶ್ನಿಸಿದಳು ಆ ವನಿತೆಯು.

"ಅದಾವುದನ್ನೂ ಇಲ್ಲಿ ವಿವರಿಸಲು ಸಮಯವಿಲ್ಲ; ನನ್ನನ್ನು ಹಿಂಬಾಲಿಸಿರಿ, ಈ ನೀಚರ ಆಕ್ರಮಗಳಿಂದ ವಿಮೋಚನೆಯನ್ನು ಹೊಂದಲು ಕಾಂಕ್ಷೆಯಿದ್ದರೆ!"

ಹೆಂಗಸು ಮಾತಾಡಲಿಲ್ಲ; ಒಂದು ಬಾರಿ ಚಂದ್ರಹಾಸನ ಮೊಗವನ್ನು ನೋಡಿದಳು. ನಾಚಿಕೆಯಿಂದ ಶಿರವನ್ನು ಬಾಗಿಸಿದಳು ಅವಳು. ಹದಿನಾರು-ಹದಿನೇಳು ವರ್ಷ ಪ್ರಾಯದ ಯುವತಿಯು ಅವಳಾಗಿದ್ದಳು. ಅವಳ ಅಂಗೋಪಾಂಗಗಳಲ್ಲಿ ಸೌಂದರ್ಯವು ಹರಿದಾಡುತ್ತಿರುವದು, ಎಂಬುದನ್ನು ಚಂದ್ರಹಾಸನು ತಿಳಿದುಕೊಂಡನು. ತನಗಿಂತ ಚಿಕ್ಕಪ್ರಾಯದವಳು ಅವಳೆಂಬುದು ತಿಳಿಯಲು, "ತಂಗೀ, ನೀನು ಚಿಂತಾಭರಿತಳಾಗದಿರು. ನನ್ನ ಬೆನ್ನ ಹಿಂದೆ ಬಾ!" ಎಂದನು.

ತರುಣಿಯು ಚಂದ್ರಹಾಸನನ್ನು ಹಿಂಬಾಲಿಸಿದಳು. ನಾಲ್ಕು ಮಂದಿ ಭೀಮಕಾಯರೊಡನೆ ಕಾದುವುದೆಂಪರೆ ಸುಲಭದ ಕೆಲಸವಲ್ಲ; ಆದರೂ ನಾಗರಾಜನು ತನ್ನಲ್ಲಿರುವ ಧೈರ್ಯವನ್ನೆಲ್ಲ ಒಂದುಗೂಡಿಸಿ ಹೋರಾಡುತ್ತಿದ್ದನು. ಚಂದ್ರಹಾಸನು ಆ ತರುಣೀಮಣಿಯನ್ನು ಕರೆದುಕೊಂಡು ಹೋಗಲು, ಆ ದುಷ್ಟರು ಅವನನ್ನು ಹಿಂಬಾಲಿಸಲು ಪ್ರಯತ್ನಿಸಿದಾಗ, ನಾಗರಾಜನು ಅವರನ್ನು ಒಂದು ಹೆಜ್ಜೆ ಕೂಡ ಮುಂದೆ ಬಿಡಲು ಸಮ್ಮತಿಸದೆ, ತನ್ನ ಖಡ್ಗವನ್ನು ಬೀಸುತ್ತ ಅವರನ್ನು ತಡೆದನು. ಅವನು ಏಕಾಂಗಿಯಾಗಿರುವುದನ್ನು ಕಂಡು, ಅವನನ್ನು ವಧಿಸಿ ತಮ್ಮ ಕಾರ್ಯವನ್ನು ಸಾಧಿಸಬೇಕೆಂದು ಯತ್ನಿಸುತ್ತಲಿದ್ದರು ಆಕ್ರಮಿಗಳು.

ಸಮಯವು ಕಳೆದಂತೆ ನಾಗರಾಜನ ಶಕ್ತಿಯು ಕ್ಷಯಿಸತೊಡಗಿತು. ಮೈ ಮೇಲೆ ಹಲಕೆಲವು ಗಾಯಗಳಾದುದರಿಂದ ಶೋಣಿತವು ಹೊರಸೂಸುತ್ತಲಿದ್ದಿತು. ಶತ್ರುಗಳ ಪ್ರಹಾರವನ್ನು ತಡೆದೂ, ಅವರನ್ನು ಎದುರಿಸುವ ಉದ್ಯಮವು ಅವನಿಗೆ ಅತ್ಯಂತ ಪ್ರಯಾಸವಾಗಿ ತೋರತೊಡಗಿತು. ಜೀವವನ್ನೇ ಎಲ್ಲಿ ಬಲಿಯಾಗಿ ಅರ್ಪಿಸಬೇಕಾಗಿ ಬರುವದೋ? ಎಂಬ ಭಯವು ಅವನನ್ನು ಪೀಡಿಸತೊಡಗಿತು.

ಇಷ್ಟರಲ್ಲಿ 'ಚಂದ್ರಹಾಸ ಮಹಾರಾಜರಿಗೆ ಜಯವಾಗಲಿ!' ಎಂಬ ಗರ್ಜನೆಯು ಆ ಕಾಡಿನಲ್ಲಿ ವ್ಯಾಪಿಸಿತು. ಒಂದೇ ಬಾರಿ ನೂರಾರು ಮಂದಿ ಜನರ ಕ್ರಂದನ ನಾದವು ಮೊಳಗಿ, ವಿಪಿನಾಂತರದಲ್ಲಿ ಹರಡಿದ್ದ ಶಾಂತತೆಯ ವಾತಾ

ವರಣವನ್ನು ಭಂಜಿಸಿತು. ಘಾತುಕರು ಭಯವನ್ನು ಹೊಂದಿದರು! ತಮ್ಮನ್ನು ಎದುರಿಸಿದ ತರುಣರು ಯಾರು? ಇಷ್ಟು ಮಂದಿ ಜನರು ಎಲ್ಲಿಂದ ಬಂದರು? ಇವರ ಕರಗಳಲ್ಲಿ ಸಿಲುಕಿದರೆ ತಮ್ಮ ಗತಿಯೇನು? ಇತ್ಯಾದಿ ವಿಚಾರಗಳು ಅವರ ಮನಸ್ಸುಗಳನ್ನು ಅಲ್ಲೋಲ-ಕಲ್ಲೋಲಗೊಳಿಸಿದವು.

ನೂರಾರು ಜನರ ಮಾತುಗಳು ಕೇಳಿಬಂದುವು; ಖಡ್ಗಗಳ ಸಪ್ಪಳಗಳು ಗಗನದಲ್ಲಿ ವ್ಯಾಪಿಸಿದುವು. ಘಾತುಕರ ಶೋಕಾಲಾಪವು ಈ ಭಟರ ಜಯ ಘೋಷಗಳ ಮಧ್ಯದಲ್ಲಿ ಮೀಲನವನ್ನು ಹೊಂದಿತು.

ಚಂದ್ರಹಾಸನನ್ನು ಹುಡುಕುತ್ತ ಬಂದಿದ್ದ ಅವನ ದಳದ ಭಟರು ಘಾತುಕರನ್ನು ಬಂಧಿಸಿ, ಗಾಯಹೊಂದಿ ಬಿದ್ದಿರುವ ನಾಗರಾಜನನ್ನು ಎತ್ತಿ ಕೊಂಡು ತಮ್ಮ ಪಾಳಯಕ್ಕೆ ತೆರಳಿದರು

## ಮೃತ್ಯುಶಯ್ಯೆಯಲ್ಲಿ.

—xox—

ಗಾಢಾಂಧಕಾರದಿಂದ ಆ ರಾತ್ರಿ ಒಂದು ಸಪ್ಪಳವು ಹೊರಟಿತು; ಅದು ನಾಗ ರಾಜನ ಕಂಠಸ್ವರವು. ತನ್ನ ಮಿತ್ರನ ಹಾಸಿಗೆಯ ಸಮೀಪದಲ್ಲಿ ಕುಳಿತು, ಕುಳಿಂದ ಕುಮಾರನ ಮೊಗವನ್ನು ನಾಗರಾಜನು ನೋಡುತ್ತಲಿದ್ದನು. ಚಂದ್ರಹಾಸನು ಬೋಧರಹಿತನಾಗಿ ಹಾಸಿಗೆಯಲ್ಲಿ ಬಿದ್ದಿದ್ದನು. ಭುಜದ ಮೇಲಿರುವ ಪ್ರಬಲವಾದ ಗಾಯದಿಂದ ನೆತ್ತರು ಹೊರಸೂಸುತ್ತ, ಅವನು ಧರಿಸಿರುವ ವಸ್ತ್ರಗಳಿಗೆ ಕೆಂಬಣ್ಣವನ್ನು ಬಳಿಯುತ್ತಲಿರುವುದು. ಆ ಗಾಯವು ಕೆಲವು ರಕ್ತನಾಳಗಳನ್ನು ಕತ್ತರಿಸಿದ್ದುದರಿಂದ ಹೆಚ್ಚಾದ ರಕ್ತಸ್ರಾವವುಂಟಾಗಿ, ಚಂದ್ರಹಾಸನ ಶರೀರವು ಅತ್ಯಂತ ಬಲಹೀನತೆಯನ್ನು ಹೊಂದಿದ್ದಿತು. ಆ ಮೊಗದಲ್ಲಿ ಮುತ್ತಿನಂತೆ ಕಂಗೊಳಿಸುತ್ತಿರುವ ಬೆವರು ಹನಿಗಳು ಅಲ್ಲಲ್ಲಿ ಬಂದು ಸೇರಿ ನಿಂತಿದ್ದುವು. ನಾಸಿಕ ರಂಧ್ರದಿಂದ ಬಿಸಿಯಾದ ಶ್ವಾಸಗಳು ಹೊರ ಬೀಳುತ್ತಲಿದ್ದುವು.

ನಾಗರಾಜನು ವ್ಯಾಕುಲಚಿತ್ತನಾಗಿ ತನ್ನ ಗೆಳೆಯನ ಮೊಗವನ್ನು ನೋಡಿದನು. ನಾಗರಾಜನಿಗೂ ಗಾಯಗಳಾಗಿದ್ದುವು; ಆದರೆ ಚಂದ್ರ ಹಾಸನಿಗೆ ಸಂಭವಿಸಿದಂತೆ ಪ್ರಾಣಾಪಾಯಕಾರಕವಾದ ಆಘಾತಗಳು ನಾಗ ರಾಜನನ್ನು ಸ್ಪರ್ಶಿಸಿರಲಿಲ್ಲ. ನಾಗರಾಜನ ಮನಸ್ಸು ಚಂದ್ರಹಾಸನ ವಿಷಮಸ್ಥಿತಿಯಿಂದ ಅತ್ಯಂತ ಚಿಂತಾಮಗ್ನವಾಗಿದ್ದಿತು. ಕುಳಿಂದದ ಭಾಗ್ಯ ತಾರೆಯಂತೆ ಪ್ರಕಾಶಿಸುತ್ತಲಿರುವ ಕುಳಿಂದರಾಜನಂದನನಿಗೆ ವಿಧಿಯು ವಿಕಟ

ವರ್ತನೆಯ ಪರಿಣಾಮವಾಗಿ ಏನಾದರೂ ಪ್ರಮಾದವು ಸಂಭವಿಸಿದರೆ, ವೃದ್ಧನಾದ ಕುಳಿಂದಕನು ಆ ದುಃಖವನ್ನು ಹೇಗೆ ಸಹಿಸುವನು? ಎಂಬುವ ವಿಚಾರವು ಆಗಾಗ ನಾಗರಾಜನ ಮೆದುಳನ್ನು ಪ್ರವೇಶಿಸಿ, ನೋವನ್ನುಂಟು ಮಾಡುತ್ತಲಿದ್ದಿತು. ಅವನು ಒಂದು ಬಾರಿ ಚಂದ್ರಹಾಸನ ಮೊಗವನ್ನೂ ಇನ್ನೊಂದುಬಾರಿ ಗೂಡಾರದಲ್ಲಿ ಉರಿಯುತ್ತಿರುವ ದೀಪವನ್ನೂ ನೋಡುತ್ತ ಮೌನವನ್ನವಲಂಬಿಸಿ ಕುಳಿತನು. ಅವನಿಗೆ ಒಂದೊಂದು ನಿಮಿಷವು ಒಂದೊಂದು ಯುಗವಾಗಿ ತೋರುತ್ತಿದ್ದಿತು.

ಗೂಡಾರದೊಳಗೆ ಒಬ್ಬ ತರುಣಿಯು ಪ್ರವೇಶಿಸಿದಳು; ನಾಗರಾಜನು ಅವಳನ್ನು ನೋಡಿದನು. ಕಾಡಿನಲ್ಲಿ ಕತ್ತಲೆಯು ಹಬ್ಬಿದ್ದರಿಂದ ಅವಳ ರೂಪವನ್ನು ಅವನು ನೋಡಿರಲಿಲ್ಲ. ಈಗ ಅವನು ಅವಳು ಅದ್ವಿತೀಯ ರೂಪ ರಾಶಿಯಿಂದ ಬೆಳಗುವ ಸುಂದರಿಯೆಂಬುದನ್ನು ತಿಳಿದುಕೊಂಡನು. ಇಷ್ಟು ಲಾವಣ್ಯದಿಂದ ಕೂಡಿದವಳು ಓರ್ವ ಸಾಮಾನ್ಯ ವನಿತೆಯಾಗಿರದೆ, ಯಾವದೋ ಒಂದು ದೇಶದ ರಾಜಕುಮಾರಿಯಾಗಿರಬೇಕೆಂದು ಅವನು ಊಹಿಸಿದನು.

"ತಾವು ಈ ಅಬಲೆಯ ಪಾಲನೆಗಾಗಿ ಇಷ್ಟು ತೊಂದರೆಪಟ್ಟಿರುವುದನ್ನು ಹೇಗೆ ತಾನೆ ಮರೆಯಲಿ? ಆ ಪುಣ್ಯಪುರುಷರ ವಿಪತ್ತುಗಳಿಗೆ ಕಾರಣಭೂತಳು ನಾನೆಂಬುದನ್ನು ನೆನೆಯುವಾಗ ಬಹು ದುಃಖವಾಗುತ್ತಿರುವುದು" ಎಂದು ಕಂಬನಿ ಸುರಿಸುತ್ತ ಅವಳು ನುಡಿದಳು.

ಅವಳ ನೇತ್ರಗಳಲ್ಲಿ ಹೊರಸೂಸುತ್ತಿರುವ ಕಂಬನಿಗಳ ಪ್ರವಾಹವನ್ನು ಕಂಡು ನಾಗರಾಜನ ಎದೆಯು ಕರಗಿತು. ಅವಳ ಮೃದುವಾದ ಸ್ವಭಾವವು ಅವನಲ್ಲಿ ಮರುಕವು ಸಂಜಾತವಾಗುವಂತೆ ಮಾಡಿತು. ಅವನು ಹೇಳಿದನು: "ತಂಗೀ, ನೀನು ಚಿಂತಾಭರಿತಳಾಗದಿರು. ಘಾತುಕರ ಕರಗಳಿಂದ ನೀನು ಮುಕ್ತಳಾದುದರಿಂದ ನಾವು ಸಂತೋಷಿಸುತ್ತೇವೆ. ಮನುಷ್ಯನ ಬದುಕು ತನ್ನ ಸಹೋದರ ಮಾನವರ ಸಂಕಟಗಳ ನಿವಾರಣೆಗಾಗಿಯಲ್ಲವೇ ಇರುವುದು? ಆ ಉದ್ಯಮವನ್ನು ನೆರವೇರಿಸಿದುದರಿಂದ ನಾವು ನಮ್ಮ ಉದ್ದೇಶಗಳನ್ನು ಕುರಿತು ಪ್ರಯತ್ನಿಸಿದೆವೆಂಬ ಕೃತಾರ್ಥತೆಯನ್ನು ಹೊಂದುತ್ತೇವೆ. ನಮ್ಮನ್ನಿಲ್ಲಿ ಹೊಗಳಬೇಕಾದ ಅವಶ್ಯವಿಲ್ಲ ನಮ್ಮ ಪೌರುಷವನ್ನು ಮಾನಿನಿಯರನ್ನು ಸಲುಹುವುದಕ್ಕಾಗಿ ವ್ಯಯಗೊಳಿಸುವದು ನಮ್ಮ ಕರ್ತವ್ಯವು! ಅದಕ್ಕಾಗಿ ಪ್ರಶಂಸಿಸುವದು ಅನುಚಿತವು!" ಎಂದು ತನ್ನ ಸಾಧಾರಣ ಪದ್ಧತಿಯಂತೆ ಉದ್ದವಾದ ಒಂದು ವ್ಯಾಖ್ಯಾನವನ್ನು ನೀಡಲು ನಾಗರಾಜನು ಪ್ರಾರಂಭಿಸಿದನು.

"ತಮ್ಮ ವಿನಯವನ್ನು ತಾವು ಪ್ರಕಟಿಸಿದಿರಿ; ಅದರಂತೆಯೇ ನನ್ನ ಮಾನವನ್ನು ಕಾಯ್ದವರಿಗೆ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಅರ್ಪಿಸುವದು ನನ್ನ ಕರ್ತವ್ಯವಲ್ಲವೆ?" ಎಂದಳು ಆ ಹೆಂಗಸು.

"ನೀನು ಆ ಭಾರವನ್ನು ನನ್ನ ತಲೆಯ ಮೇಲೆ ಹೊರಿಸಬೇಡ" ಎಂದು ನುಡಿಯುತ್ತ, ನಾಗರಾಜನು ಈ ತರುಣೀಮಣಿಯು ಯಾರೆಂಬುದನ್ನು ತಿಳಿಯಲು ಕುತೂಹಲವುಳ್ಳವನಾಗಿ ಕೇಳಿದನು:—"ನಾವು ಘಾತುಕರಿಂದ ರಕ್ಷಿಸಿದ ಮಾನಿನಿಯು ಯಾರೆಂಬುದನ್ನು ತಿಳಿಯಬಹುದೇ?"

ನಾಗರಾಜನ ಮಾತುಗಳನ್ನು ಆಲಿಸಿ ಅವಳ ಹೃದಯದಲ್ಲಿ ತುಂಬಿದ್ದ ವ್ಯಥೆಯು ದ್ವಿಗುಣೀಭವಿಸಿತು; ಅವಳು ಸ್ವಲ್ಪ ಆಲೋಚನಾಮಗ್ನಳಾಗಿ ನುಡಿದಳು: "ಕುಂತಳವೆಂಬ ದೇಶವನ್ನು ತಾವು ಬಲ್ಲಿರಾ?"

"ಧಾರಾಳವಾಗಿ!" ಎಂದು ಆಶ್ಚರ್ಯದೊಡನೆ ನಾಗರಾಜನು: "ನಾವು ಕುಂತಳ ರಾಜಧಾನಿಯ ಕಡೆಗೇ ಹೊರಟಿರುವೆವು."

"ಹಾಗಾದರೆ ತಾವು ಯಾರು?"

"ಕುಳಿಂದ ಪ್ರಾಂತ್ಯವನ್ನು ಕುರಿತು ತಂಗೀ, ನೀನು ಒಂದುವೇಳೆ ಕೇಳಿರಬಹುದು; ನಾವು ಆ ಪ್ರಾಂತ್ಯದವರಾಗಿರುವೆವು. ಕುಂತಳೇಂದ್ರನ ಆಜ್ಞೆಯಂತೆ ಕುಂತಳ ಸಾಮ್ರಾಜ್ಯವನ್ನು ಆಕ್ರಮಿಸುತ್ತಿರುವ ಲಾಟರನ್ನು ಎದುರಿಸುವದಕ್ಕಾಗಿ ಹೊರಟಿರುವೆವು ನಾವು!" ಎಂದು ನಾಗರಾಜನು ತನ್ನ ಬೆರಳನ್ನು ಹಾಸಿಗೆಯಲ್ಲಿ ಮಲಗಿರುವ ಚಂದ್ರಹಾಸನ ವದನದೆಡೆಗೆ ತೋರಿಸುತ್ತ ನುಡಿದನು: "ಈತನು ಕುಳಿಂದದ ಭಾವೀಮಾಂಡಲಿಕನಾಗತಕ್ಕವನು; ತನ್ನ ತಂದೆಯ ಆಜ್ಞೆಯಂತೆ ಸೇನೆಯ ಮುಂದಾಳುತನವನ್ನು ವಹಿಸಿಕೊಂಡು ನಮ್ಮೊಡನೆ ಬಂದಿರುವನು."

"ಇಷ್ಟು ಪ್ರಾಮುಖ್ಯ ವ್ಯಕ್ತಿಯ ಅಪಾಯಕ್ಕೆ ಕಾರಣಭೂತಳು ನಾನೆಂದು ನೆನೆಯುವಾಗ" ಎಂದು ತನ್ನ ಸೀರೆಯ ಸೆರಗಿನಿಂದ ಕಂಬನೀಪ್ರವಾಹವನ್ನು ಒರೆಸುತ್ತ ಅವಳು ನುಡಿದಳು: "ನನ್ನಂಥ ಪಾಪಿನಿಯು ಈ ಜಗತ್ತಿನಲ್ಲಿ ಬೇರೊಬ್ಬಳಿಲ್ಲವೆಂದು ತೋರುತ್ತದೆ."

"ತಂಗೀ, ಅದನ್ನು ಕುರಿತು ಚಿಂತಿಸಿ ಪ್ರಯೋಜನವೇನು? ವಿಪತ್ತುಗಳು ಮನುಷ್ಯರಿಗಲ್ಲದೆ ಇನ್ನಾರಿಗೆ ಬರುವವು? ಅವುಗಳಿಗೆ ಎದೆಯೊಡ್ಡುವದೇ ಅವನ ಪೌರುಷವು! ಕಳೆದ ಸಂಭವಗಳನ್ನು ನೆನೆದು ನಿನ್ನ ಎದೆಯನ್ನು ನೋವು ಮಾಡಿಕೊಳ್ಳುವದು ಅನುಚಿತವು! ನೀನಾರೆಂಬುದನ್ನು ಉಸುರಬಾರದೇ?"

"ಕುಂತಳಾಧಿಪನ ಮಗಳು! ಹತಭಾಗಿನಿಯಾದ ಚಂಪೆಯೇ ನಾನು!"

ತರುಣಿಯ ಈ ಮಾತುಗಳನ್ನು ಕೇಳಿ ನಾಗರಾಜನು ಆಶ್ಚರ್ಯದಿಂದ ದಿಙ್ಮೂಢನಾಗಿ ಹೋದನು. ಕುಂತಳ ರಾಜಕುಮಾರಿಯನ್ನು ತಾವು ರಕ್ಷಿಸಿದುದಾಗಿದೆ ಎಂಬುದನ್ನು ತಿಳಿಯಲು ಅವನು ಮಾತನಾಡಲಿಲ್ಲ. ಕುಂತಳದ ಭಾವೀಚಕ್ರವರ್ತಿನಿಯು ತನ್ನ ಮುಂದೆ ನಿಂದಿರುವಳು! ಯಾವ ರಾಜಕುಮಾರಿಯ ವರ್ಣನೆಯು ನಾಡಿನಲ್ಲೆಲ್ಲ ಪಸರಿಸಿರುವದೋ, ರಸಿಕರು ಯಾವ ಸೌಂದರ್ಯಮೂರ್ತಿಯ ದರ್ಶನಕ್ಕಾಗಿ ಕುದಿಯುತ್ತಿರುವರೋ ಆ ಚಂಪಕಮಾಲಿನಿಯು ತನ್ನ ಮುಂದೆ ನಿಂತಿರುವಳೆಂಬುದನ್ನು ತಿಳಿಯಲು, ನಾಗರಾಜನು ಆಶ್ಚರ್ಯವಿಹ್ವಲನಾಗಿ ಹೋದನು. ಅವನ ಮುಖಮಂಡಲದಿಂದ ಮಾತುಗಳು ಹೊರಸೂಸಲಿಲ್ಲ; ಆತನು ಚಂಪೆಯನ್ನು ನೋಡುತ್ತ ನಿಂತನು.

"ರಾಜಕುಮಾರಿ! ನೀನು ಈ ದುಷ್ಟರ ಬಲೆಯಲ್ಲಿ ಹೇಗೆ ಸಿಕ್ಕಿದೆ?"

"ನಾನು ರಾಜಗೃಹದ ಉಪವನದಲ್ಲಿ ನಿನ್ನೆಯ ದಿನ ಸಾಯಂಕಾಲ ವಿಹಾರಾರ್ಥವಾಗಿ ಸಂಚರಿಸುತ್ತಿರುವಾಗ, ಈ ನೀಚರು ಆಕಸ್ಮಿಕವಾಗಿ ಅಲ್ಲಿಗೆ ಬಂದು ನನ್ನನ್ನು ಬಂಧಿಸಿಕೊಂಡು ತೆರಳಿದರು. ಅವರು ನನ್ನ ಬಾಯಿಗೆ ವಸ್ತ್ರಗಳನ್ನು ತುಂಬಿ ಕಣ್ಣಿಗೆ ವಸ್ತ್ರವನ್ನು ಕಟ್ಟಿದುದರಿಂದ, ಅವರು ನನ್ನನ್ನು ಒಯ್ಯುವದೆಲ್ಲಿಗೆ ಎಂಬುದು ತಿಳಿಯಲಿಲ್ಲ. ಈ ಕಾಡಿಗೆ ತಲುಪಿದ ನಂತರ ಅವರು ನನ್ನ ಬಾಯಿಗೆ ತುಂಬಿದ್ದ ವಸ್ತ್ರವನ್ನೂ, ನನ್ನ ಕಣ್ಣಿಗೆ ಕಟ್ಟಿದ್ದ ಬಟ್ಟೆಯನ್ನೂ ತೆಗೆದರು. ನಾನು ಅವರನ್ನು ಹಿಂಬಾಲಿಸಬೇಕೆಂದು ಬಲಾತ್ಕಾರಪಡಿಸತೊಡಗಿದರು. ನಾನು ಭಯಪೀಡಿತಳಾಗಿ ಚೀರಿದೆನು. ಆ ಸಂದರ್ಭದಲ್ಲಿ ತಾವು ಬಂದು ನನ್ನನ್ನು ರಕ್ಷಿಸಿದಿರಿ."

"ರಾಜಕುಮಾರಿ, ನೀನು ಭಯಪಡಬೇಕಾದುದಿಲ್ಲ; ನಾವೂ ಕುಂತಳ ರಾಜಧಾನಿಗೆ ತೆರಳತಕ್ಕವರೆ! ನಿನ್ನನ್ನು ಸುರಕ್ಷಿತವಾಗಿ ಅರಮನೆಗೆ ತಲುಪಿಸುವೆವು."

"ವಂದನೆಗಳು! ನನ್ನ ರಕ್ಷಣೆಗಾಗಿ ಮೃತ್ಯುವನ್ನು ಎದುರಿಸಲೂ ತಾವು ಹಿಂಜರಿಯಲಿಲ್ಲ ಮಹಾನುಭಾವರು!" ಇವು ಚಂದ್ರಹಾಸನನ್ನು ನೋಡುತ್ತ ಚಂಪಕಮಾಲಿನಿಯು ಆಡಿದ ಮಾತುಗಳಾಗಿದ್ದವು.

ಪ್ರಜ್ಞಾರಹಿತನಾಗಿ ಬಿದ್ದಿದ್ದ ಚಂದ್ರಹಾಸನು ಎಚ್ಚತ್ತು, ಮುಚ್ಚಿದ್ದ ತನ್ನ ರೆಪ್ಪೆಗಳನ್ನು ತೆರೆದನು. ಅವನ ಕಣ್ಣುಗಳ ಮುಂದೆ ಚಂಪೆಯ ಸುಂದರಾಕೃತಿಯು ನಿಂತಿದ್ದಿತು. ಎರಡು ನಿಮಿಷಗಳ ವರೆಗೆ ಆ ಮೋಹನ ರೂಪವನ್ನೇ ಆ ವೀರನು ವೀಕ್ಷಿಸಿದನು. ಯಾತನಾ ಪರಿಪೂರ್ಣವಾದ ಅವನ

ವದನಮಂಡಲದಲ್ಲಿ ಒಂದು ಮಂದಹಾಸವು ನರ್ತಿಸಿತು. ಕೃತಾರ್ಥತೆಯು ಮತ್ತು ಸಂತೃಪ್ತಿಯು ಭಾವಗಳು ಆ ಮುಖಪದ್ಮದಲ್ಲಿ ಮಿಂಚಿನಂತೆ ಪ್ರಕಾಶಿಸಿ ಮತ್ತೆ ಮಾಯವಾದುವು. ಅವನು ಅತ್ಯಂತ ಕ್ಷೀಣಸ್ವರದಲ್ಲಿ ಹೇಳಿದನು: "ಗೆಳೆಯ! ಬಹು ದಾಹ, ನೀರು!" ಎಂಬುದಾಗಿ.

ಗೆಳೆಯನು ತೀವ್ರವಾದ ಪಿಪಾಸೆಯಿಂದ ನರಳುತ್ತಿರುವುದನ್ನು ಕಂಡು ನಾಗರಾಜನು ಒಂದಿಷ್ಟು ನೀರು ತಂದುಕೊಡುವುದಕ್ಕಾಗಿ ಗೂಡಾರದಿಂದ ಹೊರಬಿದ್ದನು. ತಾನೇನು ಮಾಡಬೇಕೆಂಬುದನ್ನು ತಿಳಿಯದೆ, ಅಪರಿಚಿತ ವ್ಯಕ್ತಿಗಳ ನಡುವೆ ತಾನಿರುವೆನೆಂಬದನ್ನು ನೆನೆದು, ಅಬಲತಾ ಭಾವಪರಿಪೂರ್ಣಳಾದ ಚಂಪೆಯು ಲಜ್ಜೆಯನ್ನು ಹೊಂದಿ, ಶಿರವನ್ನು ಬಾಗಿಸಿ ನಿಂತಳು. ಲಜ್ಜೆ, ಸಂತೃಪ್ತಿ ಇತ್ಯಾದಿ ವಿವಿಧ ವಿಚಾರಗಳಿಂದ ಅವಳ ಸುಂದರವಾದ ಕಪೋಲಗಳು ಅರುಣವರ್ಣವನ್ನು ತಾಳಿದುವು. ರಾಜಗೃಹದಲ್ಲಿ ಹುಟ್ಟಿ ಬೆಳೆದವಳಾದ ಅವಳಿಗೆ ಸಾಮಾನ್ಯ ಜನರನ್ನೂ ಅನ್ಯ ಪುರುಷರನ್ನೂ ಕಂಡು ಮಾತಾಡುವ ಪರಿಚಯವಿರಲಿಲ್ಲ. ಆದರೂ ನಾಗರಾಜನ ನುಡಿಗಳಿಂದ ಆ ತರುಣರು ಅತ್ಯಂತ ಗೌರವಶಾಲಿಗಳೆಂದೂ, ಅಭಿಮಾನಿಗಳೆಂದೂ ಊಹಿಸಿದಳು.

ಚಂದ್ರಹಾಸನು ಅವಳ ವದನಮಂಡಲವನ್ನು ನೋಡುತ್ತಾ ಕನಸನ್ನು ಕಂಡವನಂತೆ, "ನೀನು ಯಾರು?" ಎಂದು ಪ್ರಶ್ನಿಸಿದನು. ಅವನ ಪ್ರಶ್ನೆಗೆ ಯಾವ ಪ್ರತ್ಯುತ್ತರವನ್ನು ನೀಡಬೇಕೆಂಬುದು ಚಂಪೆಗೆ ತಿಳಿಯಲಿಲ್ಲ. ಅವಳು ಒಂದು ಶಿಲಾಪ್ರತಿಮೆಯ ಹಾಗೆ ನಿಂತಳು. ಪುನಃ ಚಂದ್ರಹಾಸನು ಪ್ರಶ್ನಿಸಿದನು: "ನೀನು ಯಾರು?" ಎಂಬುದಾಗಿ.

"ನಾನು ಚಂಪಕಮಾಲಿನಿ!" ಎಂದಳು ಚಂಪೆ ತೊದಲು ನುಡಿಗಳಲ್ಲಿ.

"ಅಲ್ಲ! ಅಲ್ಲ! ನೀನು ಅಪ್ಸರೆ!" ಎಂದನು ಹುಚ್ಚನಂತೆ ಚಂದ್ರಹಾಸನು. ತನ್ನ ಗಾಯಗಳ ನೋವಿನಿಂದುಂಟಾದ ಮತಿಭ್ರಮೆಯಿಂದ ಈ ರೀತಿ ಮಾತಾಡುತ್ತಿರುವನೆಂದು ಅವಳು ಊಹಿಸಿದಳು. ಚಂದ್ರಹಾಸನ ಸಂಕಟಗಳನ್ನು ನೋಡಿ ಅತ್ಯಂತ ಪರಿತಪಿಸಿದಳು ಅವನು ಈ ರೀತಿ ನರಳಲು ಕಾರಣಭೂತಳು ತಾನೆಂದು ತಿಳಿದು, ತನ್ನನ್ನು ತಾನೇ ಶಪಿಸಿಕೊಂಡಳು. ಚಂದ್ರಹಾಸನು ಉನ್ಮತ್ತನಂತೆ ಕೆಲವು ಅಸಂಬದ್ಧ ನುಡಿಗಳನ್ನಾಡುತ್ತ ತಡವರಿಸುತ್ತಲಿದ್ದನು. "ಹೆದರಿಕೆಯಾಗುತ್ತಿದೆ; ಭಯಂಕರ ಆಕಾರದ ರಾಕ್ಷಸನು ನನ್ನನ್ನು ಕೊಲ್ಲಲು ಬರುತ್ತಿರುವನು." ಎಂದು ಅವನು ಆಗಾಗ ನುಡಿಯುತ್ತಲಿದ್ದನು. ಈ ನುಡಿಗಳ ತಾತ್ಪರ್ಯವು ರಾಜಕುಮಾರಿಗೆ ತಿಳಿಯಲಿಲ್ಲ. ತನ್ನ ಮನದಲ್ಲಿಯೇ ಚಿಂತಿಸುತ್ತ ಅವಳು ಆ ಗುಡಾರದ ಒಂದು ಮೂಲೆಯಲ್ಲಿ

ಉಪವಿಷ್ಟಳಾದಳು.

ನಾಗರಾಜನು ಒಂದು ಪಾತ್ರೆಯಲ್ಲಿ ಸಿಹಿಯಾದ ನೀರನ್ನು ತೆಗೆದು ಕೊಂಡು ಬಂದನು; ನೀರನ್ನು ಕುಡಿಯುವುದಕ್ಕಾಗಿ ಚಂದ್ರಹಾಸನು ತನ್ನ ಹಾಸಿಗೆಯಿಂದ ಏಳಲು ಪ್ರಯತ್ನಿಸಿದನು. ರಕ್ತಸ್ರಾವದಿಂದ ಹೆಚ್ಚಿನ ನಿತ್ರಾಣ ವನ್ನು ಅವನು ಪಡೆದುದರಿಂದ ಅವನಿಗೆ ಅದು ಸಾಧ್ಯವಾಗಲಿಲ್ಲ. ನಾಗರಾಜನು ಅವನನ್ನು ಎತ್ತಿ ತನ್ನ ಎದೆಗೆ ಒರಗಿಸಿಕೊಂಡನು. ಚಂದ್ರಹಾಸನು ಎಡಗೈ ಯಲ್ಲಿ ನೀರಿನ ಪಾತ್ರೆಯನ್ನು ಹಿಡಿದುಕೊಂಡು, ಬತ್ತಿಹೋದ ತನ್ನ ನಾಲಿಗೆ ಯನ್ನು ಒದ್ದೆ ಮಾಡತೊಡಗಿದನು. ಎರಡು ಮೂರು ಗುಟುಕು ನೀರನ್ನು ಗಂಟಲ ಕೆಳಗಿಳಿಸಿದ ನಂತರ ನೀರಿನ ಪಾತ್ರೆಯನ್ನು ಒಂದು ಬದಿಗಿಟ್ಟು, ದೀನ ಸ್ವರದಲ್ಲಿ "ಅಮ್ಮಾ" ಎಂದು ನುಡಿದನು. ಆಗಲಿನ ಅವನಸ್ಥಿತಿಯು ಅತ್ಯಂತ ಕರುಣಾಜನಕವಾಗಿದ್ದಿತು. ಶರೀರವು ಬೆಂಕಿಯಂತೆ ಸುಡುತ್ತಲಿದ್ದಿತು. ಕಣ್ಣುಗಳು ಬತ್ತಿಹೋಗಿದ್ದವು; ಮುಖವು ಮ್ಲಾನಭಾವವನ್ನು ತಳೆದಿತ್ತು.

"ಗೆಳೆಯ ನಾಗರಾಜ!" ಎಂದು ತನ್ನ ಮಿತ್ರನ ಕಡೆಗೆ ತಿರುಗಿ ದಿನವಾಣಿ ಯಲ್ಲಿ ಚಂದ್ರಹಾಸನು ನುಡಿದನು: "ಈಗ ನಾನೆಲ್ಲಿರುವೆನು?"

"ಚಂದ್ರಹಾಸ! ಮಾತಾಡಬೇಡ, ಆಯಾಸದಿಂದ ನಿನ್ನ ದೇಹವು ಇನ್ನಷ್ಟು ಬಳಲಬಹುದು."

"ಇಲ್ಲ, ಆ ರಾಕ್ಷಸನನ್ನು ನೋಡುವಾಗ ನನಗೆ ಭಯವಾಗುತ್ತಿರು ವುದು!" ಎಂದನು ಭಯದಿಂದ ಕಂಪಿಸುತ್ತ ಚಂದ್ರಹಾಸನು.

"ಯಾವ ರಾಕ್ಷಸನು?"

"ಅಯ್ಯೋ! ನೀನು ಕಾಣುವುದಿಲ್ಲವೆ? ಒಂದು ಖಡ್ಗವನ್ನು ಹಿರಿಯುತ್ತ ಆ ಪಿಶಾಚವು ನನ ಬಳಿಗೆ ಬರುತ್ತಿದೆ! ಆದರೆ—"

"ಆದರೇನು?"

"ಒಬ್ಬಳು ದೇವಕನ್ಯೆ! ನನ್ನನ್ನು ರಕ್ಷಿಸಲು ಸ್ವರ್ಗದಿಂದ ಹೊರಟು ಬಂದಿರುವಳು. ಆದುದರಿಂದ ಭಯವಿಲ್ಲ. ಆ ರಾಕ್ಷಸನ ಪರಾಕ್ರಮವು ಅವಳ ದಿವ್ಯ ಚೈತನ್ಯದ ಮುಂದೆ ವ್ಯರ್ಥವಾಗುತ್ತಲಿದೆ. ಅವನು ನನ್ನನ್ನು ಪ್ರಹರಿ ಸಲು ಯತ್ನಿಸುತ್ತಿರುವಾಗ ಅವಳು ಬಂದು ನನ್ನನ್ನು ಅಪ್ಪಿಕೊಂಡು ಆ ರಾಕ್ಷ ಸನ ತಾಡನಗಳು ನನ್ನ ಮೇಲೆ ಬೀಳದಂತೆ ರಕ್ಷಿಸುತ್ತಿರುವಳು."

"ಗೆಳೆಯಾ! ನಾನು ಅವುಗಳನ್ನೇನೂ ಕಾಣುವುದಿಲ್ಲ. ನೀನು ಹುಚ್ಚ ನಂತೆ ಮಾತಾಡಬೇಡ; ಮಲಗಿ ವಿಶ್ರಾಂತಿಯನ್ನು ಅನುಭವಿಸು; ಅಂದರೆ ನಿನ್ನ ಶರೀರದ ನಿಃಶಕ್ತತೆಯು ತಾನಾಗಿಯೇ ತೆರಳುವುದು."

ಚಂದ್ರಹಾಸನು ಐದು ನಿಮಿಷಗಳವರೆಗೆ ಮಾತಾಡಲಿಲ್ಲ; ಕಣ್ಣುರೆಪ್ಪೆಗಳನ್ನು ಮುಚ್ಚಿ ನಿದ್ರಿಸಲು ಪ್ರಯತ್ನಿಸಿದನು; ಆದರೆ ಸಹನಾತೀತವಾದ ಯಾತನೆಗಳನ್ನು ಅನುಭವಿಸುತ್ತಲಿರುವ ಮನುಷ್ಯನು ಹೇಗೆ ತಾನೆ ನಿದ್ರಿಸುವನು? ಅವನು ಪುನಃ ಕಣ್ದೆರೆದು ನೋಡಿದನು. ಆಗ ಗೋಚರವಾದುದು ಸೌಂದರ್ಯಪರಿಪೂರ್ಣವಾದ ಚಂಪೆಯ ರೂಪವಾಗಿದ್ದಿತು. ಆ ಮೊಗವನ್ನೇ ಕೆಲವು ನಿಮಿಷಗಳ ವರೆಗೆ ನೋಡುತ್ತ ಅವನು ಹೀಗೆ ಹೇಳಿದನು: "ಇವಳಲ್ಲ ಆ ದೇವತೆ! ಇಷ್ಟು ಸೌಂದರ್ಯವು ಅವಳಲ್ಲಿಲ್ಲ; ಆದರೆ ಅವಳ ಹೃದಯವು ಪ್ರೇಮದಿಂದ ತುಂಬಿದೆ. ವಿಶಾಲವಾದ ಆ ಕಣ್ಣುಗಳು ಚೈತನ್ಯದ ಕಿಡಿಗಳನ್ನು ಸೂಸುತ್ತಿರುವವು ಸಾಧಾರಣ ಹೆಂಗಸರ ಮೊಗಲ್ಲಿ ಕಂಡು ಬಾರದ ಜ್ಯೋತಿಯೊಂದು ಅವಳ ಮೊಗದಲ್ಲಿ ಸದಾ ತಾಂಡವವಾಡುತ್ತಿರುವುದು! ಕೃಶವಾದ, ಆದರೆ ನೀಳವಾದ ತೋಳುಗಳು! ಹಣೆಯ ನಡುವ ಕುಂಕುಮದ ತಿಲಕವೊಂದು ರಾಜಿಸುತ್ತಿರುವುದು; ಸ್ವರವು ಕೋಗಿಲೆಯಂತಿಹುದು; ಅವಳು ಬಂದು ನನಗೆ ಹೆದರಬೇಡವೆಂದು ಧೈರ್ಯವನ್ನು ನೀಡುತ್ತಿರುವಳು!"

ಚಂದ್ರಹಾಸನ ಮಾತುಗಳನ್ನು ಕೇಳಿ ಚಂಪೆಯು ಆಶ್ಚರ್ಯಭರಿತಳಾದಳು; ತನ್ನಂತರಂಗದ ಭಾವನೆಯನ್ನು ಗೋಪ್ಯಪಡಿಸಲು ಅವಳು ಅಶಕ್ತಳಾದಳು. ಅವಳು:—"ಇದು ನನ್ನ ಗೆಳತಿಯಾದ ಅಮಾತ್ಯನಂದಿನಿಯ ವರ್ಣನೆಯಾಗಿದೆ" ಎಂದು ನುಡಿದಳು.

ಚಂದ್ರಹಾಸನು ಮಾತಾಡಲಿಲ್ಲ; ನಾಗರಾಜನು ಅದ್ಭುತಪರವಶನಾಗಿ ಹೋದನು. ಚಂದ್ರಹಾಸನು ಸ್ಮೃತಿವಿಭ್ರಮವನ್ನು ಹೊಂದಿ ಆಡುತ್ತಿರುವ ಮಾತುಗಳು ಅವನ ಜೀವನದ ಭವಿಷ್ಯವನ್ನು ಸೂಚಿಸತಕ್ಕವುಗಳಾಗಿರುತ್ತವೆ, ಎಂಬ ಶಂಕೆಯು ನಾಗರಾಜನ ಮನಸ್ಸಿನಲ್ಲಿ ಸ್ಥಾನವನ್ನು ಹಿಡಿದಿತು ಚಿಂತಾಪರವಶನಾದ ಅವನು ರಾಜಕುಮಾರಿಯನ್ನು ನೋಡುತ್ತ:—"ರಾಜನಂದಿನಿ, ಇಂದಿನ ಸಂಭವಗಳಿಂದ ನೀನು ಅತ್ಯಂತ ಬಳಲಿರಬಹುದು; ಆದುದರಿಂದ ವಿಶ್ರಾಂತಿಯನ್ನು ಹೊಂದಲು ನಿನಗಾಗಿ ಏರ್ಪಡಿಸಿದ ಗೂಡಾರಕ್ಕೆ ತೆರಳುವುದು ಒಳ್ಳೆಯದು. ವಿಶ್ರಾಂತಿಯನ್ನು ಹೊಂದಿದರೆ, ಪ್ರಕ್ಷುಬ್ಧವಾದ ನಿನ್ನ ಧಮನಿಗಳು ಶಾಂತತೆಯನ್ನು ಹೊಂದುವವು. ನಿನಗಾವಶ್ಯವಿರುವ ಆಹಾರ ಮತ್ತು ಇತರ ಸೌಕರ್ಯಗಳಿಗಾಗಿ ಭಟರನ್ನು ಏರ್ಪಡಿಸಿರುವೆನು." ಎಂದು ನುಡಿದನು.

ರಾಜನಂದಿನಿಯಾದರೂ ಆ ದಿನದ ಅದ್ಭುತ ಪ್ರಸಂಗಗಳಿಂದ ಅತ್ಯಂತ ಬಳಲಿದ್ದಳು. ವಿಶ್ರಾಮವು ಅವಳಿಗೆ ಅತ್ಯಾವಶ್ಯಕವಾಗಿದ್ದಿತು. ಹಲವು

ವಿಚಾರಗಳಿಂದ ಅವಳ ಮನಸ್ಸು ಪ್ರಕ್ಷುಬ್ಧಭಾವವನ್ನು ಹೊಂದಿದ್ದಿತು. ಮರುಮಾತನಾಡದೆ ಅವಳು ನಾಗರಾಜನ ನಿರ್ದೇಶವನ್ನು ಅನುಸರಿಸಿದಳು.

ದಂಡಿನ ವೈದ್ಯನು ಬಂದು ಚಂದ್ರಹಾಸನ ಗಾಯವನ್ನು ಅವಲೋಕಿಸಿದನು. ಗಾಯವು ಅತ್ಯಂತ ಭಯಂಕರವಾದುದಾದರೂ ಪ್ರಾಣಾಪಾಯಕ್ಕೆ ಎಡೆಯಿಲ್ಲವೆಂದೂ, ಆದರೆ ದೇಹದಿಂದ ಬಹುವಾಗಿ ರಕ್ತಸ್ರಾವವಾದುದರಿಂದ ಅತ್ಯಂತ ನಿತ್ರಾಣ ಉಂಟಾಗಿದೆಯೆಂದೂ ವೈದ್ಯನು ಸೂಚಿಸಿದನು ಹಸರು ಮುಲಾಮು ಒಂದನ್ನು ಗಾಯಕ್ಕೆ ಹಚ್ಚಿ, ಒಂದು ವಸ್ತ್ರದ ತುಂಡಿನಿಂದ ಅದನ್ನು ಬಿಗುವಾಗಿ ಕಟ್ಟಿದನು. ವೈದ್ಯನ ಮುಖದಲ್ಲಿಯಾದರೋ ನಿರಾಶೆಯು ಒಡೆದು ಕಾಣುತ್ತಲಿದ್ದುದರಿಂದ ಪ್ರಾಣಾಪಾಯಕ್ಕೆ ಎಡೆಯಿಲ್ಲವೆಂದು ತನ್ನನ್ನು ಸಂತೈಸುವದಕ್ಕಾಗಿ ಆಗಿದೆಯೆಂದು ನಾಗರಾಜನು ಊಹಿಸಿಕೊಂಡನು. ವೈದ್ಯನಂದನು:—"ರೋಗಿಯು ನಿದ್ರಿಸಿದರೆ ಅಪಾಯವು ಕಳೆಯಿತೆಂದು ಊಹಿಸಬಹುದು" ಎಂಬುದಾಗಿ.

"ಭಯಂಕರವಾದ ನೋವನ್ನು ಅನುಭವಿಸುತ್ತಿರುವ ಮನುಷ್ಯನು ನಿದ್ರೆಯನ್ನು ಹೇಗೆ ಅನುಭವಿಸುವನು?"

"ಅದೇ ಬಿಕ್ಕಟ್ಟು! ರಕ್ತಸ್ರಾವವಾದುದರಿಂದ ನಾಡಿಗಳು ಬಲಹೀನವಾಗಿವೆ; ಬುದ್ಧಿಯು ಚಿಂತಾಯುಕ್ತವಾದರೆ ರಕ್ತವು ಶಿರಸ್ಸಿಗೆ ಒಮ್ಮೆಲೆ ಪ್ರವಹಿಸುವದು. ಆಗ ಅಪಾಯಕ್ಕೆ ಅವಕಾಶವಿದೆ. ಸಾಧ್ಯವಾದಷ್ಟು ಮಟ್ಟಿಗೆ ಅವರು ಮಾತಾಡದಂತೆ ನೋಡಿಕೊಳ್ಳತಕ್ಕದ್ದು; ವಿಶ್ರಾಂತಿಯು ಅತ್ಯಾವಶ್ಯಕ; ಲಘುವಾದ ಆಹಾರವು ಉತ್ತಮವು; ಆಗಾಗ ಹಾಲನ್ನು ಕೊಡುತ್ತಲಿರಿ!' ಎಂದು ವೈದ್ಯನು ರೋಗಿಯನ್ನು ಶುಶ್ರೂಷಿಸಬೇಕಾದ ರೀತಿಯನ್ನು ಕುರಿತು ದೀರ್ಘವಾದ ಒಂದು ಉಪದೇಶವನ್ನೇ ನೀಡಿದನು.

ಚಂದ್ರಹಾಸನು ಯಾತನೆಗಳನ್ನು ಅನುಭವಿಸಲು ಅಸಮರ್ಥನಾಗಿ ತನ್ನ ಹಾಸಿಗೆಯಲ್ಲಿ ಒಂದೇಸಮನೆ ಉರುಳಾಡುತ್ತಿದ್ದನು ರಕ್ತವರ್ಣವಾದ ಆವನ ಕಣ್ಣುಗಳು ಅವನು ಸಹಿಸುತ್ತಿರುವ ಯಾತನೆಯು ಎಷ್ಟು ಭಯಂಕರವಾದುದು? ಎಂಬುದನ್ನು ಸೂಚಿಸುತ್ತಲಿದ್ದವು. ಅವನು ಅಸ್ಪಷ್ಟವಾದ ಸ್ವರದಲ್ಲಿ ಏನೇನೋ ನುಡಿಯುತ್ತಲಿದ್ದನು. ಸ್ವಲ್ಪ ಸಮಯ ಗತಿಸಲು, ಅದೂ ನಿಂತುಹೋಯಿತು. ವೈದ್ಯನು ಆಗಾಗ ಅವನ ನಾಡಿಗಳನ್ನು ಸ್ಪರ್ಶಿಸಿ ನೋಡುತ್ತಲಿದ್ದನು. ಸ್ಪಂದನವು ಕ್ರಮೇಣ ಮೆಲ್ಲನೆಯಾಗಲಾರಂಭವಾಯಿತು. ಮುಖವು ಬಿಳುಪೇರತೊಡಗಿತು. ಶ್ವಾಸೋಚ್ಛ್ವಾಸಗಳು ನಿದಾನವಾಗತೊಡಗಿದುವು. ಕಣ್ಣುಗಳು ಅರ್ಧ ತೆರೆದಿದ್ದುವು. ರೋಗಿಯ

ನಾಡಿಗಳು ಶಿಥಿಲವಾಗತೊಡಗಿದವು. ಮೃತ್ಯುವಿನ ಲಕ್ಷಣಗಳು ಒಂದೊಂದಾಗಿ ಆ ತರುಣನ ದೇಹದಲ್ಲಿ ಗೋಚರಿಸಲಾರಂಭಿಸಿದುವು. ವೈದ್ಯನ ಮನಸ್ಸು ಅತ್ಯಂತ ನಿರಾಶೆಯ ಭಾವವನ್ನು ಹೊಂದಿತು.

"ವೈದ್ಯರೇ!" ಎಂದು ನಾಗರಾಜನು ಬಾಷ್ಪವನ್ನು ಸುರಿಸುತ್ತ ನುಡಿದನು: "ಕುಳಿಂದ ರಾಜನಂದನನ ಪ್ರಾಣವನ್ನು ತಾವು ರಕ್ಷಿಸಲಾರಿರಾ?"

"ನನ್ನಿಲ್ಲಾಗುವ ಪ್ರಯತ್ನಗಳನ್ನೆಲ್ಲ ಮಾಡುವೆನು." ಎಂದು ದೀನ ವಾಣಿಯಲ್ಲಿ ವೈದ್ಯನು ತನ್ನ ಬೆರಳುಗಳನ್ನು ಆಕಾಶದ ಕಡೆಗೆ ತೋರಿಸುತ್ತ ಹೇಳಲಾರಂಭಿಸಿದನು:—"ವಿಶ್ವನಾಯಕನ ಕೃಪಾಕಟಾಕ್ಷದಿಂದ ವಿಪತ್ತುಗಳು ಯಾವವೂ ಸಂಭವಿಸಲಾರವೆಂದು ನಾನು ಭಾವಿಸುತ್ತೇನೆ. ನಾವು ನಿಮಿತ್ತ ಮಾತ್ರದವರು; ಎಲ್ಲವೂ ಆ ದಿವ್ಯ ಚೈತನ್ಯದ ಲೀಲೆಗಳಾಗಿರುತ್ತವೆ."

ನಾಗರಾಜನು ಚಂದ್ರಹಾಸನ ಮುಖಮಂಡಲವನ್ನು ನೋಡಿದನು; ಆ ತರುಣನು ಮೃತ್ಯುವಿನೊಡನೆ ಹೋರಾಡುತ್ತಿರುವ ಚಿತ್ರವು ನಾಗರಾಜನಿಗೆ ಗೋಚರವಾಯಿತು. ಕಾಲಪಾಶದ ಬಂಧನದಿಂದ ಪಾರಾಗಲು ಆ ಜೀವವು ಹೊಯ್ದಾಡುತ್ತಲಿತ್ತು. ಇಹಲೋಕ ಮತ್ತು ಪರಲೋಕಗಳ ನಡುವೆ ನಿಂತು ಆ ವೀರ ಯುವಕನ ಆತ್ಮವು ತನ್ನ ದಾರಿ ಯಾವುದೆಂಬುದನ್ನು ಹುಡುಕುತ್ತಲಿತ್ತು ಕುಳಿಂದ ಪ್ರಾಂತ್ಯದ ಕೀರ್ತಿಲತೆಯನ್ನು ಮೃತ್ಯುವು ಬಲಿಯಾಗಿ ತೆಗೆದುಕೊಳ್ಳಲು ಬಯಸಿತು.

ಕ್ರಮೇಣ ಮೈ ತಣ್ಣಗಾಗುವದನ್ನು ಕಂಡು ವೈದ್ಯನು ಭೀತಿಯನ್ನು ಹೊಂದಿದನು; ಒಡನೆಯೇ ತನ್ನ ಗಂಟಿನಿಂದ ಒಂದು ಹಸರು ಮೂಲಿಕೆಯನ್ನು ತೆಗೆದು ತನ್ನ ಅಂಗೈಮಧ್ಯದಲ್ಲಿಟ್ಟು ಒತ್ತಿದಾಗ ಅದರ ರಸವು ಹೊರಬಂದಿತು. ಆ ರಸವನ್ನು ವೈದ್ಯನು ಚಂದ್ರಹಾಸನ ನಾಶಿಕರಂಧ್ರಗಳಿಗೆ ಲೇಪಿಸಿದನು. ಹಾಗೆಯೇ ಸ್ವಲ್ಪ ರಸವನ್ನು ರೋಗಿಯ ನಾಲಿಗೆಯ ಮೇಲೆಯೂ ಉಜ್ಜಿದನು. ಬೇರೊಂದು ಮೂಲಿಕೆಯ ರಸವನ್ನು ರೋಗಿಯ ಅಂಗೋಪಾಂಗಗಳಿಗೆಲ್ಲ ವೈದ್ಯನು ಲೇಪಿಸಿದನು. ಅನಂತರ ಆತನು ರೋಗಿಯ ವದನದ ಕಡೆಗೆ ಆಶಾಪರಿಪೂರ್ಣವಾದ ದೃಷ್ಟಿಯಲ್ಲಿ ವೀಕ್ಷಿಸಲಾರಂಭಿಸಿದನು. ಹೀಗೆ ಒಂದು ಗಳಿಗೆಯ ಸಮಯವು ಗತಿಸಿತು; ಬಿಳುಪು ವರ್ಣವನ್ನು ತಳೆದಿದ್ದ ರೋಗಿಯ ವದನಮಂಡಲವು ಕೆಂಬಣ್ಣವನ್ನು ಹೊಂದಿತು. ಇದುವರೆಗೂ ಸ್ಪಂಧಿಸದಿದ್ದ ನಾಡಿಗಳು ಪುನಃ ಸ್ಪಂಧಿಸಲು ಪ್ರಾರಂಭಿಸಿದುವು. ಶ್ವಾಸೋಚ್ಛ್ವಾಸಗಳು ಸರಾಗವಾಗಿ ಸಂಚರಿಸಲಾರಂಭಿಸಿದುವು. ಹೃದಯವು ತನ್ನ ಪೂರ್ವಸ್ಥಿತಿಯಂತೆ ಸ್ಪಂಧಿಸತೊಡಗಿತು. ವೈದ್ಯನ ವದನವು ಪ್ರಸನ್ನ ಭಾವ

ವನ್ನು ತಾಳಿತು. ಅವನು ನಾಗರಾಜನನ್ನು ನೋಡುತ್ತ ಹೇಳಿದನು: "ರಾಜಕುಮಾರನನ್ನು ಜಗದೀಶ್ವರನು ಚಿರಂಜೀವಿಯನ್ನಾಗಿ ಮಾಡಲಿ! ನಾನು ಈಗ ಉಪಯೋಗಿಸಿದ ಮೂಲಿಕೆಯು ಅತ್ಯಂತ ಕಠಿಣ ಸ್ವಭಾವದ್ದು. ಅದನ್ನು ಉಪಯೋಗಿಸಿದರೆ, ಜೀವರಕ್ಷಣೆಗಿಂತ ಹಾನಿಯಾಗುವದೇ ಹೆಚ್ಚು! ಆದರೆ ಸರ್ವೇಶ್ವರನ ಕೃಪೆಯಿಂದ ಅದು ಫಲಕಾರಿಯಾಯಿತು. ಇನ್ನು ಭಯಪಡಬೇಕಾದುದಿಲ್ಲ; ರೋಗಿಗೆ ನಿದ್ರೆಬರುವಂತೆ ಒಂದು ಮೂಲಿಕೆಯನ್ನು ಕೊಡುವೆನು. ಆ ನಿದ್ರೆಯೊಡನೆಯೇ ಈಗ ಕಾಣುತ್ತಿರುವ ಬಲಹೀನತೆಯು ಪರಿಹಾರವಾಗುವದು" ಎಂಬುದಾಗಿ. ಅನಂತರ ಒಂದು ಗುಳಿಗೆಯನ್ನು ತೆಗೆದು ಅದನ್ನು ವೈದ್ಯನು ನೀರಿನಲ್ಲಿ ಬೆರಿಸಿದನು. ಅದು ನೀರಲ್ಲಿ ಕರಗಲು ಜಲದ ಬಣ್ಣವು ಕೇಸರೀ ವರ್ಣವಾಯಿತು. ಅವನು ಆ ದ್ರವಪದಾರ್ಥವನ್ನು ಚಂದ್ರಹಾಸನ ಗಂಟಲೊಳಗೆ ಹೊಯ್ದನು.

ಕಾಲು ಗಳಿಗೆ ಸಮಯವು ಗತಿಸಿತು; ಚಂದ್ರಹಾಸನು ಸುಖವಾದ ನಿದ್ರೆಯನ್ನು ಹೊಂದಿದನು. ಅವನ ಮುಖದಲ್ಲಿ ಪ್ರಸನ್ನತೆಯು ಗೋಚರವಾಗಲಾರಂಭಿಸಿತು ವೈದ್ಯನು ಚಂದ್ರಹಾಸನು ನಿದ್ರಿಸಿದುದನ್ನು ಕಂಡು "ನಾನಿನ್ನು ಇಲ್ಲಿ ನಿಲ್ಲಬೇಕಾದ ಅವಶ್ಯವಿದೆಯೆಂದು ತೋರುವುದಿಲ್ಲ. ರೋಗಿಯು ಎಚ್ಚತ್ತರೆ, ಅವನು ಮಾತಾಡದಂತೆ ನೋಡಿಕೊಳ್ಳಬೇಕು. ಕುಡಿಯಲು ಹಾಲು ಕೊಡುವುದೊಳ್ಳೆಯದು!" ಎಂದನು.

"ತಾವು ತಮ್ಮ ಗುಡಾರಕ್ಕೆ ಹೋಗಬಹುದು; ನಾನು ಎಚ್ಚರಿಕೆಯಿಂದ ರೋಗಿಯನ್ನು ನೋಡಿಕೊಳ್ಳುವೆನು." ಎಂದನು ನಾಗರಾಜನು.

"ನಾಳೆ ಪ್ರಭಾತದಲ್ಲಿ ಬರುವೆನು."

"ಹಾಗೆಯೇ ಆಗಲಿ."

ವೈದ್ಯನು ನಾಗರಾಜನ ಅಪ್ಪಣೆಯನ್ನು ಪಡೆದು ಹೊರಟು ಹೋದನು.

ನಾಗರಾಜನಾದರೂ ಅತ್ಯಂತ ಬಳಲಿದ್ದನು; ಅವನ ಮೈಕೈಗಳಲ್ಲಿ ಚಿಕ್ಕಪುಟ್ಟ ಗಾಯಗಳು ಹೊಳೆಯುತ್ತಲಿದ್ದುವು. ಈ ವ್ರಣಗಳು ತೀವ್ರವಾದ ಯಾತನೆಯನ್ನು ನೀಡುತ್ತಲಿದ್ದುವು. ಆ ರಾತ್ರಿ ನಡೆದ ಕಾಳಗದ ಫಲವಾಗಿ ಅವನ ದೇಹವು ಅತ್ಯಂತ ಬಲಹೀನವಾಗಿದ್ದಿತು. ಅವನ ಸ್ನಾಯುಗಳು ವಿಶ್ರಾಂತಿಯನ್ನು ಬಯಸುತ್ತಲಿದ್ದವು; ಆದರೆ ತನ್ನ ಗೆಳೆಯನ ಮೇಲಿನ ಪ್ರೇಮದಿಂದ ಚಂದ್ರಹಾಸನನ್ನು ಶುಶ್ರೂಷಿಸುವುದರಲ್ಲಿ ತನ್ನ ಸ್ವಂತ ಯಾತನೆಗಳೆಲ್ಲವನ್ನೂ ಅವನು ಮರೆತಿದ್ದನು. ಮಿತ್ರನ ಜೀವರಕ್ಷಣೆಗಾಗಿ ತನಗೆ ಅತ್ಯಾವಶ್ಯಕವಾಗಿದ್ದ ವಿಶ್ರಾಮವನ್ನು ಸಹಾ ನಾಗರಾಜನು ತ್ಯಜಿಸಿದನು. ಎಷ್ಟು

ಅಗಾಧವಾದ ಪ್ರೇಮವು ಅವನದು! ಅವನು ಬರಿಯ ಒಬ್ಬ ತತ್ವ ಶಾಸ್ತ್ರಜ್ಞನು ಮಾತ್ರವಾಗಿರದೆ, ಒಬ್ಬ ಕರ್ಮಕುಶಲನೂ ಸಹ ಅವನಾಗಿದ್ದನು. ಸ್ನೇಹಿತನಿಗಾಗಿ ಮಾತ್ರ ತಾನು ಅತ್ಯಂತ ಅಸಹ್ಯವಾಗಿ ಕಾಣುತ್ತಲಿರುವ ಶಾರೀರಿಕ ಬಲಪ್ರದರ್ಶನದಲ್ಲಿ ಸಹ ನಾಗರಾಜನು ಭಾಗವನ್ನು ವಹಿಸಿದನು. ದಂಡಿನಲ್ಲಿ ಸಾಧಾರಣ ಜನರಿಂದ ರಣಭೀರುವೆಂಬ ಹೆಸರನ್ನು ಆರ್ಜಿಸಿದ್ದರೂ ಆ ರಾತ್ರಿ ಅವನು ಘಾತುಕರೊಡನೆ ಕಾದಾಡಿದಂತೆ ಬೇರೊಬ್ಬ ಯೋಧನು ಅಷ್ಟು ಧೈರ್ಯದಿಂದ ಕಾದಲಾರನು. ಲೋಕದಲ್ಲಿ ನಾಗರಾಜನಂಥ ಒಂದು ವ್ಯಕ್ತಿಯನ್ನು ಕಾಣುವುದು ಪ್ರಯಾಸವು.

ನಿದ್ರಾಂಗನೆಯು ಬಂದು ನಾಗರಾಜನನ್ನು ಪೀಡಿಸಲಾರಂಭಿಸಿದಳು; ಅವನ ಶರೀರವು ಅದೆಷ್ಟು ಹೊತ್ತಿನವರೆಗೆ ತಾನೆ ಆ ರೀತಿ ದುಡಿಯಬಲ್ಲದು? ಅವನ ಕಣ್ಣುಗಳ ರೆಪ್ಪೆಗಳು ಅವನ ಆಜ್ಞೆಗೆ ವಿರೋಧವಾಗಿ ಮುಚ್ಚತೊಡಗಿದವು. ಈ ವೇಳೆಯಲ್ಲಿ ಕಾಡಿನಲ್ಲಿರುವ ಕೋಗಿಲೆಗಳ ಕ್ರಂದನಗಳು ಪ್ರಭಾತವಾಯಿತೆಂಬುದನ್ನು ಸೂಚಿಸಿದುವು.

ರಾಜಕುಮಾರಿಯು ನಿದ್ರೆಯಿಂದೆದ್ದು ಚಂದ್ರಹಾಸಗೆ ಆರೋಗ್ಯವು ಹೇಗಿದೆಯೆಂಬುದನ್ನು ತಿಳಿದುಕೊಳ್ಳಲು ಉತ್ಸುಕಳಾಗಿ ಅವನ ಗೂಡಾರಕ್ಕೆ ಬಂದಳು. ಅವಳು ಒಳಗೆ ಪ್ರವೇಶಿಸಿದಾಗ ಕಂಡ ನೋಟವು, ಚಂದ್ರಹಾಸನ ಹಾಸಿಗೆಯಲ್ಲಿ ಕುಳಿತು ನಾಗರಾಜನು ನಿದ್ರಾಪರವಶನಾಗಿರುವುದನ್ನಾಗಿದ್ದಿತು. ರಾತ್ರೀಕಾಲವನ್ನೆಲ್ಲ ತನ್ನ ಗೆಳೆಯನನ್ನು ಶುಶ್ರೂಷಿಸುವದಕ್ಕಾಗಿ ನಾಗರಾಜನು ಜಾಗರಣೆ ಮಾಡಿದ್ದಾನೆ ಎಂಬುದನ್ನು ಅವಳು ತಿಳಿದುಕೊಂಡಳು. ರಾಜಕುಮಾರಿಯು ತನ್ನ ಆಗಮನವನ್ನುಸುರಲು ಲಜ್ಜಿತಳಾದುದರಿಂದ, ಅವಳು ಒಂದು ಬಾರಿ ಕೆಮ್ಮಿದಳು. ಇದು ಹೆಂಗಸರಿಗೆ ಇರುವ ಒಂದು ಸ್ವಾಭಾವಿಕ ಗುಣವಾಗಿದೆ. ಅನ್ಯರನ್ನು ಸಂಬೋಧಿಸಿ ತಾವು ಬಂದಿರುವ ವಾರ್ತೆಯನ್ನು ಉಸುರಲು ನಾಚುವ ಸ್ವಭಾವವು ಹೆಂಗಸರಿಗೆ ನೈಸರ್ಗಿಕವಾದುದಾದರೆ, ಅದರಂತೆಯೇ ತಾವು ಬಂದಿರುವದನ್ನು ಅನ್ಯರಿಗರಹುವ ಚಾತುರ್ಯವನ್ನು ಪ್ರಕೃತಿದೇವಿಯು ವನಿತೆಯರಿಗೆ ದಯಪಾಲಿಸಿರುವಳು. ಈ ಯುಕ್ತಿಗಳಲ್ಲಿ ಕೆಮ್ಮುವುದೂ ಒಂದಾಗಿದೆ ರಾಜನಂದಿನಿಯಾದರೂ ನಾಗರಾಜನನ್ನು ನಿದ್ರೆಯಿಂದ ಎಚ್ಚರಿಸಲು ಈ ತಂತ್ರವನ್ನೇ ಪ್ರಯೋಗಿಸಿದಳು ಈ ಸಪ್ಪಳವು ನಾಗರಾಜನನ್ನು ಜಾಗ್ರತಗೊಳಿಸಿತು. ಅವನು ತನ್ನ ಮುಚ್ಚಿದ್ದ ನೇತ್ರಗಳನ್ನು ಅರ್ಧ ತೆರೆದು ರಾಜಕುಮಾರಿಯನ್ನೊಂದು ಬಾರಿ ನೋಡಿದನು; ಹಾಗು ಎರಡೂ ಕೈಗಳಿಂದಲೂ ಕಣ್ಣುಗಳನ್ನುಜ್ಜುತ್ತ:—"ರಾಜನಂದಿನಿ,

ಆದೇಕೆ ಬಂದಿರುವೆ?" ಎಂಬುದಾಗಿ ಪ್ರಶ್ನಿಸಿದನು.

"ತಮ್ಮ ಗೆಳೆಯರ ಶಾರೀರಿಕ ಪ್ರಕೃತಿಯನ್ನರಿಯಲು. ನೇರವು ಆಗಲೆ ಮುಂಜಾನೆಯಾಗುತ್ತ ಬಂದಿದೆ."

"ಸ್ವಲ್ಪ ಸುಧಾರಿಸಿರುವದು; ನೀನು ವಿಶ್ರಾಮವನ್ನು ಹೊಂದಿರುವಿಯಷ್ಟೇ?"

"ನಿದ್ರೆಯಿಂದ ನನ್ನ ಬಳಲಿಕೆಗಳು ನೀಗಿದುವು; ಆದರೆ ತಾವು ವಿರಾಮವಿಲ್ಲದೆ ತಮ್ಮ ಮಿತ್ರರನ್ನು ಶುಶ್ರೂಷಿಸುವುದರಲ್ಲಿ ನಿರತರಾಗಿದ್ದಂತೆ ತೋರುತ್ತದೆ. ತಾವಾದರೂ ಶ್ರಮವಹವಾದ ಕೆಲಸಗಳಿಂದ ಬಳಲಿರುವಿರಿ. ತಾವು ಸ್ವಲ್ಪ ವಿಶ್ರಾಮವನ್ನು ಪಡೆಯುವುದು ಒಳ್ಳೆಯದು ನಾನು ತಮಗೆ ಅಪರಿಚಿತಳಾದರೂ ಕೈಲಾದ ಮಟ್ಟಿಗೆ ನಾನು ರೋಗಿಯನ್ನು ಆರೈಕೆ ಮಾಡುವೆನು" ಎಂದು ತನ್ನನ್ನು ಶತ್ರುಗಳ ಕರಗಳಿಂದ ರಕ್ಷಿಸಿದಾತನಿಗೆ ತನ್ನಿಂದಾಗುವ ಸಹಾಯವನ್ನು ನೀಡಿ, ಕೃತಜ್ಞತೆಯನ್ನು ಸೂಚಿಸುವದಕ್ಕೆ ಕುತೂಹಲಳಾದ ರಾಜನಂದಿಯು ನುಡಿದಳು

ನಾಗರಾಜನು ಬಹಳ ಬಳಲಿದುದರಿಂದ ಅವನಿಗೆ ರಾಜಕುಮಾರಿಯು ಸೂಚಿಸಿದಂತೆ ವಿಶ್ರಾಮವು ಅತ್ಯಾವಶ್ಯಕವಾಗಿ ತೋರಿತು. ಅವನು ಹೆಚ್ಚು ಮಾತಾಡನು: "ರಾಜಕುಮಾರಿ, ಹಾಗೆಯೇ ಆಗಲಿ. ಚಂದ್ರಹಾಸನು ನಿದ್ರಿಸುತ್ತಲಿರುವನು ಅವನು ಎಚ್ಚತ್ತರೆ ಒಂದಿಷ್ಟು ಹಾಲನ್ನು ಕುಡಿಯಲು ಕೊಡಬೇಕು. ಹೊರಗಿರುವ ಪರಿಚಾರಕನನ್ನು ಕೂಗಿದರೆ, ಆವಶ್ಯವಿರುವ ಕೆಲಸಗಳನ್ನು ಅವನು ಮಾಡುವನು" ಎಂದು ನುಡಿದು, ತನ್ನ ಗೂಡಾರಕ್ಕೆ ತೆರಳಿದನು.

ಚಂಪಕಮಾಲಿನಿಯು ಚಂದ್ರಹಾಸನ ಹಾಸಿಗೆಯ ಬಳಿಗೆ ಹೋಗಿ ನಿಂತಳು. ಮೊದಲು ಅನ್ಯಜನರಿದ್ದುದರಿಂದ ಅವನ ಮೊಗವನ್ನು ನೋಡಲು ಸಂಕೋಚವಾಗುತ್ತಿತ್ತು; ಆದರೆ ಈಗ ಯಾರೂ ಇಲ್ಲದುದರಿಂದ ನಿದ್ರಿಸುತ್ತಿರುವ ವ್ಯಕ್ತಿಯ ರೂಪವನ್ನು ಮನಸದಣಿಯುವಂತೆ ಅವಲೋಕಿಸಿ ಸಂತೃಪ್ತಿಪಡಲು ಅವಳಿಗೆ ಅವಕಾಶವು ಲಭಿಸಿತು. ಶಾಂತತೆಯ ಭಾವವನ್ನು ಹೊಂದಿರುವ ಆ ತರುಣ ಕೇಸರಿಯ ಮುಖರಾಜೀವದಲ್ಲಿ ಅಪೂರ್ವವಾದ ಒಂದು ಕಳೆಯು ಹೊರಸೂಸುತ್ತಿರುವದನ್ನು ರಾಜಕುಮಾರಿಯು ನೋಡಿದಳು. ಆ ಚೆಲುವಾದ ಮೊಗವಲ್ಲಿ ಒಂದು ಮುಗುಳು ನಗೆಯು ಹೊಳೆಯುತ್ತಿರುವುದನ್ನು ಕಂಡಳು. ಹಲವು ತರುಣರನ್ನು ಅವಳು ನೋಡಿದ್ದಳು; ಪಿತೃಗೃಹಕ್ಕೆ ಅತಿಥಿಗಳಾಗಿ ಬಂದ ಹಲವು ರಾಜಕುಮಾರರ ಸೌಂದರ್ಯವನ್ನು ಅವಳು ದರ್ಶಿಸಿದ್ದಳು; ಆದರೆ ಆ ತರುಣರ ಸೌಂದರ್ಯವು ಅವಳ ಹೃದಯದಲ್ಲಿ ಯಾವ ವಿಕಾರ

ಗಳನ್ನೂ ಬಿತ್ತಿರಲಿಲ್ಲ; ಆದರೆ ಚಂದ್ರಹಾಸನ ನಿಷ್ಕಲಂಕವಾದ ರೂಪವು ಅವಳ ಹೃದಯದ ಅಂತರಾಳದಲ್ಲಿ ಅದೊಂದು ಬಗೆಯ ವಿಕಾರವು ಸಂಜಾತವಾಗುವಂತೆ ಮಾಡಿತು. ಅವನ ರೂಪರಾಶಿಯನ್ನು ಎಷ್ಟು ಸವಿದರೂ ಅವಳ ಹೃದಯವು ಶಾಂತತೆಯನ್ನು ಹೊಂದಲಿಲ್ಲ. ಹಲವು ವಿಚಾರಗಳು, ಹಲವು ವಿಕಾರಗಳು ಅವಳ ಮನೋದರ್ಪಣದಲ್ಲಿ ಪ್ರತಿಬಿಂಬಿಸಲಾರಂಭಿಸಿದುವು. ಅದಕ್ಕೆ ಕಾರಣವೇನೆಂಬುದನ್ನು ಅವಳು ತಿಳಿಯಳು. ನಿರಾಶೆಯಿಂದಾವೃತವಾದ ಅವಳ ಹೃದಯಕ್ಕೆ ಒಂದು ಹೊಸ ಬೆಳಕು ಲಭಿಸಿತು. ಪೂರ್ಣತೆಯ ರೂಪವನ್ನು ಅವಳ ಆತ್ಮವು ದರ್ಶಿಸಿತು.

ಚಿಂತಾಮಗ್ನಳಾದಳು. ಹಲವು ಚಿತ್ರಗಳು ಬಂದು ಅವಳ ಮನೋಮುಕುರದಲ್ಲಿ ಪ್ರತಿಬಿಂಬಿಸಿದುವು ತನ್ನ ವೃದ್ಧನಾದ ತಂದೆ, ವಾತ್ಸಲ್ಯ ಪರಿಪೂರ್ಣಳಾದ ತಾಯಿ ಇವರ ರೂಪಗಳು ಅವಳ ವಿಚಾರಚಕ್ಷುಸ್ಸುಗಳ ಮುಂದೆ ಬಂದು ನಿಂತುವು ತನ್ನ ಗೆಳತಿ, ತನ್ನ ಮಾರ್ಗದರ್ಶಿನಿಯಾದ ಅಮಾತ್ಯನಂದಿನಿಯ ಬಿಂಬವಾದರೂ ತೋಳೆಯುದೇ ಇರಲಿಲ್ಲ ತನ್ನ ಸೌಂದರ್ಯವನ್ನು ಅಪಹರಿಸಲು ಯತ್ನಿಸುತ್ತಿರುವ ಮದನಕುಮಾರನಾದರೂ ಅವಳ ಸ್ಮೃತಿಪಥದಲ್ಲಿ ಗೋಚರನಾದನು ಮದನನನ್ನೂ ಚಂದ್ರಹಾಸನನ್ನೂ ಅವಳು ಸಾಮ್ಯಹುಡಿಸಿ ನೋಡಿದಳು. ಒಂದು ಹೊಳೆಯುತ್ತಿರುವ ಗಾಜಿನ ತುಂಡಾಗಿದ್ದರೆ, ಇನ್ನೊಂದು ದಿವ್ಯವಾದ ರತ್ನವಾಗಿದೆ, ಎಂಬುದನ್ನು ಅವಳು ತಿಳಿದುಕೊಂಡಳು. ಮದನನು ಕೇವಲ ತನ್ನ ಸುಖಸಂತೃಪ್ತಿಗಳಿಗಾಗಿ ಯತ್ನಿಸುತ್ತಿರುವ ಒಂದು ನರಕೀಟಕವೆಂದೂ, ಚಂದ್ರಹಾಸನು ಅನ್ಯರ ದುಃಖಶಮನಕ್ಕಾಗಿ ತನ್ನ ಸ್ವಂತ ಸುಖಗಳನ್ನು ಬಲಿಯಾಗಿ ನೀಡತಕ್ಕ ಉದಾತ್ತಸ್ವಭಾವದ ತರುಣನೆಂದೂ ಅವಳಿಗೆ ಹೊಳೆದುವು.

ಈ ರೀತಿ ವಿವಿಧ ವಿಚಾರ ಭರಿತಳಾಗಿ ರಾಜಕುಮಾರಿಯು ಚಂದ್ರಹಾಸನ ಸಮೀಪದಲ್ಲಿ ನಿಂತು ನೇರವನ್ನು ಕಳೆದಳು. ಕುಳಿಂದಕುಮಾರನು ವೈದ್ಯನು ನೀಡಿದ ಮೂಲಿಕೆಯ ಪ್ರಭಾವದಿಂದ ಸುಖನಿದ್ರೆಯನ್ನು ಅನುಭವಿಸುತ್ತಲಿದ್ದನು ದೂರದಲ್ಲಿ ಕೂಗುತ್ತಿರುವ ಒಂದು ಕೋಗಿಲೆಯ ಮೋಹನದ ಇಂಚರವಲ್ಲದೆ, ಆ ಉಷಃಕಾಲದ ಶಾಂತತೆಯನ್ನು ಇನ್ನಾವುದೂ ಭಂಗಪಡಿಸುತ್ತಿರಲಿಲ್ಲ.

ನಿದ್ರೆಯನ್ನು ಬಿಟ್ಟು, ಚಂದ್ರಹಾಸನು ಮೆಲ್ಲನೆ ಕಣ್ಣುಗಳನ್ನು ತೆರೆದನು. ತಾನೆಲ್ಲಿ ಇರುವೆನೆಂಬ ಜ್ಞಾನವು ಅವನಿಗಿರಲಿಲ್ಲ ಯಾವುದೋ ಒಂದು ಲೋಕದಿಂದ ಇಳಿದು ಬಂದ ವ್ಯಕ್ತಿಯು ಹಾಗೆ ಕಣ್ದೆರೆದು, ತನ್ನ ಸುತ್ತುಮುತ್ತ

ಲಿನ ಪ್ರದೇಶವನ್ನು ಅವನು ವೀಕ್ಷಿಸಿದನು. ಬರಿದಾಗಿದ್ದ ಅವನ ಮನಸ್ಸು ತನ್ನ ಸದ್ಯದ ಅವಸ್ಥೆಯೇನೆಂಬುದನ್ನು ತಿಳಿಯಲು ಪ್ರಯತ್ನಿಸುತ್ತಲಿತ್ತು. ಪಿಪಾಸೆಯೂ ಆ ರಾತ್ರಿ ಆಹಾರವಾವುದೂ ಸಿಗದುದರಿಂದ ಹಸಿವೂ ಅವನನ್ನು ಪೀಡಿಸಲಾರಂಭಿಸಿದುವು. ಅತ್ಯಂತ ಕ್ಷೀಣಸ್ವರದಲ್ಲಿ ಅವನು ಹೇಳಿದನು ಬಾಯಾರಿಕೆ ಎಂಬುದಾಗಿ.

ರಾಜಕುಮಾರಿಯು ಹತ್ತಿರದ ರಜತ ಪಾತ್ರೆಯಲ್ಲಿದ್ದ ಹಾಲನ್ನು ತೆಗೆದು ಚಂದ್ರಹಾಸನ ಕರಗಳಲ್ಲಿ ನೀಡಲು ಪ್ರಯತ್ನಿಸಿದಳು. ಅತ್ಯಂತ ಬಲಹೀನತೆಯನ್ನು ಹೊಂದಿದುದರಿಂದ ಮಲಗಿರುವಲ್ಲಿಂದ ಎದ್ದು ಕುಳಿತು ಹಾಲನ್ನು ಕುಡಿಯಲು ಅವನು ಶಕ್ತನಾಗಲಿಲ್ಲ. ಅನ್ಯನಾದ ಒಬ್ಬ ಪುರುಷನನ್ನು ಸ್ಪರ್ಶಿಸಲು ರಾಜನಂದಿನಿಗೆ ಸ್ವಲ್ಪ ಸಂಕೋಚವಾಯಿತು; ಆದರೆ ರೋಗಿಯಾದ ಒಬ್ಬನನ್ನು ಪರಿಪೋಷಿಸುವುದು ತನ್ನ ಕರ್ತವ್ಯವೆಂದು ಬಗೆದು, ಅರಸುಕುಮಾರಿಯು ಸ್ವಾಭಾವಿಕವಾದ ಲಜ್ಜೆಯನ್ನು ತ್ಯಜಿಸಿದಳು. ಚಂದ್ರಹಾಸನನ್ನು ಹಾಸಿಗೆಯಿಂದ ಎಬ್ಬಿಸಿ, ಅನಂತರ ಅವನ ಬಾಯಿಗೆ ಹಾಲನ್ನು ನೀಡಿದಳು. ಕೋಮಲಗಾತ್ರಳಾದ ರಾಜನಂದಿನಿಯ ವದನವನ್ನು ನೋಡುತ್ತ ಚಂದ್ರಹಾಸನು ತನ್ನ ತೃಷೆಯನ್ನು ನಿವಾರಿಸಿಕೊಂಡನು.

ಸ್ವಲ್ಪ ಹಾಲು ಉದರದಲ್ಲಿ ಪ್ರವೇಶಿಸಲು ಚಂದ್ರಹಾಸನ ನಿಃಶಕ್ತತೆಯು ಸ್ವಲ್ಪ ಮಟ್ಟಿಗೆ ಮಾಯವಾಯಿತು. ಅವನ ಬುದ್ಧಿಯು ಸದ್ಯದ ಪರಿಸ್ಥಿತಿಯನ್ನು ಅರಿತುಕೊಂಡಿತು. ರಾತ್ರಿ ದುಷ್ಟರ ಸಂಗಡ ಹೋರಾಡಿ ರಕ್ಷಿಸಿದ ವನಿತೆಯೇ ತನ್ನ ಮುಂದೆ ನಿಂತಿರುವಳೆಂಬುದನ್ನು ಅವನು ತಿಳಿದುಕೊಂಡನು. ತಾನು ಹಿಡಿದ ಕಾರ್ಯವು ವಿಜಯಪ್ರದವಾಯಿತೆಂಬುದನ್ನು ತಿಳಿಯಲು, ಅವನು ಒಂದು ಮಂದಹಾಸವನ್ನು ಬೀರಿದನು; ಹಾಗು ಮೌನದಲ್ಲಿ ಅರಸುಕುಮಾರಿಯ ವದನಾರವಿಂದವನ್ನು ನೋಡುತ್ತ ಹಾಸಿಗೆಯಲ್ಲಿ ಮಲಗಿದನು.

ಚಂದ್ರಹಾಸನ ಶರೀರಸ್ಪರ್ಶದಿಂದ ಅರಸುಕುಮಾರಿಯು ಪುಲಕಿತಳಾದಳು. ಅದೇಕೆಂಬುದನ್ನು ಅವಳು ತಿಳಿಯಳು! ಒಂದು ಆನಂದವು ಆ ಪುಲಕಿನ ಭಾವದಲ್ಲಿ ತುಂಬಿದ್ದಿತು. ಇದು ಚಿರಂತನ ತಂತ್ರವೆಂದೂ, ಎರಡು ಜೀವಗಳು ಪರಸ್ಪರ ಮಿಲನವನ್ನು ಹೊಂದಲು ಈಶ್ವರ ದತ್ತವಾದ ಒಂದು ದಾರಿಯೆಂದೂ ಗ್ರಹಿಸಲು ಆ ಮುಗ್ಧೆಯು ಹೇಗೆ ತಾನೆ ಶಕ್ತಳಾಗುವಳು?



## ರಾಜಧಾನಿಗೆ ಚಂಪೆಯ ಪುನರಾಗಮನ

"ಮಾಲತಿ!" ಎಂದು ಕಾತರಳಾಗಿ ರಾಣಿಯು ಹೇಳಿದಳು.

"ಏನು ತಾಯೀ?" ಎಂದಳು ದಾಸಿ.

"ನನ್ನ ಚಂಪೆಯು ತೆರಳಿ ಮೂರು ದಿನಗಳಾದವಲ್ಲ! ಅವಳೆತ್ತ ತೆರಳಿದ ಳೆಂಬುದು ಇನ್ನೂ ತಿಳಿಯದೆ ಹೋಯಿತೇ? ದೇಶದ ಕೊತ್ವಾಲರು ಅವಳ ಶೋಧವನ್ನು ನಡೆಯಿಸಿ ಪರಾಜಯವನ್ನು ಹೊಂದಿದರೆ ಹೇಗೆ ಬಾಳಲಿ? ಈ ಮೂರುದಿನಗಳು ಮೂರು ಯುಗಗಳಾಗಿ ತೋರಿದವು. ನನ್ನ ಪೂರ್ವಜನ್ಮದ ಪಾಪಗಳ ಫಲವಿದು. ಯಾರನ್ನು ಹಳಿದು ಪ್ರಯೋಜನವೇನು? ಹೆತ್ತ ಕರುಳು ತನ್ನ ಕಂದನ ವಿಯೋಗವನ್ನು ಹೇಗೆ ತಾನೆ ಸಹಿಸುವದು? ಚಂಪೇ! ನನ್ನ ಮುದ್ದು ಕಂದಾ!" ಎಂದು ಮಗಳನ್ನು ನೆನೆಯುತ್ತ, ಕುಂತಳರಾಜ್ಞಿಯು ಶೋಕಪರಿಪೂರ್ಣಳಾಗಿ ನೆಲದಲ್ಲಿ ಬಿದ್ದು ಚಿಕ್ಕಮಕ್ಕಳಂತೆ ಕ್ರಂದಿಸಲಾರಂಭಿಸಿದಳು.

ರಾಣಿಯ ವಿಲಾಪವನ್ನು ಕಂಡು ಮಾಲತಿಯು ಸಂಭ್ರಾಂತಳಾದಳು. ಚಂಪಕಮಾಲಿನಿಯು ರಾಜಗೃಹದಿಂದ ಮಾಯವಾದ ನಂತರ ರಾಣಿಯು ಸದಾ ಶೋಕಗ್ರಸ್ತಳಾಗಿದ್ದಳು. ಅವಳಿಗೆ ಆಹಾರವು ಬೇಡವಾಯಿತು. ಬಾಷ್ಪದಿಂದ ಸದಾ ತನ್ನ ಮುಖವನ್ನು ಕ್ಷಾಲಿಸುತ್ತಲಿದ್ದಳು. ತನ್ನ ದೈನಂದಿನ ಕೃತ್ಯಗಳಲ್ಲಿ ಅವಳಿಗೆ ಆಸಕ್ತಿಯಿರಲಿಲ್ಲ. "ಚಂಪೇ, ನನ್ನ ಜೀವನದ ಮಾಣಿಕ್ಯವೇ! ನನ್ನನ್ನು ತೊರೆದು ನೀನೆತ್ತ ಗಮಿಸಿದೆ?" ಎಂದು ರಾಣಿಯು ವಿಲಪಿಸುತ್ತಲಿದ್ದಳು ಹೆತ್ತ ಕರುಳು ತನ್ನ ಕಂದನಿಗಾಗಿ ಮೊರೆಯಿಡುತ್ತಲಿತ್ತು.

ಕುಂತಳೇಂದ್ರನಾದರೂ ಶೋಕಭರಿತನಾಗದಿರಲಿಲ್ಲ; ಆದರೆ ಅವನಲ್ಲಿ ಬೇರೂರಿದ್ದ ಆಧ್ಯಾತ್ಮಿಕ ಚಿಂತನೆಗಳು ಆತನ ಶೋಕಕ್ಕೆ ಉಪಶಮನವನ್ನು ನೀಡುತ್ತಲಿದ್ದುವು. "ಜಗನ್ಮಿಥ್ಯಾ; ಬ್ರಹ್ಮಂ ಸತ್ಯಂ" ಎಂಬ ಮಹರ್ಷಿಗಳ ಅಮೃತವಾಣಿಯು ಅವನ ಸ್ಮೃತಿಪಥದಲ್ಲಿ ಬಂದು, "ಇವೆಲ್ಲವೂ ಮಾಯೆ; ನಮ್ಮ ಜೀವನಗಳು ಒಂದು ಪ್ರವಾಸಮಾತ್ರವಾಗಿವೆ. ಆ ಬಗ್ಗೆ ಚಿಂತಿಸಿ ನಮ್ಮ ಆತ್ಮಗಳ ಮೇಲೆ ಬಿದ್ದಿರುವ ಆವರಣವನ್ನು ಇನ್ನಷ್ಟು ದೃಢಪಡಿಸುವುದು ಅನುಚಿತವು!" ಎಂಬಿತ್ಯಾದಿ ಅವನ ಮನೋವಲಯದಲ್ಲಿ ಹೊಳೆದು, ಕುಮಾರಿಯ ವಿಯೋಗದಿಂದ ಸಂಜಾತವಾದ ಶೋಕಸಂಚಯವನ್ನು ಲಘೂಕರಿಸಲು ಪ್ರಯತ್ನಿಸುತ್ತಲಿದ್ದುವು. ಆ ರಾಜನು ತನ್ನ ಮಗಳನ್ನು ಕುರಿತಿರುವ ಚಿಂತೆಯು ಬಂದು ತನ್ನ ಮನಸ್ಸನ್ನು ಪೀಡಿಸದಿರುವುದಕ್ಕಾಗಿ ತನ್ನ

ದೇವತಾರಾಧನೆಯ ಗೃಹದಲ್ಲಿ ಏಕಾಂಗಿಯಾಗಿ ಕುಳಿತು ಆಧ್ಯಾತ್ಮಿಕ ಗ್ರಂಥಗಳನ್ನು ಪಠಿಸಲಾರಂಭಿಸಿದನು. ಈ ಉದ್ಯಮವು ಅವನ ಶೋಕವನ್ನು ಕಡಿಮೆ ಮಾಡಲಿರುವ ಒಂದು ಅತ್ಯುತ್ತಮ ಔಷಧಿಯಾಗಿದ್ದಿತು. ಸಾಧಾರಣವಾಗಿ ಮನುಷ್ಯನು ತನಗೆ ಸಹಿಸಲು ಅಸದಳವಾದ ಶೋಕವು ಸಂಪ್ರಾಪ್ತವಾದಾಗ, ಅವುಗಳ ತೀವ್ರ ಯಾತನೆಯಿಂದ ವಿಮುಕ್ತನಾಗಲು ಆಧ್ಯಾತ್ಮಿಕ ಚಿಂತನೆ ಮತ್ತು ಈಶ್ವರ ವಿಚಾರ ಇವುಗಳನ್ನು ಶರಣುಹೊಂದುವುದು ಲೋಕದಲ್ಲಿ ನಮಗೆ ದೃಗ್ಗೋಚರವಾಗುತ್ತಿರುವ ಒಂದು ಚಿತ್ರವಾಗಿದೆ. ಆ ದಿವ್ಯ ಬೋಧವಲ್ಲದೆ ಇನ್ನಾವುದೂ ಮನುಷ್ಯನ ಸಂಕಟಗಳನ್ನು ನಿವಾರಿಸಲಾರವು. ಹೀಗಿರಲು, ರಾಜನಾಗಿ ಬಾಳುವದಕ್ಕಿಂತ ಒಬ್ಬ ಆಚಾರ್ಯನಾಗಿ ಬಾಳಲು ಯೋಗ್ಯನಾದ ಕುಂತಳೇಂದ್ರನು, ಈ ರೀತಿಯ ಉದ್ಯಮಗಳನ್ನು ಅವಲಂಬಿಸಿದುದರಲ್ಲಿ ಅತಿಶಯವೇನೂ ಇಲ್ಲ.

ಆದರೆ ರಾಣಿಯ ಚಿತ್ತವೃತ್ತಿಯು ಆ ರೀತಿಯದಲ್ಲ; ಎಲ್ಲವೂ ಮಾಯೆಯೆಂದು ನುಡಿದು, ಧೈರ್ಯವನ್ನವಲಂಬಿಸಲು ಆ ಹೆಣ್ಣು ಹೃದಯಕ್ಕೆ ಶಕ್ತಿಯಿರಲಿಲ್ಲ. ತನ್ನ ಮುಂದೆ ಭೀಕರಾಕಾರವನ್ನು ತಳೆದು ನರ್ತಿಸುತ್ತಿರುವ ಶೋಕಭೂತವನ್ನು ಎದುರಿಸಲು ಅವಳು ಶಕ್ತಳಾಗಲಿಲ್ಲ ಹೃದಯಾವರ್ಜಿತ ಪರಿಸ್ಥಿತಿಗೆ ಅವಳು ತಲುಪಿದಳು.

ರಾಣಿಯು ಎಂದಿನಂತೆ ಆ ದಿನವೂ ಚಂಪೆಯನ್ನು ನೆನೆದು ನೆಲದಲ್ಲಿ ಹೊರಳುತ್ತಿದ್ದಳು ಅವಳ ದಾಸಿಯಾದ ಮಾಲತಿಯು ತನ್ನಿಂದಾಗುವ ಮಟ್ಟಿಗೆ ಸಂತೈಸಲು ಪ್ರಯತ್ನಿಸುತ್ತಲಿದ್ದಳು; ಆದರೆ ದಾಸಿಯ ಈ ಪರಿಶ್ರಮಗಳು ರಾಣಿಯ ಎದೆಯಲ್ಲಿ ಉಕ್ಕಿಬರುತ್ತಿರುವ ಶೋಕರಾಶಿಯನ್ನು ಶಮಿಸಲು ಪರ್ಯಾಪ್ತವಾಗದೆ, ಅವಳ ಎದೆಯಲ್ಲಿ ಉರಿಯುತ್ತಿರುವ ತೀವ್ರಜ್ವಾಲೆಯನ್ನು ಇನ್ನಷ್ಟು ಹೆಚ್ಚಿಸಿದುವು. ನೇತ್ರಗಳಿಂದ ಬಾಷ್ಪವನ್ನು ಸುರಿಸುತ್ತ ರಾಣಿಯು: ‘‘ಚಂಪೇ, ನನ್ನ ಕಂದಾ!’’ ಎಂದು ರೋದಿಸುತ್ತಲಿದ್ದಳು

‘‘ಅಮ್ಮಾ!’’ ಎಂಬ ಸ್ವರವು ಕೇಳಿ ಬಂದಿತು.

‘‘ಯಾರದು? ನನ್ನ ಮಾಣಿಕ್ಯದ ಕಂಠನಾದವೇ ಅದು!’’ ಎಂದು ಹರ್ಷವನ್ನು ತಾಳಿ, ರಾಣಿಯು ಎದ್ದು ಕುಳಿತಳು.

‘‘ಅಮ್ಮಾ!’’ ಎಂದು ನುಡಿಯುತ್ತ ಚಂಪೆಯ ರೂಪು ರಾಣಿಯ ಮುಂದೆ ಪ್ರತ್ಯಕ್ಷವಾಯಿತು. ತಾಯಿಯು ಹರ್ಷಪುಲಕಿತಳಾಗಿ ಮಗಳನ್ನು ಅಪ್ಪಿಕೊಂಡು ಪ್ರೇಮದಿಂದ ಚುಂಬಿಸಿದಳು. ತಾಯಿಯ ಬಾಯಿಯಿಂದ ನುಡಿಗಳು ಹೊರಬೀಳಲಿಲ್ಲ; ಅವಳ ನೇತ್ರಗಳಿಂದ ಕಣ್ಣೀರು ಹರಿಯಿತು; ಆದರೆ

ಅದು ಹಿಂದಿನಂತೆ ಶೋಕಬಾಷ್ಪವಲ್ಲ; ಮಗಳ ದರ್ಶನದಿಂದುಂಟಾದ ಹರ್ಷದಿಂದ ಹೊರಬಿದ್ದ ಅಮೃತ ಬಿಂದುಗಳೇ ಅವುಗಳಾಗಿದ್ದುವು. ಮೌನದಲ್ಲಿ ಮಗಳ ಒಂದೊಂದು ಅಂಗವನ್ನು ತಡವುತ್ತ ತಾಯಿಯು ಮುದ್ದಾಡತೊಡಗಿದಳು. ರಾಜಕುಮಾರಿಯು ಚಿಕ್ಕ ಕೂಸಿನಂತೆ ತಾಯಿಯ ಕೊರಳನ್ನು ತನ್ನ ಬಾಹುಗಳಿಂದ ಬಂಧಿಸಿದಳು.

ಆ ಚಿತ್ರವನ್ನು ವರ್ಣಿಸುವುದು ಅಸದಳವು! ಮಗಳ ವಿಯೋಗದಿಂದ ಬೆಯ್ಯುತ್ತಿರುವ ತಾಯಿಯ ಒಡಲು, ತನ್ನ ಕಂದಳ ದರ್ಶನವು ಲಭಿಸಿದಾಗ, ಅದಾವ ರೀತಿಯ ಹರ್ಷವನ್ನು ಅನುಭವಿಸುತ್ತಿಪೆಂಬುದನ್ನು ನಾನು ವಿವರಿಸುವುದಕ್ಕಿಂತ ವಾಚಕರು ತಮ್ಮ ಮನಸ್ಸಿನಲ್ಲಿಯೇ ಆ ಚಿತ್ರವನ್ನು ಬರೆದು ಅದರ ದರ್ಶನವನ್ನು ಹೊಂದುವುದು ಮೇಲು. ಪರಸ್ಪರ ದರ್ಶನಕ್ಕಾಗಿ ಕಾತರಿಸುತ್ತಿದ್ದ ಎರಡು ಜೀವಗಳು ಮಿಲನವನ್ನು ಹೊಂದಿದಾಗ ಅಲ್ಲಿ ಪ್ರೇಮರಸದ ನದಿಯಲ್ಲದೆ ಇನ್ನಾವುದೂ ಗೋಚರವಾಗದು! ಮೌನವೇ ಅವರ ಭಾಷೆಯು! ಪರಸ್ಪರ ಆಲಿಂಗನದಿಂದ ತಮ್ಮ ಹೃದಯಗಳಲ್ಲಿರುವ ವಿಚಾರಗಳನ್ನು ಪರಸ್ಪರರಿಗೆ ಅರುಹುತ್ತಾರೆ! ತಾಯಿಯು ಮಗಳ ಕೋಮಲದೇಹ ಸ್ಪರ್ಶನದಿಂದ ಆನಂದದ ರುಚಿಯನ್ನು ಆಸ್ವಾದಿಸುತ್ತಾಳೆ!

ಆ ವಸತಿಯಲ್ಲಿ ಹದಿನೈದು ನಿಮಿಷಗಳ ವರೆಗೆ ಮೌನವೇ ಆವರಿಸಿದ್ದಿತು. ತಾಯಿಮಗಳಿಬ್ಬರೂ ತಮ್ಮ ಹರ್ಷವನ್ನು ಪರಸ್ಪರ ಆಲಿಂಗನ, ಮುದ್ದಾಟ ಇವುಗಳ ಮೂಲಕ ಪ್ರಕಟಿಸುವುದರಲ್ಲಿ ನಿರತರಾಗಿದ್ದರು. ಅನಂತರ:—

"ಕಂದಾ! ಇದುವರೆಗೆ ಎಲ್ಲಿದ್ದೆ?" ಎಂದಳು ರಾಣಿ.

"ಅಮ್ಮಾ, ದುಷ್ಟರ ಕರಗಳಲ್ಲಿ ಸಿಕ್ಕಿ ಬಿದ್ದಿದ್ದೆನು; ಆದರೆ ಈಶ್ವರ ಕೃಪೆಯಿಂದ ಪಾರಾಗಿ ಬಂದೆನು"

"ದುಷ್ಟರ ಕರಗಳಲ್ಲಿಯೇ!" ಎಂದು ಭಯವಿಸ್ಮಯಗಳನ್ನು ಸೂಚಿಸುತ್ತ ರಾಣಿಯು ನುಡಿದಳು.

"ಹೌದಮ್ಮಾ! ಆ ದಿನ ಸಂಜೆಯಲ್ಲಿ ಘಾತುಕರು ಉಪವನದಲ್ಲಿದ್ದ ನನ್ನನ್ನು ಬಂಧಿಸಿ ಒಯ್ದರು. ಅದೊಂದು ಕಾಡಿನಲ್ಲಿ ನನ್ನ ಚೀತ್ಕಾರವನ್ನು ಕೇಳಿ ರಕ್ಷಣೆಗಾಗಿ ಇಬ್ಬರು ತರುಣರು ಬರದಿದ್ದರೆ, ನನ್ನ ಗತಿಯೇನಾಗುತ್ತಿತ್ತೆಂಬುದು ಹೇಳಲು ಅಸಾಧ್ಯ!"

"ಕಂದಾ! ನಿನ್ನನ್ನು ರಕ್ಷಿಸಿದವರು ಯಾರು?"

"ಕುಳಿಂದ ರಾಜನಂದನ ಮತ್ತು ಅವನ ಗೆಳೆಯ" ಎಂದು ಚಂಪಕಮಾಲಿನಿಯು ತನ್ನ ಜನನಿಯೊಡನೆ ತನ್ನ ಕತೆಯನ್ನೆಲ್ಲ ಸವಿಸ್ತರವಾಗಿ ವಿವ

ರಿಸಿ ಹೇಳಿದಳು ಮಾತುಗಳ ಮಧ್ಯದಲ್ಲಿ ಚಂದ್ರಹಾಸನು ತನ್ನನ್ನು ರಕ್ಷಿಸುವುದಕ್ಕಾಗಿ ಅವನ ಜೀವವನ್ನು ಸಹ ವಿಪತ್ತಿಗೆ ಹೇಗೆ ಒಡ್ಡಿದನೆಂಬುದನ್ನು ಬಣ್ಣಿಸಲು ಅವಳು ಮರೆಯಲಿಲ್ಲ.

ರಾಜಕುಮಾರಿಯು ಅರಮನೆಗೆ ಬಂದ ವಾರ್ತೆಯು ಪ್ರಾಸಾದದಲ್ಲೆಲ್ಲ ಹಬ್ಬಿತು. ಇದುವರೆಗೆ ಶೋಕಸಾಗರದಲ್ಲಿ ಬಿದ್ದಿದ್ದ ಅರಮನೆಯು ಆನಂದವನ್ನು ತಾಳಿತು. ರಾಜನು ಮಗಳ ಆಗಮನವನ್ನು ಅರಿತನು. ಪಿತೃಹೃದಯವು ಆನಂದದಿಂದ ತುಂಬಿ ತುಳುಕಿತು. ಯಾವ ವಿಪತ್ತೂ ಇಲ್ಲದೆ ಮಗಳು ಹಿಂದಿರುಗಿ ಬಂದುದನ್ನು ಕಂಡು, ಆ ತಂದೆಯು ಈಶ್ವರನು ಭಕ್ತರ ಸಂಕಟಗಳನ್ನು ಪರಿಹರಿಸುವನೆಂಬ ಭಗದ್ವಚನವನ್ನು ನೆನೆದನು. ಅವನು ತನ್ನ ಆರಾಧನಾ ಗೃಹವನ್ನು ತ್ಯಜಿಸಿ ಅಂತಃಪುರಕ್ಕೆ ಗಮಿಸಿದನು. ಮಗಳನ್ನು ಕಂಡು ಹೃದಯವು ಆನಂದಸಾಗರದಲ್ಲಿ ಮುಳುಗಿತು. ಅವಳ ವಿನೋದನೆಯ ಕತೆಯನ್ನು ಕೇಳಿ ಹರ್ಷಿತನಾದನು.

"ಕುಳಿಂದ ರಾಜನಂದನನೆ! ನನ್ನ ಮಾಂಡಲಿಕನಿಗೊಬ್ಬ ಮಗನಿರುವನೆಂಬುದನ್ನು ನಾನು ಇದುವರೆಗೂ ಅರಿತಿರಲಿಲ್ಲವಲ್ಲ!" ಎಂದು ಸಕೌತುಕಭರಿತನಾಗಿ ಕುಂತಳೇಂದ್ರನು ನುಡಿದನು.

"ಅದೇನೊ ನನಗೆ ತಿಳಿಯದು. ಹೆಸರು ಚಂದ್ರಹಾಸನೆಂದು." ಅರುಣವರ್ಣವನ್ನು ತಾಳುತ್ತ ಈ ರೀತಿ ಅಂದಳು ರಾಜನಂದಿನಿ.

"ಅವನೆಲ್ಲಿ?" ಎಂದು ನುಡಿದು ರಾಜನು:—"ನಿನ್ನನ್ನು ವಿಪತ್ತುಗಳಿಂದ ರಕ್ಷಿಸಿದ ತರುಣನಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುವದು ನನ್ನ ಕರ್ತವ್ಯವಲ್ಲವೆ?"

"ಹೆಬ್ಬಾಗಿಲಿನಲ್ಲಿ ನಿಮ್ಮ ದರ್ಶನಕ್ಕಾಗಿ ಕಾದು ನಿಂತಿರುವರು."

"ಹಾಗೆ ಏನು?" ಎಂದು ನುಡಿದು, ಕುಂತಳೇಂದ್ರನು ಒಬ್ಬ ಭೃತ್ಯನನ್ನು ಅವರನ್ನು ಕರೆದುಕೊಂಡು ಬರುವುದಕ್ಕಾಗಿ ಆಜ್ಞಾಪಿಸಿದನು. ಭೃತ್ಯನು ಆಜ್ಞೆಯನ್ನು ನೆರವೇರಿಸಲು ತೆರಳಿದನು.

ಎರಡು ನಿಮಿಷಗಳಲ್ಲಿಯೇ ಇಬ್ಬರು ತರುಣರು ಬಂದು ಅರಸನಿಗೆ ನಮಸ್ಕರಿಸಿದರು. ಅರಸನು ಚಂದ್ರಹಾಸನಾರೆಂಬದನ್ನು ತಿಳಿಯಲು ಕುತೂಹಲನಾಗಿ ಅವರಿಬ್ಬರ ಮೋರೆಗಳನ್ನೂ ನೋಡುತ್ತ ನಿಂತನು. ಸ್ವಭಾವತಃ ವಾಚಾಲನಾದ ಸಾಗರಾಜನು ಅರಸನ ಮನಸ್ಸಿನಲ್ಲಿರುವುದೇನೆಂಬುದನ್ನು ಊಹಿಸಿ ತಿಳಿದುಕೊಂಡು ಹೇಳಿದನು. "ಮಹಾರಾಜರೇ! ಈತನೇ ನನ್ನ ಗೆಳೆಯನಾದ ಚಂದ್ರಹಾಸನು!"

“ಚಂದ್ರಹಾಸ! ಕುಳಿಂದಕನು ನಮಗೆ ನೀಡಿದ ಉಪಕಾರಗಳು ಅಷ್ಟ ಸ್ವಲ್ಪವಲ್ಲ; ಈಗಲೂ ದುಷ್ಟರ ಕರಗಳಿಂದ ನನ್ನ ಏಕಮಾತ್ರ ಪುತ್ರಿಯನ್ನು ನೀನು ರಕ್ಷಿಸಿದೆ. ಈ ಉಪಕಾರವನ್ನು ನಾನು ಹೇಗೆ ತೀರಿಸಲಿ!”

“ಮಹಾರಾಜರೇ, ಇದೊಂದು ಉಪಕಾರವಲ್ಲ; ತಮ್ಮ ಹಿತಕ್ಕಾಗಿ ನಾವು ದುಡಿಯುವದು ನಮ್ಮ ಧರ್ಮವಾಗಿದೆ. ಕಷ್ಟದಲ್ಲಿ ಸಿಲುಕಿದ ಹೆಂಗಸರನ್ನು ರಕ್ಷಿಸುವದು ಪ್ರತಿಯೊಬ್ಬ ಗಂಡಸಿನ ಕರ್ತವ್ಯವಾಗಿದೆ” ಎಂದು ಚಂದ್ರಹಾಸನು ತನ್ನ ವಿನಯವನ್ನು ಹೊರಪಸೂಸುತ್ತ ನುಡಿದನು.

“ಚಂದ್ರಹಾಸ! ನೀನು ಪರಾಕ್ರಮಶಾಲಿಯಾಗಿರುವಂತೆ ವಿನಯಶಾಲಿಯೂ ಆಗಿದ್ದೀಯೇ. ನಿನ್ನ ದೇಹಕ್ಕೆ ಬಂದೊದಗಿದ ವಿಪತ್ತನ್ನು ಸಹ ಲೆಕ್ಕಿಸದೆ ನೀನಾವ ರೀತಿ ಅವಳನ್ನು ರಕ್ಷಿಸಿದೆ ಎಂಬುದನ್ನು ನನ್ನ ಮಗಳ ಬಾಯಿಂದ ನಾನು ಕೇಳಿ ತಿಳಿದೆನು. ನಿನ್ನ ಗಾಯವು ವಾಸಿಯಾಯಿತೆಂದು ನಾನು ನಂಬುವೆನು” ಎಂದು ಚಂದ್ರಹಾಸನನ್ನು ಹೊಗಳುತ್ತ ಅರಸನು ನುಡಿದನು: “ಕುಳಿಂದಕನು ಕ್ಷೇಮದಲ್ಲಿರುವನೇ? ಆ ಗೆಳೆಯನು ನನ್ನ ಹಾಗೆಯೇ ತನ್ನ ಕಾಲುಗಳನ್ನು ವಾರ್ಧಕ್ಯದಲ್ಲಿಟ್ಟಿರಬಹುದು; ಆದರೆ ಅವನ ಹೆಸರನ್ನು ನೆಲೆನಿಲ್ಲಿಸಲು ನೀನಿರುವೆ; ಆದರೆ ಕುಂತಳ ರಾಜವಂಶದ ಹೆಸರನ್ನು ಹೇಳಿಸಲು ನನಗಾರೂ ಇಲ್ಲವಲ್ಲ!” ಎಂದು ತನ್ನ ವ್ಯಥೆಯನ್ನು ರಾಜನು ಬಹಿರಂಗಪಡಿಸಿದನು.

“ತಮ್ಮ ಕೃಪೆಯಿಂದ ಅವರೆಲ್ಲರೂ ಕ್ಷೇಮದಲ್ಲಿಯೇ ಇರುವರು.”

ಚಂದ್ರಹಾಸನ ಪೂರ್ವವೃತಾಂತವನ್ನು, ಕುಂತಳೇಂದ್ರನು ನಾಗರಾಜನ ಮುಖದಿಂದ ಕೇಳಿ ತಿಳಿದುಕೊಂಡನು. ರಾಜ್ಯಪಾಲನೆಗಾಗಿ ಚಂದ್ರಹಾಸನ ನೇತೃತ್ವದಲ್ಲಿ ಕುಳಿಂದಕನು ಒಂದು ದಂಡನ್ನು ಕಳುಹಿಸಿರುವನೆಂದು ತಿಳಿಯಲು, ರಾಜನು ಮಾಂಡಲಿಕನನ್ನು ನೂರು ಬಾರಿ ಹೊಗಳಿದನು. ದುಷ್ಟಬುದ್ಧಿಯ ಚಾತುರ್ಯವನ್ನು ವಿವರಿಸಿ, ತಾನು ವಿಶ್ರಾಮಪಡೆಯುವದಕ್ಕಾಗಿ ರಾಜಕಾರಣದಿಂದ ದೂರ ನಿಂತಿರುವ ಸಂಗತಿಯನ್ನೂ ಕುಂತಳೇಂದ್ರನು ಆ ತರುಣರಿಗೆ ತಿಳಿಸಿದನು.

“ಚಂದ್ರಹಾಸ ನೀನು ಅನ್ಯನಲ್ಲ; ಕುಳಿಂದಕನು ನನಗೆ ಸ್ವಂತ ಸಹೋದರನ ಹಾಗೆ! ಈ ರಾಜಗೃಹದಲ್ಲಿ ನಾಲ್ಕಾರು ದಿನ ವಿಶ್ರಾಂತಿಯನ್ನು ಪಡೆದು ಯುದ್ಧರಂಗಕ್ಕೆ ತೆರಳಬಹುದು. ಶತ್ರುಗಳ ಆಘಾತದಿಂದ ಬಳಲಿದ ನಿನಗೆ ವಿಶ್ರಾಮವು ಅತ್ಯಾವಶ್ಯಕವಾಗಿದೆ” ಎಂದು ರಾಜನು ನುಡಿದನು.

ರಾಜಗೃಹದಲ್ಲಿ ಅರಸನು ಚಂದ್ರಹಾಸನನ್ನೂ ಅವನ ಗೆಳೆಯನನ್ನೂ

ಆದರೋಪಚಾರಗಳಿಂದ ಸತ್ಕರಿಸಿದನು. ಚಂದ್ರಹಾಸನ ಧೀರತೆಯನ್ನು ಕಂಡು ರಾಜನಿಗೆ ಆ ತರುಣನಲ್ಲಿ ಅತ್ಯಂತ ಅಭಿಮಾನವು ಜನಿಸಿತು. ಇದಲ್ಲದೆ, ಚಂದ್ರಹಾಸನ ಶಾರೀರಕ ಪ್ರಕೃತಿಯೇ ಜನರನ್ನು ಆಕರ್ಷಿಸತಕ್ಕದಾಗಿದ್ದಿತು.

ಚಂದ್ರಹಾಸನು ಅರಮನೆಯ ಆತಿಥ್ಯವನ್ನು ಹೊಂದಿದನು; ರಾಜಧಾನಿಯ ವಿವಿಧ ಸೊಬಗುಗಳನ್ನು ಕಂಡು ಆನಂದವನ್ನು ಹೊಂದಿದನು.

ಎಂದಿನಂತೆ ಅರಸನ ಕ್ಷೇಮಸಮಾಚಾರವನ್ನು ಅರಿತುಕೊಳ್ಳಲು ಅಮಾತ್ಯನಂದನನಾದ ಮದನಕುಮಾರನು ಬಂದನು ಅರಮನೆಗೆ. ಅರಮನೆಯಲ್ಲಿ ತನಗಪರಿಚಿತರಾದ ಇಬ್ಬರು ತರುಣರಿರುವುದನ್ನು ಕಂಡು ಅವನ ಹೃದಯದಲ್ಲಿ ವಿಸ್ಮಯವು ಆವಿರ್ಭವಿಸಿತು. ಇದಲ್ಲದೆ ರಾಜನ ವದನದಲ್ಲಿ ಹರ್ಷವು ತುಳುಕುತ್ತಿರುವುದನ್ನು ಕಂಡು ಮದನನ ಮನಸ್ಸು ಇನ್ನಷ್ಟು ಆಶ್ಚರ್ಯವನ್ನು ಹೊಂದಿತು. ಇದಕ್ಕೆಲ್ಲ ಕಾರಣವೇನು? ಎಂಬುದಾಗಿ ಅವನು ತನ್ನ ಮನಸ್ಸಿನಲ್ಲಿಯೇ ಆಲೋಚಿಸತೊಡಗಿದನು.

"ಅಮಾತ್ಯನಂದನಾ!" ಎಂದು ರಾಜನು ಹೇಳಿದನು: "ನಮ್ಮ ಚಾರರು ಇನ್ನು ಅಷ್ಟು ತೊಂದರೆಯನ್ನು ತೆಗೆದುಕೊಳ್ಳಬೇಕಾದುದಿಲ್ಲ."

"ಏಕೆ ಮಹಾಪ್ರಭೂ?"

"ನನ್ನ ಮುದ್ದು ಕುವರಿಯು ಪುನಃ ಲಭಿಸಿದಳು."

ಈ ಮಾತುಗಳನ್ನು ಕೇಳಿ ಮದನನು ಚಕಿತನಾದನು! ಒಂದು ನಿರಾಶೆಯ ಭಾವವು ಆ ಮುಖದಲ್ಲಿ ಮಿಂಚಿನಂತೆ ಹೊಳೆದಿತು; ಆದರೆ ಆ ಚದುರನು ಆ ಭಾವವನ್ನು ಬೇಗನೆ ಅಡಗಿಸಿಕೊಂಡು, ಹರ್ಷವನ್ನು ತಾಳಿದವನ ಹಾಗೆ ನಟಿಸಿದನು. ಆದರೂ ಚಂದ್ರಹಾಸನ ತೀಕ್ಷ್ಣವಾದ ನೇತ್ರಗಳು ಮಂತ್ರಿನಂದನನ ಮುಖದಲ್ಲಿ ತೋರಿದ ಭಾವವನ್ನು ಕಂಡುಹಿಡಿದುವು. ತಂದೆಗೆ ಯೋಗ್ಯನಾದ ಮಗನೇ ಸರಿ! ಎಂದು ಚಂದ್ರಹಾಸನು ತನ್ನೊಳಗೆ ನುಡಿದುಕೊಂಡನು. ಚಂಪೆಯ ಆಗಮನ ವಾರ್ತೆಯನ್ನು ಉಸುರಿದಾಗ ಅಮಾತ್ಯನಂದನನಲ್ಲಿ ತೋರಿದ ನಿರಾಶೆಯು, ರಾಜಕುಮಾರಿಯ ಅಪಹರಣದಲ್ಲಿ ಮದನನ ಕೈವಾಡ ಇರಬಹುದೇ? ಎಂಬ ಶಂಕೆಯು ಚಂದ್ರಹಾಸನ ಮನೋಪಟಲದಲ್ಲಿ ಹೊಳೆಯುವಂತೆ ಮಾಡಿತು.

ರಾಜನು ಮದನನಿಗೆ ಚಂಪೆಯನ್ನು ಘಾತುಕರ ಕರಗಳಿಂದ ರಕ್ಷಿಸಿದವನು ಚಂದ್ರಹಾಸನು ಎಂಬುದನ್ನು ಸವಿಸ್ತರವಾಗಿ ತಿಳುಹಿದನು ಅಮಾತ್ಯನಂದನನು ಚಂದ್ರಹಾಸನ ಸಮೀಪಕ್ಕೆ ಬಂದು ಅವನ ಧೀರತೆಯನ್ನು

ಹೊಗಳಿ ವಂದಿಸಿದನು. "ತಮ್ಮಂಥ ಪರಾಕ್ರಮ ಶಾಲಿಗಳ ಪರಿಚಯವನ್ನು ಹೊಂದಿದ್ದರಿಂದ ನಾನು ಕೃತಾರ್ಥನಾದೆನು."

"ಅಮಾತ್ಯನಂದನರ ಪರಿಚಯವು ಸಿಕ್ಕಿದುದರಿಂದ ನಾನೂ ಕೃತಾರ್ಥನೇ ಸರಿ. ತಮ್ಮ ಪೂಜ್ಯ ಪಿತೃಗಳು ಬಡಗಲು ದಿಕ್ಕಿನಿಂದ ಹಿಂದಿರುಗಿ ಬರಲಿಲ್ಲವೆ?" ಎಂದು ಅಮಾತ್ಯ ಕುಮಾರನೊಡನೆ ಚಂದ್ರಹಾಸನು ನುಡಿದನು.

"ಇಲ್ಲ; ಅವರು ಹಿಂದಿರುಗಿ ಬರುವಾಗ ಒಂದು ಪಕ್ಷವಾಗಬಹುದು; ರಾಜ್ಯಕಾರ್ಯಗಳನ್ನು ನಾನೇ ನಿರ್ವಹಿಸುತ್ತಿರುವೆನು. ನೀವು ರಾಜನಂದಿನಿಯನ್ನು ಅಪಹರಿಸಿದ ಘಾತುಕರನ್ನು ಸೆರೆಹಿಡಿದಿರುವಂತೆ ತೋರುತ್ತದೆ. ಅವರಿಗೆ ಯೋಗ್ಯ ರೀತಿಯ ಶಾಸನವನ್ನು ನೀಡಲು ಮಹಾಜರಲ್ಲಿ ಅಪ್ಪಣೆಯನ್ನು ಬೇಡುವೆನು."

"ಅಮಾತ್ಯನಂದನಾ! ಆ ದುಷ್ಟರಿಗೆ ಯೋಗ್ಯವಾದ ಶಿಕ್ಷೆಯನ್ನು ನೀಡತಕ್ಕದ್ದು. ಈ ರೀತಿಯ ಅನಿಷ್ಟಸಂಭವಗಳು ರಾಜ್ಯಶಾನದಲ್ಲಿ ಅಧಿಕಾರಿಗಳಿಗಿರುವ ಅಪ್ರಾಪ್ತತೆಯನ್ನು ಸೂಚಿಸುತ್ತಲಿರುವವು. ದುಷ್ಟರನ್ನು ಕ್ರೂರ ರೀತಿಯಲ್ಲಿ ಶಿಕ್ಷಿಸತಕ್ಕದ್ದು." ಎಂದು ಮಹಾರಾಜನು ಅಮಾತ್ಯನಂದನನಿಗೆ ಯೋಗ್ಯ ರೀತಿಯಲ್ಲಿ ನಿರ್ದೇಶವನ್ನು ನೀಡಿದನು.

"ಮಹಾರಾಜರೇ, ಸರಿಯಾಗಿ ನೋಡಿಕೊಳ್ಳುವೆನು; ಮತ್ತೊಂದು ಪ್ರಧಾನ ವಾರ್ತೆಯನ್ನು ಉಸುರುವುದಕ್ಕಾಗಿ ಬಂದಿರುವೆನು. ಪೂರ್ವದಿಕ್ಕಿನಿಂದ ಬರುತ್ತಿರುವ ಲಾಟರ ದಂಡನ್ನು ಎದುರಿಸಲು ಮಾರ್ತಂಡವರ್ಮರು ತೆರಳಿರುವರು. ತೆಂಕಣದಿಂದಲೂ ಶತ್ರುಗಳು ಆಕ್ರಮಿಸಲು ಹೊರಟಿರುವರು ಎಂಬ ವಾರ್ತೆಯನ್ನು ಈ ದಿನವೇ ನಮ್ಮ ಚಾರರ ಮೂಲಕ ತಿಳಿದೆನು."

"ಆ ಭಾಗದಲ್ಲಿ ಬರುವ ಶತ್ರುಗಳನ್ನು ತಡೆಯುವದಕ್ಕಾಗಿ ದಂಡನ್ನು ಕಳುಹಿಸತಕ್ಕದು"

ಬಳಿಕ ಚಂದ್ರಹಾಸನೊಡನೆ ಘಾತುಕರನ್ನು ನೋಡುವುದಕ್ಕಾಗಿ ಅಮಾತ್ಯನಂದನನು ತೆರಳಿದನು. ಚಂದ್ರಹಾಸನನ್ನು ನಾಗರಾಜನು ಹಿಂಬಾಲಿಸಿದನೆಂದು ಇಲ್ಲಿ ಬೇರೆ ಹೇಳಬೇಕಾಗಿಲ್ಲ. ಕುಳಿಂದದ ಭಟರು ರಾಜಾಜ್ಞೆಯಂತೆ ತಮ್ಮ ವಶದಲ್ಲಿರುವ ದುಷ್ಟರನ್ನು ಕುಂತಳದ ಭಟರ ವಶಕ್ಕೆ ಒಪ್ಪಿಸಿದರು. ಚಂದ್ರಹಾಸನು ಆ ದುಷ್ಟರನ್ನು ಎಷ್ಟು ವಿಧವಾಗಿ ಪ್ರಶ್ನೆ ಮಾಡಿದ್ದರೂ ತಾವು ಯಾರೆಂಬುದನ್ನೂ, ಏತಕ್ಕಾಗಿ ರಾಜಕುಮಾರಿಯನ್ನು ಕದ್ದರೆಂಬುದನ್ನೂ ತಿಳಿಸಲಿಲ್ಲ ಅವರು ಚಂದ್ರಹಾಸನ ನಾಲ್ಕು ಉಪಾಯಗಳಿಗೂ ಮಣಿ

ಯಲಿಲ್ಲ; ಮತ್ತು ತಮ್ಮ ಹೆಸರುಗಳನ್ನಾಗಲೀ ಊರನ್ನಾಗಲೀ ಸೂಚಿಸಲೂ ಇಲ್ಲ. ಅವರ ಈ ವರ್ತನೆಯು ಅವರು ಯಾವುದೋ ಒಂದು ಪ್ರಬಲ ವ್ಯಕ್ತಿಯ ಸಹಾಯದಿಂದ ವರ್ತಿಸಿದರೆಂದೂ, ಆ ಸಹಾಯವನ್ನು ನಂಬಿ ಅವರು ನಿರ್ಭಯರಾಗಿರುವರೆಂದೂ ಚಂದ್ರಹಾಸನು ಊಹಿಸಿದನು.

ಘಾತುಕರನ್ನು ನೋಡಿದೊಡನೆಯೇ ಮದನಕುಮಾರನ ಮೊಗವು ಬಿಳುಪು ವರ್ಣವನ್ನು ತಾಳಿತು. ಮದನನ ಕೈಕಾಲುಗಳು ಕಂಪಿಸುತ್ತಿರುವದನ್ನು ಚಂದ್ರಹಾಸನು ನೋಡಿದನು. ಘಾತುಕರ ದರ್ಶನದಿಂದ ಮದನನಲ್ಲಿ ಭಯವು ಸಂಜಾತವಾದಂತೆ ದೃಗ್ಗೋಚರವಾಯಿತು. ಇದು ಕುಳಿಂದ ರಾಜಕುಮಾರನಿಗೆ ಒಂದು ಆಶ್ಚರ್ಯದ ಸಂಗತಿಯಾಗಿ ಕಂಡು ಬಂದಿತು. ಮರುಕ್ಷಣದಲ್ಲಿಯೇ ಮದನನು ತನ್ನಂತರಂಗದ ಭಾವನೆಗಳನ್ನೆಲ್ಲ ಅಡಗಿಸಿದನು; ಹಾಗು ಗೌರವಯುಕ್ತವಾದ ದೃಷ್ಟಿಯಲ್ಲಿ ಘಾತುಕರನ್ನು ನೋಡಿದನು.

"ನಿಮ್ಮ ಹೆಸರೇನು?" ಎಂದನು ಅಮಾತ್ಯನಂದನನು.

ಘಾತುಕರು ಮಾತನಾಡಲಿಲ್ಲ; ಅವರು ಪರಿಪೂರ್ಣವಾದ ದೃಷ್ಟಿಯಲ್ಲಿ ಮಂತ್ರಿನಂದನನ ಮೊಗವನ್ನು ನೋಡಿದರು. ಅವರನ್ನು ನೋಡುತ್ತ ಮದನನು ಒಮ್ಮೆ ತನ್ನ ಹುಬ್ಬನ್ನು ಹಾರಿಸಿದುದನ್ನು ನಾಗರಾಜನು ಕಾಣದೆ ಇರಲಿಲ್ಲ.

"ನೀವು ಯಾರು?" ಎಂದು ಅಧಿಕಾರಯುತವಾದ ವಾಣಿಯಲ್ಲಿ ಅಮಾತ್ಯನಂದನನು ಪುನಃ ಪ್ರಶ್ನಿಸಿದನು; ಆದರೆ ಅಪರಾಧಿಗಳು ಅದಕ್ಕೆ ಯಾವ ಪ್ರತ್ಯುತ್ತರವನ್ನೂ ನೀಡಲಿಲ್ಲ.

"ನೀವೆಷ್ಟು ಮಹತ್ವವಾದ ಅಪರಾಧವನ್ನು ಮಾಡಿರುವಿರೆಂಬುದನ್ನು ಬಲ್ಲಿರಾ? ಸತ್ಯವನ್ನು ಹೇಳಿದರೆ, ನಿಮಗೆ ದೊರಕುವ ದಂಡನೆಯು ಲಘೂಕರಿಸುವದು."

"ನೀವು ಕೊಡುವ ದಂಡನೆಯನ್ನು ಅನುಭವಿಸಲು ಸಿದ್ಧರಾಗಿಯೇ ಇರುವೆವು." ಅಪರಾಧಿಗಳು ಉಸುರಿದರು.

'ನಿಮ್ಮ ಗರ್ವಭಂಗವನ್ನು ಮಾಡುವೆನು.' ಎಂದು ಅಪರಾಧಿಗಳೊಡನೆ ನುಡಿದ ನಂತರ, ಮದನನು ಚಂದ್ರಹಾಸನ ಕಡೆಗೆ ತಿರುಗಿ ಹೇಳಿದನು: "ನೋಡಿದಿರಾ ಈ ನೀಚರ ಉದ್ಧಟತನವನ್ನು! ಇವರು ಕಾರಾಗೃಹಕ್ಕೆ ತೆರಳಲಿ. ನಂತರ ಆಲೋಚಿಸೋಣ."

ಮಂತ್ರಿಕುಮಾರನ ನಿರ್ದೇಶದಂತೆ ನಾಲ್ಕೈದು ಮಂದಿ ಭಟರು ಶೃಂಖಲಾಭರಣಶೋಭಿತರಾದ ಅಪರಾಧಿಗಳನ್ನು ಕಾರಾಗೃಹಕ್ಕೆ ಒಯ್ದರು. ಮದನ

ಕುಮಾರನು ಚಂದ್ರಹಾಸನೊಡನೆ ಬೀದಿಯಲ್ಲಿ ಪ್ರವೇಶಿಸಿದನು.

"ರಾಜನಂದನಾ, ತಾವು ಬಹು ಧೀರರು! ತಾವು ತಮ್ಮ ಪ್ರಾಣಾಪಾಯುವನ್ನು ಸಹ ಲೆಕ್ಕಿಸದೆ, ರಾಜಕುಮಾರಿಯನ್ನು ರಕ್ಷಿಸಲು ಕಾದಾಡಿದಿರಿ, ಎಂಬದನ್ನು ಕೇಳಿ, ತಮ್ಮನ್ನು ಕುರಿತು ನನಗಿರುವ ಅಭಿಮಾನವು ಹೆಚ್ಚುತ್ತಲಿರುವುದು."

"ಅಮಾತ್ಯನಂದನಾ, ಈ ರೀತಿ ಹೊಗಳಿಕೆಗಳ ಭಾರವನ್ನು ನನ್ನ ಮೇಲೆ ಹೊರಿಸಬಾರದಾಗಿ ನನ್ನ ಬೇಡಿಕೆಯು ಮನುಷ್ಯ ಜೀವನದ ಪ್ರಧಾನೋದ್ದೇಶವು ಅನ್ಯರ ಸಂಕಟನಿವಾರಣೆಯಾಗಿದೆ. ಆ ರೀತಿ ವರ್ತಿಸುವವನು ಅವನ ಕರ್ತವ್ಯವನ್ನು ಅವನು ಮಾಡಿದಂತಾಗುವದು. ಅದಕ್ಕಾಗಿ ಹೊಗಳಬೇಕಾದ ಅವಶ್ಯಕತೆಯೆಲ್ಲಿಯದು?"

"ಕುಳಿಂದಕುಮಾರರೆ, ಇದು ತಮ್ಮ ಘನತೆಯನ್ನು ಸೂಚಿಸುವದು."

ಈ ರೀತಿ ಹಲವು ಮಾತುಗಳನ್ನಾಡುತ್ತ, ಅವರು ಮೂವರೂ ಬೀದಿಯಲ್ಲಿ ನಡೆದರು. ಚಂದ್ರಹಾಸನ ಮನಸ್ಸಿನಲ್ಲಿ ಸಂಶಯ ಪಿಶಾಚವು ಕುಣಿಯುತ್ತಲಿತ್ತು. ರಾಜಮಂದಿರದಲ್ಲಿ ರಾಜಕುಮಾರಿಯು ಆಗಮನ ವಾರ್ತೆ ಕೇಳಿ ಮದನನ ಮುಖನೇಕೆ ಬಿಳುಪೇರಿತೆಂದು ಚಂದ್ರಹಾಸನು ತನ್ನ ಮನಸ್ಸಿನಲ್ಲಿಯೇ ಚಿಂತಿಸಲು ಪ್ರಾರಂಭಿಸಿದನು; ಆದರೆ ಸರಿಯಾದ ಕಾರಣಗಳು ಅವನಿಗೆ ಹೊಳೆಯಲಿಲ್ಲ. ರಾಜಕುಮಾರಿಯು ಅಪಹರಣೆಯಲ್ಲಿ ಮಂತ್ರಿನಂದನನ ಕೈವಾಡವಿರುವದೇ? ಅತ್ಯಂತ ಸ್ವಾಮಿನಿಷ್ಠನೆಂದೂ ಬುದ್ಧಿಶಾಲಿಯೆಂದೂ ಹೆಸರು ಪಡೆದ ದುಷ್ಟಬುದ್ಧಿಯು ಮಗನು ಇಂಥ ಹೀನ ಕೃತ್ಯಗಳಿಗೆ ಕೈಹಾಕುವದು ಹೇಗೆ? ರಾಜನ ವಿಶ್ವಾಸಕ್ಕೆ ಪಾತ್ರೀಭವಿಸಿ, ರಾಜಕಾರಣದಲ್ಲಿ ಪ್ರಧಾನ ಭಾಗವನ್ನು ವಹಿಸುತ್ತಿರುವ ಮದನಕುಮಾರನು ಈ ರೀತಿಯ ನಿಕೃಷ್ಟ ನರಜೀವಿಯೆಂದು ಭಾವಿಸಲು ಚಂದ್ರಹಾಸನ ಮಹಾಮನಸ್ಕತೆಯು ಒಪ್ಪಲಿಲ್ಲ. ಅವನು ಹೆಚ್ಚು ಮಾತನಾಡದೆ ಅಮಾತ್ಯನಂದನನನ್ನು ಹಿಂಬಾಲಿಸಿದನು.

"ಕುಳಿಂದನಂದನಾ! ನನ್ನ ವಸತಿಯಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿ ಅನಂತರ ತೆರಳಬಹುದಲ್ಲವೇ?"

"ತಮ್ಮ ಇಚ್ಛೆಯಂತೆಯೇ ಆಗಲಿ!"

ಅಮಾತ್ಯನಂದನನು ತನ್ನಿಬ್ಬರು ಸಂಗಾತಿಗಳೊಡನೆ ತನ್ನ ಗೃಹದಲ್ಲಿ ಪ್ರವೇಶಿಸಿದನು. ಮನೆಯ ಅಂತರ್ಭಾಗದಿಂದ ಒಂದು ಮೋಹನ ಗಾನವು ಕೇಳಬಂದಿತು. ಅದು ಹೆಂಗಸಿನ ಕಂಠಸ್ವರವಾಗಿದ್ದಿತು. ಅದು ಯಾರದಿರ

ಬಹುದೆಂದು ಆಲೋಚಿಸುತ್ತ, ಮನೆಯ ಮುಂದಿನ ಕೋಣೆಯಲ್ಲಿ ಚಂದ್ರ ಹಾಸನು ಕುಳಿತುಕೊಂಡನು.

ಚಂದ್ರಹಾಸನು ಮಂತ್ರಿನಂದನನೊಡನೆ ಮಾತಾಡುತ್ತ ರಾಜಕಾರಣ ವನ್ನು ಕುರಿತು ಪ್ರಸ್ತಾಪಿಸಲು ಪ್ರಾರಂಭಿಸಿದನು: "ಲಾಟರ ದಂಡು ಪ್ರಬಲ ವಾದುದೇ?" ಎಂದು.

"ಮಹತ್ತಾದ ಸೈನ್ಯಗಳೊಂದಿಗೆ ನಮ್ಮ ನಾಡಿನ ಗಡಿಗಳನ್ನು ಅವರು ಅತಿಕ್ರಮಿಸಲು ನಿರ್ಧರಿಸಿರುವಂತೆ ತಿಳಿದು ಬಂದಿದೆ. ಇದಲ್ಲದೆ ಬಡಗು ದಿಕ್ಕಿನ ಮಾಂಡಲಿಕರು ಲಾಟರಿಗೆ ರಹಸ್ಯವಾಗಿ ಸಹಾಯ-ಸಲಕರಣೆಗಳನ್ನು ನೀಡುತ್ತಿರುವರಂತೆ. ಆ ಸಂಗತಿಯನ್ನು ಕುರಿತು ಹೆಚ್ಚಿನ ಮಾಹಿತಿಗಳನ್ನು ಪಡೆಯುವದಕ್ಕಾಗಿ ನಮ್ಮ ಪೂಜ್ಯ ತಂದೆಯವರೇ ಆ ಪ್ರದೇಶಕ್ಕೆ ಗಮಿಸಿರು ವರು. ಭೇದೋಪಾಯಗಳಿಂದ ಶತ್ರುಗಳನ್ನು ಪರಾಜಯಗೊಳಿಸಿ ಜೀವ ಹಾನಿಗೆ ಎಡೆಗೊಡದೆ ಕಾರ್ಯವನ್ನು ನಿರ್ವಹಿಸಬೇಕೆಂಬುದೇ ನಮ್ಮ ಉದ್ದೇ ಶವು; ಆದರೆ ಆ ತಂತ್ರದಲ್ಲೇ ಮಾತ್ರ ನಾವು ನಂಬಿಕೆಯನ್ನು ಇಟ್ಟಿರುವದಿಲ್ಲ; ಸಂಗ್ರಾಮಕ್ಕೂ ಸಿದ್ಧರಾಗಿಯೇ ಇದ್ದೇವೆ. ಮೊನ್ನೆ ತಾನೇ ನಮ್ಮ ದಂಡುಗಳಲ್ಲಿ ಪ್ರಧಾನ ಭಾಗವು ಮಾರ್ತಂಡ ವರ್ಮರ ನೇತೃತ್ವದಲ್ಲಿ ಸಮರಭೂಮಿಗೆ ತೆರ ಳಿತು. ನಿಮ್ಮ ಸೈನ್ಯಗಳಾದರೂ ಶತ್ರುಗಳನ್ನು ಎದುರಿಸಲು ತೆಂಕಣ ದಿಕ್ಕಿಗೆ ತೆರಳತಕ್ಕುದು."

ಈ ಸಂದರ್ಭದಲ್ಲಿ ದುಷ್ಟ ಬುದ್ಧಿಯು ಕುಳಿಂದ ನಗರದಲ್ಲಿ ಮದನ ಕುಮಾರನಿಗೆ ಕೊಡುವದಕ್ಕಾಗಿ ನೀಡಿದ್ದ ಓಲೆಯ ನೆನಪು ಚಂದ್ರಹಾಸನಿಗೆ ಬಂದಿತು. ಅವನು ಅದನ್ನು ತೆಗೆದು "ತಮ್ಮ ಪೂಜ್ಯ ತಂದೆಯವರು ತಮಗೆ ಈ ಪತ್ರವನ್ನು ನೀಡಬೇಕಾಗಿ ಕೊಟ್ಟಿದ್ದರು; ಆದರೆ ಇದುವರೆಗೆ ಅದನ್ನು ನಾನು ಮರೆತಿದ್ದೆನು" ಎಂದು ನುಡಿದು, ಪತ್ರವನ್ನು ಮದನಕುಮಾರನ ಕರ ಗಳಲ್ಲಿ ನೀಡಿದನು. ಅಮಾತ್ಯನಂದನನು ಪತ್ರವನ್ನು ಓದಿ ಆಶ್ಚರ್ಯಭರಿತ ನಾಗಿ ಚಂದ್ರಹಾಸನ ಮೊಗದೆಡೆಗೆ ಒಂದು ಬಾರಿ ನೋಡಿದನು. ಪತ್ರದಲ್ಲಿ ಲಿಖಿತವಾದ ಸಂಗತಿಗಳು ಯಾವುವು? ಎಂಬುದು ಹೇಳಲಾಗುವದಿಲ್ಲ; ಆದರೆ ಅವು ಚಂದ್ರಹಾಸನನ್ನು ಸಂಬಂಧಿಸಿದವು ಎಂಬುದು ಮಾತ್ರ ನಿರ್ವಿವಾದವು.

ಪ್ರಸನ್ನತೆಯನ್ನು ಹೊಂದಿದವನಂತೆ ನಟಿಸುತ್ತಾ, ಮದನನು ಹೇಳಿ ದನು. "ತಾವು ಧೀರರಿರುವಿರೆಂದೂ, ತಮಗೆ ಬೇಕಾದ ಸುಖ ಸೌಕರ್ಯ ಗಳನ್ನು ಒದಗಿಸಿಕೊಡಬೇಕೆಂದೂ ಅವರು ಬರೆದಿದ್ದಾರೆ."

ಆದರೆ ಆ ಕಾಗದದಲ್ಲಿ ಅದು ಮಾತ್ರವಲ್ಲ ಇರುವದೆಂದೂ, ತನ್ನನ್ನು

ಸಂಬಂಧಿಸಿದ ಯಾವದೋ ಒಂದು ಮಹತ್ವದ ಸಂಗತಿಯು ಅದರಲ್ಲಿದೆ ಯೆಂದೂ, ತನ್ನಿಂದ ಆ ಸಂಗತಿಯನ್ನು ಮುಚ್ಚು ಮರೆ ಮಾಡುವುದಕ್ಕಾಗಿ ಮದನನು ಈ ರೀತಿ ನುಡಿದನೆಂದೂ, ಮದನನ ಕಣ್ಣುಗಳಲ್ಲಿ ಹೊಳೆಯುತ್ತಿ ರುವ ಕಾಪಟ್ಯದ ಮೂಲಕ ಚಂದ್ರಹಾಸನು ಗ್ರಹಿಸಿಕೊಂಡನು. ಬಹುಶಃ ತನ್ನನ್ನು ವಿಪತ್ತುಗಳಿಗೆ ದೂಡುವದಾಗಿರಬಹುದೇ ಇವರ ಉದ್ದೇಶವೆಂದು ಅವನು ಸ್ವಲ್ಪ ಭಯವನ್ನೂ ಹೊಂದಿದನು; ಆದರೆ ನಾನು ನೀತಿ-ನ್ಯಾಯಗಳ ಪಥದಲ್ಲಿ ಸಂಚರಿಸಿದರೆ, ಯಾವ ವಿಪತ್ತುಗಳೂ ತನ್ನನ್ನು ಸ್ಪರ್ಶಿಸಲಾರವು ಎಂದು ಆ ತರುಣನು ಧೈರ್ಯವನ್ನು ತಾಳಿದನು.

"ತಾವು ದಂಡಿನೊಡನೆ ತೆಂಕಣದಿಕ್ಕಿಗೆ ಯಾವಾಗ ತೆರಳುವಿರಿ?" ಎಂದನು ಅಮಾತ್ಯಸುತನು.

"ನಾನು ಯಾವಾಗಲೂ ಸಿದ್ಧನಾಗಿಯೇ ಇರುವೆನು; ಆದರೆ ರಾಜನಂ ದಿನಿಯನ್ನು ದುಷ್ಟರ ಕರಗಳಿಂದ ರಕ್ಷಿಸುವ ಸಂದರ್ಭದಲ್ಲಿ ಸ್ವಲ್ಪ ಆಘಾತವು ನನಗೆ ಲಭಿಸಿತು ಆ ಯಾತನೆಯಿಂದ ನಾನಿನ್ನೂ ವಿಮುಕ್ತನಾಗಿರುವದಿಲ್ಲ. ನಾಲ್ಕಾರು ದಿನಗಳ ವಿಶ್ರಾಮವು ನನಗೆ ಅತ್ಯಾವಶ್ಯಕವಾಗಿದೆ." ಎಂದು ನುಡಿದು ಚಂದ್ರಹಾಸನು ತನ್ನ ಭುಜದ ಮೇಲೆ ನಿಂತಿರುವ ಗಾಯವನ್ನು ಮದನಕುಮಾರನಿಗೆ ತೋರಿಸಿದನು.

ಗಾಯವನ್ನು ನೋಡಿ ಅಮಾತ್ಯನಂದನನು ಹೇಳಿದನು: "ತಾವು ತೀವ್ರ ವಾದ ಯಾತನೆಯನ್ನು ಅನುಭವಿಸುತ್ತಿರುವಿರಿ. ಇಂಥ ಸಂದರ್ಭದಲ್ಲಿ ತಮ್ಮ ನ್ನು ಯುದ್ಧರಂಗಕ್ಕೆ ತೆರಳಲು ನಿರ್ಬಂಧಿಸಲಾರೆನು. ತಾವು ನಾಲ್ಕಾರು ದಿನ ಗಳ ಮಟ್ಟಿಗೆ ವಿಶ್ರಾಂತಿಯನ್ನು ಪಡೆದು ಶಾರೀರಿಕ ಸ್ಥಿತಿಯನ್ನು ಸುಧಾರಿಸಿ ಕೊಳ್ಳುವುದು ಅತ್ಯಾವಶ್ಯಕವಾಗಿದೆ" ಎಂದು ಚಂದ್ರಹಾಸನಲ್ಲ ತನಗಿರುವ ಸಹಾನುಭೂತಿಯನ್ನು ವ್ಯಕ್ತಪಡಿಸಿದನು.

ಈ ಮೂವರೂ ತರುಣರು ಸಂಭಾಷಿಸುತ್ತಿರುವದನ್ನು ಅಮಾತ್ಯನ ಮನೆಯ ಉಪ್ಪರಿಗೆಯ ಮೇಲೆ ನಿಂತು ಓರ್ವ ಯುವತಿಯು ನೋಡುತ್ತಿದ್ದಳು. ಅವಳು ಅಸಾಮಾನ್ಯ ರೂಪವತಿಯಲ್ಲದಿದ್ದರೂ, ಸೌಂದರ್ಯಶಾಲಿನಿಯಾಗಿದ್ದ ಳೆಂದು ಹೇಳಬಹುದು. ಹೊಳೆಯುತ್ತಿರುವ ಆ ನೇತ್ರಗಳು ಅವಳು ಓರ್ವ ಅಸಾಮಾನ್ಯ ಮನಃಶಕ್ತಿಯುಳ್ಳ ತರುಣಿಯಾಗಿರುವಳೆಂಬುವದನ್ನು ಸೂಚಿಸು ತ್ತಿದ್ದವು. ಅವಳ ಪ್ರಕಾಶಿಸುತ್ತಿರುವ ಮುಖಮಂಡಲವು ಅವಳು ಅತ್ಯಂತ ಸದಾಚಾರನಿಷ್ಠಳು ಎಂದು ನುಡಿಯುತ್ತಿದ್ದವು. ವಿಶಾಲವಾದ ಲಲಾಟವು ಅವಳ ಕಾಂತಿಯನ್ನು ಹೆಚ್ಚಿಸುತ್ತಲಿದ್ದಿತು.

ಈ ತರುಣಿಯು ಅಮಾತ್ಯನಂದನನೊಡನೆ ಚಂದ್ರಹಾಸನು ನಡೆಯಿಸುತ್ತಿರುವ ಸಂಭಾಷಣೆಯನ್ನು ಅತ್ಯಾಸಕ್ತಿಯಿಂದ ಶ್ರವಿಸುತ್ತಲಿದ್ದಳು. ಚಂದ್ರಹಾಸನನ್ನು ಅವಳು ತನ್ನ ಕಣ್ಣುಗಳ ರೆಪ್ಪೆಯನ್ನು ಮುಚ್ಚದೆ ನೋಡುತ್ತಲಿದ್ದಳು. ಅವನ ಕಾಂತಿಯುಕ್ತವಾದ ಮುಖಮಂಡಲವು ಅವಳ ಹೃದಯದಲ್ಲಿ ಯಾವ ಭಾವನೆಯನ್ನು ಉದ್ರೇಕಗೊಳಿಸಿತೆಂದು ಹೇಳಲು ಬರುವದಿಲ್ಲ.

ಆದರೆ ಚಂದ್ರಹಾಸನ ಆಕೃತಿಯು ಅವಳನ್ನು ಅತ್ಯಂತ ಆಕರ್ಷಿಸಿದ್ದಿತು. ಚಂದ್ರಹಾಸನನ್ನು ನೋಡುವಾಗ ಅವಳ ಮುಖವು ನಸುಗೆಂಪು ಬಣ್ಣವನ್ನು ತಾಳಿತು. ಕಣ್ಣುಗಳು ಇನ್ನಷ್ಟು ಪ್ರಕಾಶಮಾನವಾದವು

ಅಮಾತ್ಯನಂದನನಿಗೆ ತನ್ನ ವಂದನೆಗಳನ್ನರ್ಪಿಸಿ, ಮರುದಿನ ಅವನನ್ನು ಬಂದು ಕಾಣುವೆನೆಂದು ನುಡಿದು, ಚಂದ್ರಹಾಸನು ತನ್ನ ಗೆಳೆಯನೊಂದಿಗೆ ಮಂತ್ರಿಗೃಹವನ್ನು ತ್ಯಜಿಸಿದನು. ಅಮಾತ್ಯಸದನವನ್ನು ತಾನು ತ್ಯಜಿಸುತ್ತಿರುವಾಗ ಓರ್ವ ಲಲನೆಯು ಮಂತ್ರಿಮನೆಯ ಉಪ್ಪರಿಗೆಯಲ್ಲಿ ನಿಂತು ತನ್ನನ್ನು ನೋಡುತ್ತಿರುವುದನ್ನು ಅವನು ಕಂಡನು. ಅವಳು ಯಾರೆಂಬುದನ್ನು ತಿಳಿಯುವ ಜಿಜ್ಞಾಸೆಯು ಅವನ ಹೃದಯದಲ್ಲಿ ಜನಿಸಿತು; ಆದರೆ ಆ ಗಿಡದ ಬೇರು ಅವನ ಎದೆಯಲ್ಲಿ ಆಳವಾಗಿ ಪ್ರವೇಶಿಸಲಿಲ್ಲ. ಇದಕ್ಕಿಂತ ಮೊದಲೇ ಬೇರೊಂದು ಬೀಜವು ಆ ಭೂಮಿಯಲ್ಲಿ ಮೊಳೆತು ಗಿಡವಾಗಿದ್ದಿತು.

---

## ವಿಷಯಾಕುಮಾರಿ

ಮಹಡಿಯಿಂದ ಕೆಳಗೆ ಇಳಿದು ಬಂದ ಯುವತಿಯು ಅಮಾತ್ಯನಂದನನ್ನು ಪ್ರಶ್ನಿಸಿದಳು: ‘‘ಯಾರಣ್ಣಾ ಇವರು?’’ ಎಂಬುದಾಗಿ.

‘‘ಚಂದ್ರಹಾಸ,-ಕುಳಿಂದರಾಜಪುತ್ರ ಮತ್ತು ಅವನ ಗೆಳೆಯ’’ ಎಂದು ಆಲೋಚನಾಭರಿತನಾದ ಮದನನು ನುಡಿದನು.

‘‘ಏನು ವಿಶೇಷಕಾರ್ಯಕ್ಕಾಗಿ ಅವರಿಬ್ಬರು ಬಂದುದು?’’

‘‘ಅದೇನೂ ಇಲ್ಲ; ಚಂದ್ರಹಾಸನು ರಾಜಕುಮಾರಿಯನ್ನು ಘಾತುಕರ ಕರದಿಂದ ರಕ್ಷಿಸಿದನು; ಅವನು ಯುದ್ಧರಂಗಕ್ಕೆ ತೆರಳಲು ಬಂದವನಾಗಿರುತ್ತಾನೆ.’’

‘‘ರಾಜಕುಮಾರಿಯನ್ನು ಅವನು ರಕ್ಷಿಸಿದುದರಿಂದ ನೀನೇಕಣ್ಣಾ ಈ ಚಿಂತೆ? ರಾಜಮಂದಿರದಲ್ಲಿ ನಿನಗಿಂತ ಅವನ ವರ್ಚಸ್ಸು ಹೆಚ್ಚುತ್ತಿರುವ

ದೆಂದು ಭಾವಿಸಿ ವಿಚಾರಮಗ್ನನಾಗಿರುವೆಯಾ?" ಎಂದು ಮಂದಹಾಸವನ್ನು ಬೀರುತ್ತಾ ವಿಷಯಾಕುಮಾರಿಯು ಪ್ರಶ್ನಿಸಿದಳು. ವಿಷಯಾದೇವಿಯು ತನ್ನ ಅಣ್ಣನಿಗೆ ರಾಜನಂದಿನಿಯಲ್ಲಿರುವ ತೀವ್ರವಾದ ಪ್ರಣಯವನ್ನು ಅರಿತಿದ್ದಳು. ಅವಳಲ್ಲಿ ಮಿಲನವನ್ನು ಹೊಂದುವುದಕ್ಕಾಗಿ ಅವನು ಯಾವ ರೀತಿ ಕಾತರಿಸುತ್ತಿರುವನೆಂಬುದನ್ನು ಆ ಸುಂದರಿಯು ಬಲ್ಲಳು. ಇಂಥ ಹೃದಯವು ತನಗಿಂತ ಸುಂದರನಾದ ಬೇರೊಬ್ಬನು ಘಾತುಕರ ಕರಗಳಿಂದ ರಾಜಕುಮಾರಿಯನ್ನು ರಕ್ಷಿಸಿರುವಾಗ ರಾಜಗೃಹದಲ್ಲಿ ಆ ತರುಣನ ವರ್ಚಸ್ಸು ಹೆಚ್ಚುವುದರಲ್ಲಿ ಸಂದೇಹವಿಲ್ಲ. ಪ್ರಣಯರಂಗದಲ್ಲಿ ತನಗೊಬ್ಬ ಪ್ರತಿಸ್ಪರ್ಧಿಯು ಬಂದೊದಗುವುದನ್ನು ಮನುಷ್ಯನು ಎಂದಿಗೂ ಸಹಿಸಲಾರನು.

ವಿಷಯಾಕುಮಾರಿಯು ಚಂಪೆಯ ಸಮಪ್ರಾಯದವಳೆಂದು ಹೇಳಬಹುದು. ಚಂಪೆಯಂತೆ ಅವಳು ಅಪ್ರತಿಮ ಸೌಂದರ್ಯರಾಶಿಯಿಂದ ತುಂಬಿ ತುಳುಕುತ್ತಿಲ್ಲವೆಂಬುದು ನಿಜವು; ಆದರೆ ಚಂಪೆಯಲ್ಲಿಲ್ಲದ ಹಲವು ಅಮೂಲ್ಯ ರತ್ನಗಳು ವಿಷಯಾಕುಮಾರಿಯಲ್ಲಿ ಪ್ರಕಾಶಿಸುತ್ತಲಿದ್ದವು. ಪರೋಪಕಾರ, ವಿಶಾಲಮನಸ್ಕತೆ, ಮನೋದಾರ್ಢ್ಯ ಇವುಗಳು ಆ ವನಿತೆಗೆ ದಿವ್ಯಾಭರಣಗಳಾಗಿದ್ದವು. ಅಸಾಮಾನ್ಯ ವಿದ್ವತ್ತು ಅವಳಿಗೆ ಲಭಿಸಿದುದರಿಂದ ಅವಳು ಜೀವನದ ರಹಸ್ಯವನ್ನು ಅರಿತಿದ್ದಳು. ಅವಳ ಅಣ್ಣನೇ ಮದನಕುಮಾರನು; ಆದರೆ ಅವಳ ಸ್ವಭಾವವು ಅಗ್ರಜನದಕ್ಕಿಂತ ತೀರ ವಿಭಿನ್ನವಾಗಿದ್ದಿತು. ಮದನನು ಪ್ರತಿಯೊಂದರಲ್ಲಿಯೂ ತಂದೆಯಾದ ದುಷ್ಟಬುದ್ಧಿಯನ್ನೇ ಹೋಲುತ್ತಿದ್ದನು.

"ವಿಷಯಾ, ನಾನೇಕೆ ಚಂದ್ರಹಾಸನನ್ನು ಕುರಿತು ಅಸೂಯೆಯನ್ನು ತಾಳಬೇಕು? ಅವನು ರಾಜನಂದಿನಿಯನ್ನು ವಿಪತ್ತುಗಳಿಂದ ರಕ್ಷಿಸಿದುದನ್ನು ಕಂಡು ನಾನು ಸಂತೋಷಪಡುವೆನು."

"ಅಣ್ಣಾ, ಆ ಧೀರನ ಶೌರ್ಯವನ್ನು ಬಹುಮಾನಿಸುವ ನಿನ್ನ ವಿಶಾಲ ಹೃದಯವನ್ನು ಕಂಡು ನಾನೂ ಸಂತೋಷಪಡುವೆನು."

"ಚಂದ್ರಹಾಸನು ನಿಜವಾಗಿಯೂ ಧೀರನೇ ಇರುವನು; ಅವನು ಬಂದುದು ಕುಳಿಂದ ಪ್ರಾಂತ್ಯದಿಂದಾಗಿದೆ. ಧೀರ ಕೇಸರಿಗಳ ಜನ್ಮಭೂಮಿಯು ಕುಳಿಂದವು. ಕುಳಿಂದ ಜನರಲ್ಲಿ ತೋರುವ ಪ್ರತಿಯೊಂದು ಗುಣವೂ ಚಂದ್ರಹಾಸನಲ್ಲಿ ಹೊಳೆಯುತ್ತಿರುವದು. ಇನ್ನೊಂದು ವಿಶೇಷವೇನೆಂದರೆ, ಆ ಜನರಲ್ಲಿ ಸಾಧಾರಣವಾಗಿ ಕಂಡುಬರುವ ಒರಟು ಸ್ವಭಾವವು ಚಂದ್ರಹಾಸನಲ್ಲಿ ಇಲ್ಲ. ಅವನ ಪರಿಚಯವನ್ನು ಹೊಂದಿದವನು ವಿನಯದ ಅವತಾರವೇ ಚಂದ್ರಹಾಸನಾಗಿರುವನೆಂಬುದನ್ನು ತಿಳಿದುಕೊಳ್ಳುವನು."

ವಿಷಯಾದೇವಿಗೆ ಚಂದ್ರಹಾಸನ ಸ್ವಭಾವದ ಪರಿಚಯವಿರಲಿಲ್ಲ. ಮದನನ ಮಾತುಗಳಿಂದ ಅವನ ಗುಣ ಮತ್ತು ಶೀಲಗಳನ್ನು ಅವಳು ತಿಳಿದುಕೊಂಡಳು. ಚಂದ್ರಹಾಸನು ಗುಣನಿಧಿಯೆಂಬುದನ್ನು ಅರಿಯಲು, ಅವನನ್ನು ಕುರಿತು ಅವಳ ಮನಸ್ಸು ಅತ್ಯಂತ ಗೌರವಭಾವವನ್ನು ತಾಳಿತು. ಚಂದ್ರಹಾಸನಂಥ ಸೌಂದರ್ಯಶಾಲಿಯಾದ ತರುಣನನ್ನು ಅವಳು ಇದುವರೆಗೆ ನೋಡಿರಲಿಲ್ಲ.

ಅಮಾತ್ಯನಂದನನು ಬೇರೆ ಯಾವುದೋ ಒಂದು ಕೆಲಸಕ್ಕಾಗಿ ಗೃಹಾಂತರ್ಭಾಗದೊಳಗೆ ಪ್ರವೇಶಿಸಿದನು. ವಿಷಯಾದೇವಿಯು ಆಲೋಚನಾಮಗ್ನಳಾಗಿ ನಿಂತಳು. ಹಲವು ವಿಚಾರಗಳು ಅವಳ ಮನೋ ನಭದಲ್ಲಿ ಪ್ರವೇಶಿಸಿ ಪುನಃ ಮಾಯವಾದುವು. ಅವಳು ಹೀಗೆ ನಿಂತಿರಲು, ಅಲ್ಲಿ ಒಂದು ಓಲೆಯು ಬಿದ್ದಿರುವುದು ಅವಳಿಗೆ ಗೋಚರವಾಯಿತು. ಅದು ಯಾರದೆಂದು ತಿಳಿಯಲು ಕುತೂಹಲಳಾಗಿ, ಅವಳು ಅದನ್ನು ತೆಗೆದು ಅದರ ಹೊದಿಕೆಯನ್ನು ನೋಡಿದಳು. ಅದರ ಮೇಲೆ ತನ್ನ ತಂದೆಯ ಮುದ್ರೆಯಿರುವದನ್ನು ಅವಳು ವೀಕ್ಷಿಸಿದಳು. ಉತ್ಸುಕಳಾಗಿ ಅವಳು ಹೊದಿಕೆಯನ್ನು ಚಾಲಿಸಿ ಓಲೆಯನ್ನು ಬಿಚ್ಚಿದಳು. ಅದು ತನ್ನ ತಂದೆಯು ಅಣ್ಣನಿಗೆ ಬರೆದ ಓಲೆಯಾಗಿದ್ದಿತು. ಆ ಪತ್ರವನ್ನು ಓದಿದ ನಂತರ ಅವಳು ತನ್ನ ಕಣ್ಣುಗಳನ್ನು ತಾನೇ ನಂಬದಾದಳು. ಅವಳಿಗೆ ತನ್ನ ತಲೆಯು ತಿರುಗುತ್ತಿರುವಂತೆ ಭಾಸವಾಯಿತು. "ಹಾಯ್! ಇಷ್ಟು ಕಠಿಣವಾಗಿ ಬರೆಯಲು ಕಾರಣವೇನಿರಬಹುದು?" ಎಂದು ಆ ನಾಗಿಣಿಯು ಬಿಸುಸುಯ್ದು ತನ್ನೊಳಗೆ ತಾನೇ ನುಡಿದುಕೊಂಡಳು. ಆ ಓಲೆಯ ಸಾರಾಂಶವು ಇದಾಗಿದೆ:

"ಚಿ|| ಮದನನಿಗೆ—ದುಷ್ಟಬುದ್ಧಿಯ ಆಶೀರ್ವಾದಗಳು. ನಾನು ಕುಳಿಂದದಿಂದ ಬಡಗಲು ಪ್ರಾಂತಕ್ಕೆ ತೆರಳುವೆನು. ಈ ಪತ್ರವನ್ನು ತೆಗೆದುಕೊಂಡು ಬರುವವನು ಕುಳಿಂದಕನ ಪಾಲಿತ ಪುತ್ರನಾದ ಚಂದ್ರಹಾಸನಾಗಿರುತ್ತಾನೆ. ಇವನು ನಮ್ಮ ಕಾರ್ಯಸಾಧನೆಗೆ ದೊಡ್ಡದಾದ ಒಂದು ಪ್ರತಿಬಂಧವಾಗಿರುವದರಿಂದ, ಇವನ ಸಂಹಾರವು ಅತ್ಯಾವಶ್ಯಕವಾದ ಕೆಲಸವಾಗಿದೆ; ಆದರೆ ಈ ವಧೆಯಲ್ಲಿ ನಮ್ಮ ಭಾಗವಿದೆಯೆಂಬುದು ಅತ್ಯಂತ ರಹಸ್ಯವಾಗಿರತಕ್ಕದು. ಕುಳಿಂದಕನು ಅರಿತರೆ, ಅವನೊಡನೆ ನಮ್ಮ ತಂತ್ರಗಳು ಫಲಿಸಲಾರವು. ಯುದ್ಧರಂಗದಲ್ಲಿ ಯಾವುದಾದರೂ ಒಂದು ತಂತ್ರವನ್ನು ಪ್ರಯೋಗಿಸಿ ಶತ್ರುಗಳ ಖಡ್ಗಗಳಿಗೆ ಚಂದ್ರಹಾಸನು ಆಹುತಿಯಾಗುವಂತೆ ಮಾಡತಕ್ಕದು. ಅದು ಫಲಪ್ರದವಾಗದಿದ್ದರೆ ಬೇರೆ ತಂತ್ರಗಳನ್ನು ಪ್ರಯೋಗಿಸ

ಬೇಕು. ಆ ವೇಳೆಗೆ ನಾನು ರಾಜಧಾನಿಗೆ ಬಂದು ತಲುಪುವೆನು.

ದುಷ್ಟಬುದ್ಧಿ"

ಯಾವ ಅಪರಾಧಗಳನ್ನೂ ಮಾಡದ ಚಂದ್ರಹಾಸನನ್ನು ತಂತ್ರಗಳ ಮೂಲಕ ವಧಿಸಲು ತನ್ನ ತಂದೆಯು ನಿರ್ದೇಶಿಸುತ್ತಿರುವುದನ್ನು ನೋಡಿ ವಿಷಯಾದೇವಿಯು ಅತ್ಯಂತ ಆಶ್ಚರ್ಯಭರಿತಳಾದಳು. ಇದಕ್ಕೆ ಕಾರಣ ವೇನು? ಈ ತರುಣನ ಸಂಹಾರದಿಂದ ತನ್ನ ಜನಕನು ಸಾಧಿಸಲು ಬಯು ಸುತ್ತಿರುವ ಉದ್ದೇಶವೇನಿರಬಹುದು? ಚಂದ್ರಹಾಸನು ರಾಜದ್ರೋಹಿ ಯಾಗಿರುವನು, ಎಂಬುದಾಗಿರಬಹುದೇ ತಂದೆಯ ವಿಚಾರವು? ಹಾಗಾಗಲು ಅವಕಾಶವೆಲ್ಲಿಯದು? ಚಂದ್ರಹಾಸನು ರಾಜದ್ರೋಹಿಯಾಗಿದ್ದರೆ, ತನ್ನ ಪ್ರಾಣವನ್ನು ಸಹ ಲೆಕ್ಕಿಸದೆ, ರಾಜಕುಮಾರಿಯನ್ನೇಕೆ ದುಷ್ಟರ ಕರಗಳಿಂದ ರಕ್ಷಿಸುತ್ತಿದ್ದನು? ಚಂದ್ರಹಾಸನ ಮೊಗದಲ್ಲಿ ಕಾಪಟ್ಯದ ಲಾಂಛನವು ತಿಲಾಂಶ ದಷ್ಟೂ ಇಲ್ಲ. ಇಷ್ಟು ಗುಣಭರಿತನಾದ ಮಾನವನನ್ನು ಸಂಹರಿಸುವದೆಂದರೆ, ಎಷ್ಟು ಕಠೋರವಾದ ಕೆಲಸವದು?

ಆ ಓಲೆಯನ್ನು ನೋಡಿದ ನಂತರ ವಿಷಯಾಕುಮಾರಿಯ ಮನಸ್ಸು ಈ ತರದ ವಿವಿಧ ಚಿಂತೆಗಳನ್ನು ತಾಳಿತು. ಚಂದ್ರಹಾಸನಂಥ ತರುಣನನ್ನು ವಧಿಸಲು ಉದ್ಯುಕ್ತನಾಗಿರುವ ತನ್ನ ತಂದೆಯ ಎದೆಯು ಕಾಪಟ್ಯದಿಂದ ತುಂಬಿರಬಹುದೇ? ಎಂದು ವಿಚಾರಿಸಲು, ಆ ಕೋಮಲಾಂಗಿಯ ಹೃದಯವು ಭೀತಿಯಿಂದ ಕಂಪಿಸಿತು. ತನ್ನ ತಂದೆ-ತಾನು ಯಾರನ್ನು ಅತ್ಯಂತ ಭಕ್ತಿ ಯಿಂದಲೂ ಪ್ರೇಮದಿಂದಲೂ ವೀಕ್ಷಿಸುತ್ತಿರುವಳೋ ಆ ಪೂಜ್ಯ ಪಿತನು- ನಿರಪರಾಧಿಯಾದ ಒಬ್ಬ ತರುಣನನ್ನು ವಧಿಸಲು ತನ್ನ ಮಗನಿಗೆ ನಿರ್ದೇಶಿ ಸುವುದನ್ನರಿಯಲು ಮಗಳ ಹೃದಯವು ಎಷ್ಟು ಸಂಕಟವನ್ನು ಹೊಂದುವು ದೆಂಬುದನ್ನು ವಾಚಕರೇ ಊಹಿಸಿಕೊಳ್ಳಲಿ!

ಈ ಕಾಗದದ ಹಿಂಬದಿಯಲ್ಲಿ ಯಾವದೋ ಒಂದು ನಿಗೂಢವಾದ ರಹಸ್ಯವಿದೆಯೆಂದು ಆ ಅಬಲೆಯು ಊಹಿಸಿದಳು. ತನ್ನ ತಂದೆಯು ರಾಜ ಕಾರಣಗಳಲ್ಲಿ ಪಡೆಯಲು ಆಗ್ರಹಿಸುತ್ತಿರುವ ಅಧಿಕಾರಗಳನ್ನೂ ಹಂಬಲ ಗಳನ್ನೂ ಕುರಿತು ಆ ತರುಣಿಯು ಅರಿತವಳಾಗಿರಲಿಲ್ಲ. ಭಯಂಕರವಾದ ಅತಿಕಾಂಕ್ಷೆಯ ವಿಷವು ತಂದೆಯ ಎದೆಯಲ್ಲಿ ತುಂಬಿರುವ ಸಂಗತಿಯಾದರೂ ಅವಳಿಗೆ ತಿಳಿಯದು; ಆದರೆ ಅವಳ ಬುದ್ಧಿಯು ನಿರಪರಾಧಿಯಾದ ಒಬ್ಬ ಅರಸುಮಗನನ್ನು ವಧಿಸುವ ನಿರ್ದೇಶದ ಹಿಂದೆ ಮಹತ್ತಾದ ಒಂದು ರಹಸ್ಯವು ಅಡಗಿದೆ, ಎಂಬುದಾಗಿ ನುಡಿದಿತು. ಅವಳು ಆ ಓಲೆಯನ್ನು, ಅದು

ಮೊದಲೆಲ್ಲಿತ್ತೋ ಅಲ್ಲಿಯೇ ಮಡುಗಿದಳು; ಮತ್ತು ವಿಚಾರಭರಿತಳಾಗಿ ಆ ಕೋಣೆಯ ಕಿಡಕಿಗಳ ಸಂದಿನಿಂದ ಆಕಾಶವನ್ನು ನೋಡುತ್ತ ನಿಂತಳು.

ಮದನನು ಸ್ವಲ್ಪ ಸಂಭ್ರಮಯುಕ್ತನಾಗಿ ಕೋಣೆಯೊಳಗೆ ಓಡಿ ಬಂದನು. ಅವನು ವಿಷಯಾದೇವಿಯನ್ನು ನೋಡುತ್ತ ಹೇಳಿದನು:— "ಕುಮಾರಿ! ಚಂದ್ರಹಾಸನು ನಮ್ಮ ತಂದೆಯವರಿಂದ ತೆಗೆದುಕೊಂಡು ಬಂದ ಓಲೆಯನ್ನು ನೋಡಿದೆಯಾ?"

"ಇಲ್ಲ; ಅಣ್ಣಾ!"

"ವಿಷಯೆ! ಆ ಕಾಗದವನ್ನು ಒಂದು ಬಾರಿ ಹುಡುಕು. ಅದು ಅನ್ಯರ ಕರಗತವಾದರೆ?........" ಎಂದು ಮದನನು ನುಡಿದನು.

"ಅದೇಕಣ್ಣಾ, ಅದೊಂದು ಕಾಗದಕ್ಕಾಗಿ ಇಷ್ಟೊಂದು ಭಯವನ್ನು ಹೊಂದಿರುವೆ?"

"ಕುಮಾರಿ, ಅದು ರಾಜಕಾರಣಕ್ಕೆ ಸಂಬಂಧಿಸಿದ ಪತ್ರವಾಗಿದೆ; ಅದು ಶತ್ರುಗಳ ಕರಗತವಾದರೆ, ನಮ್ಮ ಸೈನ್ಯಗಳ ಅನೇಕ ರಹಸ್ಯಗಳನ್ನು ಅವರು ಗ್ರಹಿಸುವರು. ಶತ್ರುಗಳ ಗೂಢ ಚಾರರು ಊರಲ್ಲೆಲ್ಲಾ ತುಂಬಿರುವರು. ಆದುದರಿಂದ ಆ ಕಾಗದವು ಹೋದರೆ ನಮ್ಮ ಕೊರಳುಗಳನ್ನು ನಾವೇ ಶತ್ರುಗಳಿಗೆ ನೀಡಿದಂತಾಗುವದು"

ತನ್ನ ಅಣ್ಣನು ತನ್ನನ್ನು ವಂಚಿಸುವದಕ್ಕಾಗಿ ಈ ರೀತಿ ನುಡಿಯುತ್ತಿರುವನೆಂಬುದನ್ನು, ಕಾಗದದ ಸಾರಾಂಶವನ್ನು ಅರಿತುಕೊಂಡಿರುವ ಅಮಾತ್ಯನಂದಿನಿಯು ಗ್ರಹಿಸಿದಳು. ಅವಳು ತಾನು ಆ ಓಲೆಯ ರಹಸ್ಯವನ್ನು ಅರಿತಿರುವೆನೆಂಬುದನ್ನು ತಿಳಿಸದೆ, ಯಾವುದನ್ನೂ ಅರಿಯದವಳಂತೆ ನುಡಿದಳು. "ಅಣ್ಣಾ, ಮಹತ್ವದ ಕೆಲಸಗಳಲ್ಲಿ ಕೈಹಾಕಿರುವ ನೀನು ಈ ರೀತಿಯ ಪತ್ರವನ್ನು ಭದ್ರವಾಗಿಡಬೇಕೆಂಬ ನೆನಪು ನಿನಗೆ ಬೇಡವೇ? ನಾನಾದರೂ ಅದನ್ನು ಕಂಡಿದ್ದರೆ, ಭದ್ರವಾಗಿ ತೆಗೆದಿರಿಸುತ್ತಿದ್ದನು!...."

ಮದನಕುಮಾರನು ಕಾಗದವನ್ನು ಹುಡುಕಿದನು; ಅದು ಸಿಕ್ಕಲು ಅಪಾರವಾದ ಸಂತೋಷವು ಅವನಲ್ಲಿ ಸಂಜಾತವಾಯಿತು. ತಾನು ಬದುಕಿದೆನೆಂದು ಅವನು ಮನಸ್ಸಿನಲ್ಲಿಯೇ ಭಾವಿಸಿದನು. ಅವನಿಗೆ ಕಾಗದವು ಕಾಣದಿರುವಾಗ ಉಂಟಾದ ದಿಗಿಲು, ಯಾವದೋ ಒಂದು ದುರುದ್ದೇಶವು ಬಹಿರಂಗವಾಗುವುದರಲ್ಲಿರುವ ಭೀತಿಯಿಂದಾಗಿದೆ. ಎಂದು ಅವಳು ಊಹಿಸಿದಳು. ತನ್ನ ತಂದೆಯೂ, ಅಣ್ಣನೂ ಚಂದ್ರಹಾಸನನ್ನು ವಧಿಸಲು ಒಳಸಂಚು ನಡೆಯಿಸುತ್ತಿರುವದನ್ನು ಕಂಡು ಅವಳು ಭಯದಿಂದ ನಡುಗಿದಳು.

ಆ ರಾತ್ರಿ ಅಮಾತ್ಯನಂದಿನಿಗೆ ನಿದ್ದೆ ಬರಲಿಲ್ಲ; ತನ್ನ ಹಾಸಿಗೆಯ ಮೇಲೆ ಉರುಳಾಡುತ್ತ ಅವಳು ಆ ರಾತ್ರಿಯ ಹೆಚ್ಚಿನ ಭಾಗವನ್ನು ಕಳೆದಳು. ಅಡಿಗಡಿಗೂ ಚಂದ್ರಹಾಸನು ಅವಳ ಮನಸ್ಸಿನಲ್ಲಿ ಪ್ರವೇಶಿಸಿ ಅಶಾಂತತೆಯನ್ನು ನೀಡುತ್ತಲಿದ್ದನು. ಅವನ ರೂಪು ಅವಳ ಮನಶ್ಚಕ್ಷುಸ್ಸುಗಳ ಮುಂದೆ ತಾಂಡವವಾಡುತ್ತಲಿದ್ದಿತು. ಅವಳ ಸರಳವೂ ಮಧುರವೂ ಆದ ನುಡಿಗಳು ಅವಳ ಶ್ರೋತ್ರೇಂದ್ರಿಯಗಳಲ್ಲಿ ಪ್ರತಿಧ್ವನಿಸುತ್ತಲಿದ್ದುವು. ಧೀರನಾದ ಅವನ ಆಕೃತಿಯು ಅವಳ ಹೃದಯದಲ್ಲಿ ನೆಲೆನಿಂತಿತು.

ಅಪರಾತ್ರಿಯಲ್ಲಿ ಅವಳು ತನ್ನ ಕಣ್ಣುಗಳ ರೆಪ್ಪೆಗಳನ್ನು ಮುಚ್ಚಿದಳು; ಆದರೆ ಉಪದ್ರವಶೂನ್ಯವಾದ ಸುಖನಿದ್ರೆಯ ಅನುಗ್ರಹವು ಅವಳಿಗೆ ಲಭಿಸಲಿಲ್ಲ. ಅವಳು ಒಂದು ಕೆಟ್ಟ ಕನಸನ್ನು ಕಂಡಳು. ಅದರಲ್ಲಿ ಚಂದ್ರಹಾಸನು ತನ್ನ ತಂದೆಯೊಡನೆ ಕಾದಾಡುತ್ತಿರುವಂತೆಯೂ ದುಷ್ಟಬುದ್ಧಿಯು ಯುದ್ಧದಲ್ಲಿ ಪರಾಜಿತನಾಗಿ ಚಂದ್ರಹಾಸನ ತೀಕ್ಷ್ಣವಾದ ಖಡ್ಗದ ಆಘಾತದಿಂದ ಭೂಮಿಗೆ ಪತಿಸಿದಂತೆಯೂ ಅವಳು ಅವಲೋಕಿಸಿದಳು. ಭಯಂಕರವಾದ ಗಾಯಗಳ ಪರಿಣಾಮವಾಗಿ ನೆಲದಲ್ಲಿ ಬಿದ್ದಿರುವ ತನ್ನ ತಂದೆಯೊಡನೆ ಚಂದ್ರಹಾಸನು: “ಅಮಾತ್ಯರೇ, ನಾನಿನ್ನು ಹೋರಾಡಲಾರೆನು. ಭೂಮಿಯಲ್ಲಿ ಪರಾಜಯವನ್ನು ಹೊಂದಿಬಿದ್ದಿರುವ ಮಾನವನೊಡನೆ ಹೋರಾಡುವ ಪಾಠವನ್ನು ನಾನು ಕಲಿತಿಲ್ಲ. ತಮ್ಮ ಪತನಕ್ಕೆ ಕಾರಣಭೂತನು ನಾನಲ್ಲ; ತಮ್ಮ ಅತಿಕಾಂಕ್ಷೆ ಹಾಗೂ ದುಷ್ಟಬುದ್ಧಿಯ ಫಲವಾಗಿ ಈ ಭಯಂಕರ ಅಧಃಪತನವನ್ನು ತಾವು ಹೊಂದಿರುವಿರಿ ನಾನು ತಮಗೆ ಜೀವದಾನವನ್ನು ನೀಡಿರುವೆನು” ಎಂದು ನುಡಿಯುತ್ತಿರುವುದನ್ನು ವಿಷಯಾಕುಮಾರಿಯು ಕೇಳಿದಳು.

ತಾನು ಬಿದ್ದಿರುವಲ್ಲಿಂದ ಎದ್ದು ಕುಳಿತು ದುಷ್ಟಬುದ್ಧಿಯು ಹೇಳುತ್ತಲಿದ್ದನು:—“ಚಂದ್ರಹಾಸ, ನಾನು ನಿನಗೆ ಮಹತ್ತಾದ ದ್ರೋಹಗಳನ್ನು ಬಗೆದಿರುವೆನು ನಿನಗಿರುವ ಉದಾರಬುದ್ಧಿಯೂ ಸಹನಶೀಲತೆಯೂ ನನಗಿಲ್ಲ. ಅದೆಷ್ಟು ಬಗೆಯಿಂದ ನಾನು ನಿನ್ನನ್ನು ವಧಿಸಲು ಯತ್ನಿಸಿದರೂ, ಅದೆಷ್ಟು ರೀತಿಯಲ್ಲಿ ನಿನಗೆ ನಾನು ಕೇಡುಗಳನ್ನು ಬಗೆದರೂ, ನಾನು ನಿರಾಯುಧನಾಗಿ ನೆಲದಲ್ಲಿ ಬಿದ್ದಿರುವಾಗ, ನನ್ನನ್ನು ವಧಿಸದೆ ಬಿಟ್ಟ ಈ ನಿನ್ನ ಮಹಾಮನಸ್ಕತೆಯನ್ನು ನಾನೆಷ್ಟು ಹೊಗಳಿದರೂ ಸಾಲದು. ಚಂದ್ರಹಾಸ, ನಾನು ಘಾತುಕಿಯು! ನನ್ನನ್ನು ಕ್ಷಮಿಸು.” ಎಂದು ನುಡಿದು, ಅಮಾತ್ಯನು ಅಳುತ್ತಲಿದ್ದನು.

“ಅಮಾತ್ಯರೆ, ನಾನು ತಮ್ಮನ್ನು ಕ್ಷಮಿಸಿರುವೆನು.” ಎಂದನು ವಿಶಾಲ

ಮನಸ್ಕನಾದ ಚಂದ್ರಹಾಸನು.

"ಚಂದ್ರಹಾಸ! ನನ್ನ ಕುವರಿ ವಿಷಯಾ, ಅವಳಿಗೂ ನನ್ನ ಅತಿ ಕಾಂಕ್ಷೆಯ ವ್ಯಾಮೋಹದಿಂದ ನಾನು ಹಲವು ಕೆಡಕುಗಳನ್ನು ಬಗೆದೆನು. ಅವಳನ್ನು ಪಾಲಿಸುವ ಭಾರವು ನಿನ್ನದು."

"ಅದನ್ನು ನಾನು ನೆರವೇರಿಸುವೆನು."

ಈ ದೃಶ್ಯವನ್ನು ಕಂಡು ವಿಷಯಾಕುಮಾರಿಯು ಭಯಭೀತಳಾಗಿ ಚೀರಿದಳು. ಅವಳು ಎಚ್ಚತ್ತು ನೋಡಲು, ತನ್ನ ಸುತ್ತಲೂ ವ್ಯಾಪಿಸಿದ ಕತ್ತಲೆಯನ್ನಲ್ಲದೆ ಇನ್ನಾವುದನ್ನೂ ಅವಳು ಕಾಣಲಿಲ್ಲ; ಆದರೆ ತಾನು ಕಂಡ ಭಯಂಕರ ಕನಸನ್ನು ನೆನೆದು ಅವಳು ನಡುಗಿದಳು. ಮುಂದೆ ಬರಲಿರುವ ದುಷ್ಟಬುದ್ಧಿ ಹಾಗು ಚಂದ್ರಹಾಸ ಇವರ ಕಾಳಗವನ್ನು ಆ ಕನಸು ಸೂಚಿ ಸುತ್ತಲಿದೆಯೆಂದು ಅವಳು ವಿಚಾರಿಸಿದಳು. ತನ್ನ ತಂದೆಯು ಒಂದು ಭಾಗ ದಲ್ಲಿಯೂ ಕುಳಿಂದಕುಲ ಚಿತ್ರಭಾನುವು ಇನ್ನೊಂದು ಭಾಗದಲ್ಲಿಯೂ ನಿಂತು ಹೊಡದಾಡುತ್ತಿರುವ ಭಯಂಕರ ಚಿತ್ರವು ಅವಳ ಮನೋವಲಯದಲ್ಲಿ ನರ್ತಿಸಲಾರಂಭಿಸಿತು. ಆ ಹುಡುಗಿಯ ಶರೀರವು ಹೆದರಿಕೆಯಿಂದ ನಡುಗಿ ಹೋಯಿತು; ಅವಳ ತುಟಿಗಳು ನಡುಗುತ್ತಿದ್ದವು.

ಅವಳು ಹಾಸಿಗೆಯನ್ನು ಬಿಟ್ಟು ಎದ್ದಳು; ಆಗಲಿನ್ನೂ ಬೆಳಕು ಹರಿ ದಿರಲಿಲ್ಲ. ಬ್ರಾಹ್ಮ ಮುಹೂರ್ತವು ಸಂಪ್ರಾಪ್ತವಾಗಿದ್ದುದರಿಂದ, ಇಳೆಯು ಶಾಂತತೆಯ ಕಡಲಿನಲ್ಲಿ ನಲಿದಾಡುತ್ತಿರುವ ಚಿತ್ರವನ್ನು ಅಮಾತ್ಯನಂದಿನಿಯು ಕಂಡಳು. ನಸುಬೆಳಕಿನಲ್ಲಿ ನಿಶ್ಶಬ್ದವಾಗಿ ರಾಜಧಾನಿಯಲ್ಲಿ ನಿಂತಿರುವ ಗೋಪುರ ಗಳು ಭಯಂಕರಾಕಾರದ ಭೂತಗಳಂತೆ ಅವಳ ಕಣ್ಣುಗಳಿಗೆ ಹೊಳೆದುವು. ತರುಲತಾದಿಗಳು ಸಹ ಮೌನವನ್ನವಲಂಬಿಸಿ ಬ್ರಾಹ್ಮ ಮುಹೂರ್ತದ ಶಾಂತತೆಯನ್ನು ಅನುಷ್ಠಾನಕ್ಕೆ ತರಲು ಉದ್ಯಮಿಸುವ ಚಿತ್ರವನ್ನು ವಿಷಯಾ ಕುಮಾರಿಯು ವೀಕ್ಷಿಸಿದಳು. ನೀಲಾಕಾಶದಲ್ಲಿ ಮುತ್ತುಗಳನ್ನು ಚೆಲ್ಲಿದಂತೆ ಅಲ್ಲಲ್ಲಿ ಹರಡಿರುವ ತಾರಾನಿಚಯಗಳು ಅನ್ಯಲೋಕದಿಂದ ಬಂದು ನಿಂತು ಬ್ರಾಹ್ಮಮುಹೂರ್ತದ ಶಾಂತತೆಯ ಚಿತ್ರವನ್ನು ವೀಕ್ಷಿಸಲುದ್ಯುಕ್ತರಾಗಿರುವ ಸುರವನಿತೆಯರಂತೆ ತೋರುತ್ತಲಿದ್ದುವು. ಅಮಾತ್ಯನಂದಿನಿಯು ತನ್ನ ಕೋಣೆಯ ಮುಂದಿರುವ ಜಗುಲಿಗೆ ಬಂದು ನಿಂತು ಈ ಶಾಂತತೆಯ ಚಿತ್ರ ವನ್ನು ಕಂಡು ತನ್ನ ಪ್ರಕ್ಷುಬ್ಧವಾದ ಮನಸ್ಸನ್ನು ಸ್ತಿಮಿತ ಗತಿಗೆ ತರಲು ಪ್ರಯತ್ನಿಸಿದಳು; ಆದರೆ ಎದೆಯಲ್ಲಿ ಉಕ್ಕಿ ಹರಿಯುತ್ತಿರುವ ವಿಚಾರ ತರಂಗ ಗಳನ್ನು ನಿಲ್ಲಿಸಲು ಅವಳು ಶಕ್ತಳಾಗಲಿಲ್ಲ. ಅವಳು ನಿರಾಶೆಯಿಂದ ಪುನಃ

ಹಾಸಿಗೆಯ ಮೇಲೆ ಹೋಗಿ ಬಿದ್ದುಕೊಂಡಳು.

ಹೊತ್ತು ಯಾರನ್ನೂ ಕಾದು ನಿಂತಿರುವುದಿಲ್ಲ. ಬೆಳಕು ಹರಿಯಿತು. ವಿಷಯಾಕುಮಾರಿಯು ಮ್ಲಾನಭಾವವನ್ನು ಹೊಂದಿ ತನ್ನ ಶಯನಗೃಹದಿಂದ ಹೊರಬಿದ್ದಳು. ಅವಳಲ್ಲಿ ಉತ್ಸಾಹವಾಗಲೀ ಉನ್ಮೇಷವಾಗಲೀ ಇರಲಿಲ್ಲ ಅವಳು ಏಕಾಂಗಿಯಾಗಿಯೇ ತನ್ನ ಸಮಯವನ್ನು ಕಳೆದಳು.

ಅವಳು ಚಂದ್ರಹಾಸನಿಗೆ ದುಷ್ಟಬುದ್ಧಿಯ ತಂತ್ರಗಳಿಂದ ಬಂದೊದಗಬಹುದಾದ ವಿಪತ್ತುಗಳನ್ನು ಸೂಚಿಸುವದು ಉಚಿತವೆಂದು ಒಮ್ಮೆ ಭಾವಿಸುವಳು. ತನ್ನ ತಂದೆಯ ಉದ್ದೇಶವನ್ನು ಭಂಗಪಡಿಸುವದು ಪಿತೃದ್ರೋಹವಲ್ಲವೇ? ಎಂದು ಇನ್ನೊಮ್ಮೆ ನೆನೆವಳು; ಆದರೆ ನಿರಪರಾಧಿಯಾಗಿರುವ ತರುಣನು ವಿಪತ್ತುಗಳ ಜಾಲದಲ್ಲಿ ಸಿಲುಕುವದನ್ನು ನೋಡಿ, ಅದನ್ನು ಅವನಿಗೆ ಸೂಚಿಸದಿರಲಿಕ್ಕೆ ಆವಳ ಕೋಮಲ ಹೃದಯವು ಒಪ್ಪಲಿಲ್ಲ. ಚಂದ್ರಹಾಸನ ಬಿಂಬವು ಅವಳ ಎದೆಯಲ್ಲಿ ಒಂದು ಸ್ಥಾನವನ್ನು ಆಕ್ರಮಿಸಿದ್ದಿತು. ಅವನ ಮೊಗದಲ್ಲಿ ಹೊರಸೂಸುತ್ತಿರುವ ಎಳೆನಗೆಯು ವಿಷಯಾದೇವಿಯ ಹೃದಯವನ್ನು ಅಪಹರಿಸಿತು. ಅವಳು ಅನ್ಯನೊಬ್ಬನ ಹಿಂದೆ ತನ್ನ ಮನಸ್ಸು ಧಾವಿಸುತ್ತಿರುವದನ್ನು ವೀಕ್ಷಿಸಿ ಭಯಪೀಡಿತಳಾಗಿ ಮನಸ್ಸನ್ನು ದೃಢ ಸಂಕಲ್ಪವೆಂಬ ಸಂಕೋಲೆಯಿಂದ ಬಂಧಿಸಲು ಯತ್ನಿಸಿದಳು; ಆದರೆ ಅದು ಸಂಕೋಲೆಯನ್ನು ಮುರಿದು ಹಾಕಿ ಚಂದ್ರಹಾಸನ ಹಿಂದೆ ಓಡುತ್ತಲಿತ್ತು.

ಯೌವನಭರಿತಳಾದ ಅಮಾತ್ಯನಂದಿನಿಯ ಮನಸ್ಸು ಪ್ರಣಯರೋಗದಿಂದ ಬಾಧಿತವಾಯಿತು. ಅವಳು ಇದುವರೆಗೆ ತನ್ನ ಜೀವನ ಪ್ರವಾಸದ ಸಂಗಾತಿಯು ಯಾರೆಂಬುದನ್ನು ಕುರಿತು ನೆನೆದಿರಲಿಲ್ಲ; ಆದರೆ ಪ್ರಕೃತಿಯು ಅವಳ ಮನಸ್ಸನ್ನು ತನ್ನ ಬಲವಾದ ಗದೆಯಿಂದ ತಿವಿಯಿತು. ಶೂನ್ಯವಾಗಿದ್ದ ಅವಳ ಹೃದಯವು ಒಂದು ಆರಾಧನಾ ಮೂರ್ತಿಯನ್ನು ಹುಡುಕಲು ಆಗ್ರಹಿಸಿತು.

ಬದುಕು ವಿಚಿತ್ರವಾದುದು! ಪ್ರಣಯವು ಬಾಳಿನಲ್ಲಿ ಹರಿಯದಿದ್ದರೆ ಅದು ಶೂನ್ಯವಾಗುತ್ತಿತ್ತೋ ಏನೋ ಬಲ್ಲವರು ಯಾರು? ಈ ಸಾಗರದಲ್ಲಿ ಏಕಾಂಗಿಯಾಗಿ ಸಂಚರಿಸುತ್ತಿರುವ ಜೀವವು ಇನ್ನೊಂದು ಪ್ರಾಣದಲ್ಲಿ ಮಿಲನವನ್ನು ಹೊಂದಿ ಚೈತನ್ಯವನ್ನು ಹುಡುಕಲು ಆಗ್ರಹಿಸುತ್ತಿರುವುದು. ತನ್ನ ಸಕಲ ಆಶೆಗಳನ್ನೂ ಆಗ್ರಹಗಳನ್ನೂ ಇಷ್ಟೇ ಏಕೆ, ತನ್ನ ಆತ್ಮವನ್ನೂ ಕೂಡ ತನ್ನ ಬಾಳಿನ ನಾವೆಯನ್ನು ಮುಂದೊರೆಯಲಿರುವ ಸಂಗಾತಿಯ ಚರಣತಲಗಳಲ್ಲಿ ಅರ್ಪಿಸಲು ಜೀವವು ಸನ್ನದ್ಧತೆಯನ್ನು ಹೊಂದುವುದು. ಈ ಅವ

ಸ್ಥೆಯು ಮನುಷ್ಯಸ್ವಭಾವದ-ಅಲ್ಲಲ್ಲ-ಹೃದಯವಿಕಾಸದ ಲಕ್ಷಣವಾಗಿದೆ. ಭಾವನಾ ಪ್ರಚೋದಿತವಾದ ಈ ವಿಕಾರಗಳು ಮನುಷ್ಯನು ಹೊಸದೊಂದು ರಂಗದಲ್ಲಿ ಪ್ರವೇಶಿಸುವಂತೆ ಮಾಡುತ್ತವೆ.

ಪ್ರಣಯವು ಮಾನವನ ಕಾಮವಿಕಾರಗಳ ಬಹಿರ್‌ಸ್ಫುರಣವೆಂದು ಕೆಲವರು ನುಡಿಯುತ್ತಾರೆ; ಆದರೆ ವಿಚಾರಚಕ್ಷುಸ್ಸುಗಳ ಮೂಲಕ ಪ್ರಣಯವನ್ನವಲೋಕಿಸುವವರಿಗೆ ಅದು ಪರಿಪಾವನವಾದದ್ದೆಂದು ಹೊಳೆಯುವದು. ತನ್ನ ಹಲವು ಆಗ್ರಹಗಳ ಸಂತೃಪ್ತಿಗಾಗಿ ಯತ್ನಿಸುತ್ತಿರುವ ಮನುಷ್ಯನ ಕಾಮವಿಕಾರಗಳು ಅವನನ್ನು ಎಂದಿಗೂ ಮಹತ್ತಾದ ತ್ಯಾಗಗಳನ್ನು ಮಾಡಲು ಪ್ರೇರೇಪಿಸಲಾರವು ಸ್ವಾರ್ಥತೆಗೂ ತ್ಯಾಗಕ್ಕೂ ಯಾವ ಸಂಬಂಧವೂ ಇರುವದಿಲ್ಲ. ತನ್ನದು ಎಂಬ ಗೋಡೆಗಳಿಂದ ಆವೃತವಾಗಿ ತನ್ನ ಸುಖ-ಸಂತೃಪ್ತಿಗಳಿಗಾಗಿ ಯತ್ನಿಸುವದು ಸ್ವಾರ್ಥತತ್ಪರತೆಯಾದರೆ, ಅತ್ಯುನ್ನತವಾದ ಧ್ಯೇಯ ಸಾಧನೆಗಾಗಿ ಸರ್ವಸ್ವವನ್ನೂ ತ್ಯಜಿಸುವದು ತ್ಯಾಗವಾಗಿದೆ. ಈ ಲೋಕದಲ್ಲಿ ಹಲವು ಜನರು ತಾವು ಆರಾಧಿಸುತ್ತಿರುವ ಜೀವಗಳಿಗಾಗಿ ಸರ್ವಸ್ವವನ್ನೂ ಸಹರ್ಷ ತ್ಯಜಿಸುತ್ತಿರುವ ಚಿತ್ರವನ್ನು ನಾವೆಲ್ಲರೂ ನೋಡಬಹುದು. ಪ್ರೇಮದಿಂದ ನೀಡುತ್ತಿರುವ ಈ ಅರ್ಪಣೆಗಳು ಎಂದಿಗೂ ಕಾಮಲಾಲಸೆಗಳಿಂದ ಉಂಟಾದವುಗಳಲ್ಲ. ಪ್ರೇಮವು ಪಾವನವೂ ಪರಿಶುದ್ಧವೂ ಆಗಿರುವದು; ಮನುಷ್ಯನಿಗೆ ಅದು ಹೊಸದೊಂದು ಬೆಳಕನ್ನು ಪ್ರದಾನ ಮಾಡುತ್ತಿರುವದು. ಮನುಷ್ಯನು ತನ್ನ ಸಂಗಾತಿಯ ಹೃದಯದಲ್ಲಿ ತನ್ನ ಪ್ರತಿಬಿಂಬವನ್ನು ವೀಕ್ಷಿಸಲಿರುವ ಚೈತನ್ಯವನ್ನು ಪ್ರಣಯವು ನೀಡುತ್ತಿರುವದು.

ಪ್ರಣಯಶೂನ್ಯವಾದ ಬದುಕು ಮರುಭೂಮಿಯ ಜೀವನವೇ ಸರಿ! ತನ್ನ ಸುಖ-ದುಃಖಗಳನ್ನು, ವಿಚಾರ ಮತ್ತು ಬಯಕೆಗಳನ್ನು ಅನುಭವಿಸಲು ಒಬ್ಬ ಸಹ ಯಾತ್ರಿಕಳು ಇಲ್ಲದೆ ಹೋದರೆ, ಪಥಿಕನಿಗೆ ಆ ಭಾರವನ್ನು ಹೊರುವುದು ಅತ್ಯಂತ ಪ್ರಯಾಸವಾಗಿ ತೋರುತ್ತದೆ. ಪ್ರಣಯದ ಮೃದುಸರಣಿಯ ಅನುಭವನ್ನು ಹೊಂದದ ಮನುಷ್ಯನ ಬಾಳು ಅತ್ಯಂತ ಕಠೋರವೂ, ದುಃಖಮಯವೂ, ಕರ್ಕಶವೂ ಆಗಿದೆ ಎಂದು ನಾವು ನಿರ್ಧರಿಸಬಹುದು.

ವಿಷಯಾಕುಮಾರಿಯ ಹೃದಯದಲ್ಲಿ ಚಂದ್ರಹಾಸನ ದರ್ಶನದಿಂದ ಪ್ರಣಯಲತೆಯು ಸ್ಥಾನವನ್ನು ಹಿಡಿದು, ತನ್ನ - ಬೇರುಗಳನ್ನು ಬಿಟ್ಟಿತು. ಅವಳು ಆ ತರುಣನಲ್ಲಿ ಅಸಾಮಾನ್ಯವಾಗಿರುವ ಒಂದು ಚೈತನ್ಯವನ್ನು ಕಂಡಳು. ಮೊಗದಲ್ಲಿ ಸದಾ ಹೊಳೆಯುತ್ತಿರುವ ಮಂದಸ್ಮಿತದ ಹಿಂದೆ ಪರರ

ದುಃಖಶಮನಕ್ಕಾಗಿ ಯತ್ನಿಸುವ ದೃಢಸಂಕಲ್ಪವೆಂಬ ಕಿಡಿಯನ್ನು ವಿಷಯಾಕುಮಾರಿಯು ಚಂದ್ರಹಾಸನ ಮೊಗದಲ್ಲಿ ವೀಕ್ಷಿಸಿದಳು. ಪುಷ್ಟವಾದ ದೇಹ, ವಿಶಾಲವಾದ ಕಣ್ಣುಗಳು, ಪ್ರಸನ್ನವಾದ ಮುಖಭಾವ ಇವುಗಳು ಅವಳ ಎದೆಯ ಒಂದು ಮೂಲೆಯಲ್ಲಿ ಅಡಗಿರುವ ವಿಕಾರಗಳನ್ನು ತರಂಗರೂಪವಾಗಿ ಹೊರಬೀಳುವಂತೆ ಮಾಡಿದುವು ಚಂದ್ರಹಾಸ ಎಂಬ ಸುಂದರವಾದ ಹೆಸರನ್ನು ಸ್ಮರಿಸುವುದು ಅಮಾತ್ಯನಂದಿನಿಯ ಹೃದಯದಲ್ಲಿ ಅನಲ್ಪವಾದ ಸಂತೋಷವನ್ನುಂಟುಮಾಡುತ್ತಲಿದ್ದಿತು ಆತ್ಮವು ಇದ ವರೆಗೆ ಹುಡುಕುತ್ತಲಿದ್ದ ಆರಾಧನಾಮೂರ್ತಿಯು ಅವಳಿಗಿಂದು ಲಭಿಸಿದನು.

ವಿಷಯಾಕುಮಾರಿಯು ಹಲವು ಸಾರೆ ತನ್ನ ಅಂತರಂಗದಲ್ಲಿ ಪ್ರತಿಷ್ಠಾಪನೆಯನ್ನು ಹೊಂದಲು ಬಯಸುತ್ತಲಿದ್ದ ಕುಳಿಂದ ಕುಲಚಿತ್ರಭಾನುವಿನ ವಿಗ್ರಹವನ್ನು ಕಿತ್ತೆಸೆಯಲು ಬಯಸದೇ ಇರಲಿಲ್ಲ. ತಾನು ಒಬ್ಬ ತರುಣನನ್ನು ಕಂಡ ಮಾತ್ರದಿಂದ ಅವನ ಆಕೃತಿಗೆ ಪರಿಭ್ರಮಿಸಿ ಉನ್ಮತ್ತಭಾವವನ್ನು ತಾಳುವುದು ತನ್ನ ಬಲಹೀನತೆಯೆಂದು ಆ ಹೆಣ್ಣಿನ ಹೃದಯದಲ್ಲಿ ವಿಚಾರವು ಉದ್ಭವಿಸದಿರಲಿಲ್ಲ. ಅವನ ಹಿಂದೆ ತಾನು ತನ್ನ ಮನಸ್ಸನ್ನು ಓಡಿಸುವುದೇಕೆಂದು ಅವಳು ತನ್ನೊಳಗೆ ಪ್ರಶ್ನಿಸಿದಳು; ಆದರೆ ಅವಳ ಈ ಪ್ರಯತ್ನಗಳು ವಿಜಯವನ್ನು ಸಂಪಾದಿಸಲಿಲ್ಲ ಅವಳ ದೃಢಸಂಕಲ್ಪ, ಮನಸ್ಸನ್ನು ಸ್ವತಂತ್ರವಾಗಿಡಲಿರುವ ಪ್ರಯತ್ನ ಇವುಗಳು ಜಲಮಧ್ಯದ ಯಜ್ಞಗಳಾಗಿ ಪರಿಣಮಿಸಿದುವು

ಪ್ರಧಾನಸೇನಾಪತಿ ಮಾರ್ತಂಡ ವರ್ಮನ ಪುತ್ರಿಯಾದ ಮಾಲಿನಿಯು ಅಮಾತ್ಯನಂದಿನಿಯ ದರ್ಶನಕ್ಕಾಗಿ ಅಲ್ಲಿಗೆ ಬಂದಳು. ಮಾಲಿನಿಯು ಪ್ರಾಯದಲ್ಲಿ ವಿಷಯಾದೇವಿಗಿಂತ ಒಂದೆರಡು ವರ್ಷಗಳು ದೊಡ್ಡವಳಾಗಿರುತ್ತಾಳೆ. ಅವಳು ತಕ್ಕಮಟ್ಟಿಗೆ ರೂಪಲಾವಣ್ಯಯುಕ್ತಳಾಗಿದ್ದಳೆಂದು ಹೇಳಿದರೆ ಸಾಕು. ಅವಳು ವಿವಾಹಪಾಶದಲ್ಲಿ ಬಿದ್ದು, ದಾಂಪತ್ಯಜೀವನದ ಜೇನನ್ನು ಆಸ್ವಾದಿಸುತ್ತಲಿದ್ದಾಳೆ. ಅವಳ ಪತಿದೇವನು ಅಸಾಮಾನ್ಯ ವೀರನೆಂದು ಹೆಸರನ್ನು ಪಡೆದ ಭುವನವಿಕ್ರಮ ವರ್ಮನಾಗಿದ್ದನು. ಈ ಕಥಾಪ್ರಾರಂಭದಲ್ಲಿ ಅವನು ತನ್ನ ಮಾವನೊಂದಿಗೆ ಯುದ್ಧದಲ್ಲಿ ಭಾಗವನ್ನು ವಹಿಸಲು ಗಡಿನಾಡುಗಳಿಗೆ ತೆರಳಿದ್ದನು

"ಅಮಾತ್ಯಕುಮಾರಿ!" ಎಂದು ಮಾಲಿನಿಯು ವಿಷಯಾದೇವಿಯು ಚಿಂತಾಭರಿತಳಾಗಿರುವದನ್ನು ಕಂಡು ಆಶ್ಚರ್ಯದಿಂದ ಪ್ರಶ್ನಿಸಿದಳು.

"ಏನು ಮಾಲಿನಿ?" ಎಂದೆನ್ನುತ್ತ, ತನ್ನ ಅಂತರಂಗದಲ್ಲಿ ತಾಂಡವ

ಮಾಡುತ್ತಿರುವ ವಿಕಾರಗಳನ್ನು ಅಡಗಿಸಲು ಅಮಾತ್ಯನಂದಿನಿಯು ಪ್ರಯತ್ನಿಸಿದಳು.

"ಅಮಾತ್ಯನಂದಿನಿ, ಇಂದು ನೀನೇಕೆ ಸ್ವಾಭಾವಿಕವಾಗಿರುವ ನಿನ್ನ ಉಲ್ಲಾಸವನ್ನು ಪರಿತ್ಯಜಿಸಿ, ಯಾವುದೋ ಒಂದು ಗಾಢವಾದ ವಿಚಾರ ಲೋಕದಲ್ಲಿ ತಲ್ಲೀನಳಾಗಿರುವೆ?"

"ಇಲ್ಲ, ಮಾಲಿನಿ, ನನ್ನನ್ನು ಯಾವ ವಿಚಾರವೂ ಪೀಡಿಸುತ್ತಿರುವದಿಲ್ಲ."

"ನೀನೇಕೆ ನಿನ್ನಂತರಂಗದ ವಿಚಾರಗಳನ್ನು ಮುಚ್ಚಲು ಪ್ರಯತ್ನಿಸುತ್ತಿರುವೆ? ಪ್ರಸನ್ನತೆಯಿಲ್ಲದ ನಿನ್ನ ಮುಖಭಾವವು ನೀನಾವುದೋ ಒಂದು ಚಿಂತೆಯಲ್ಲಿ ನಿರತಳಾಗಿರುವೆಯೆಂಬುದನ್ನು ಸೂಚಿಸುತ್ತಿರುವುದು. ನಿನ್ನಲ್ಲಿ ತಲೆದೋರಿರುವ ಆಲಸ್ಯತೆಯು ಬೇರೆ ಯಾವುದೋ ಒಂದು ಅತ್ಯಾಸಕ್ತಿಯ ವಸ್ತುವು ಕರಗತವಾಗಿದೆ, ಎಂದು ನುಡಿಯುತ್ತಿರುವುದು" ಎಂದು ಅರ್ಥಗರ್ಭಿತವಾದ ಮಾತುಗಳಲ್ಲಿ ಒಂದು ಮಂದಹಾಸವನ್ನು ಬೀರಿ, ಮಾಲಿನಿಯು ತನ್ನ ಕೆಳದಿಯೊಡನೆ ಅಂದಳು.

"ಮಾಲಿನಿ, ನಿನ್ನ ಮಾತುಗಳ ಅರ್ಥವನ್ನು ನಾನು ಊಹಿಸಲಾರೆನು."

"ಅರ್ಥವತ್ತಾದ ವಸ್ತುವೊಂದು ನಿನಗೀಗ ಸಿಕ್ಕಿದಂತೆ ತೋರುತ್ತದೆ; ಹಾಗಿರಲು ನನ್ನ ಮಾತುಗಳ ಅರ್ಥವು ನಿನಗೆ ಹೊಳೆಯದುದರಲ್ಲಿ ಆಶ್ಚರ್ಯವೇನೂ ಇಲ್ಲ." ಎಂದಳು ಮಾಲಿನಿ ಹಾಸ್ಯರಸದಲ್ಲಿ.

ಮಾಲಿನಿಯ ಮಾತುಗಳ ಶ್ರವಣದಿಂದ ಅಮಾತ್ಯನಂದಿನಿಯ ಮುಖವು ಕೆಂಬಣ್ಣವನ್ನು ತಾಳಿತು. ತನ್ನಂತರಂಗದ ವಿಕಾರಗಳನ್ನು ಮಾಲಿನಿಯು ಊಹಿಸಿ ತಿಳಿದುಕೊಂಡಳೇ ಎಂಬ ಭಯವು ಅತ್ಯಧಿಕವಾಯಿತು ಅವಳಿಗೆ. ಕ್ಷಣ ನೇರ ಮಾಲಿನಿಯ ಲೋಚನಗಳನ್ನು ನೋಡುತ್ತ ವಿಷಯಾದೇವಿಯು ಮೌನವನ್ನು ಅವಲಂಬಿಸಿ ನಿಂತಳು. ಯಾವ ಮಾತಾಡಬೇಕೆಂಬುದು ಅವಳಿಗೆ ತಿಳಿಯಲಿಲ್ಲ.

"ಅಮಾತ್ಯಕುಮಾರಿ! ಯಾವುದೋ ಒಂದು ರೋಗವು ನಿನ್ನನ್ನು ಬಾಧಿಸಿದಂತೆ ಕಾಣುತ್ತದೆ!"

"ಯಾವ ರೋಗವದು?"

"ಅದರ ಲಕ್ಷಣಗಳಿಂದ ಅದೊಂದು ಪ್ರಬಲವಾದ ಕಾಹಿಲೆಯೆಂದು ತಿಳಿದುಕೊಂಡೆನು."

"ಅದನ್ನು ನೀನು ಹೇಗೆ ತಿಳಿದೆ?"

"ಒಂದು ಕಾಲದಲ್ಲಿ ಅದು ನನ್ನನ್ನೂ ತೀವ್ರವಾಗಿ ಬಾಧಿಸಿದ್ದಿತು."

"ಯಾವುದು ಆ ಕಾಹಿಲೆ?"

"ಅ....ನು....ರಾ....ಗ."

"ಥೂ! ಹುಚ್ಚೀ, ದೂರ ಹೋಗು! ಅದೇನೂ ನನಗಿಲ್ಲ" ಎಂದು ಸಿಟ್ಟಿಗೆದ್ದವಳಂತೆ ನಟಿಸುತ್ತ, ಅಮಾತ್ಯನಂದಿನಿಯು ಮಾಲಿನಿಯನ್ನು ದೂರಕ್ಕೆ ದೂಡಿದಳು. ಮಾಲಿನಿಯು ತನ್ನ ತೋಳುಗಳಿಂದ ವಿಷಯೆಯ ಕೊರಳನ್ನು ಬಂಧಿಸಿ, ಅವಳ ಕಣ್ಣುಗಳನ್ನು ನೋಡಿದಳು. ಅಮಾತ್ಯನಂದಿನಿಯ ಮೊಗವನ್ನು ನೋಡಲು ಮಾಲಿನಿಯ ಹಾಸ್ಯ, ನಗು ಇವುಗಳೆಲ್ಲವೂ ಅವಳನ್ನು ಬಿಟ್ಟು ತೊಲಗಿದವು ವಿಷಯಾದೇವಿಯ ಕಣ್ಣುಗಳಿಂದ ಬಾಷ್ಪವು ಹರಿಯುತ್ತಿರುವುದನ್ನು ಮಾಲಿನಿಯು ಕಂಡಳು. ಆಶ್ಚರ್ಯದಿಂದ ಅವಳು ತನ್ನ ಗೆಳತಿಯನ್ನು ಆಲಿಂಗಿಸಿಕೊಂಡು ನುಡಿದಳು:--"ಅಮಾತ್ಯನಂದಿನಿ, ನೀನು ಅಳುವುದೇಕೆ?' ಎಂದು.

ಅಮಾತ್ಯನಂದಿನಿಯು ತನ್ನ ಸೀರೆಯ ಸೆರಗಿನಿಂದ ಬಾಷ್ಪಗಳನ್ನು ಒರೆಸಿಕೊಂಡನಂತರ, "ಏನೂ ಇಲ್ಲ"

"ಹಾಗಾದರೆ ಈ ಕಣ್ಣೀರಿನ ಪ್ರವಾಹವೇಕೆ? ನನ್ನ ಮಾತುಗಳು ನಿನ್ನ ಮನಸ್ಸನ್ನು ವೇದನೆ ಪಡಿಸಿದುವೇ? ಕ್ಷಮಿಸು! ಇನು ಮೇಲೆ ಆ ತರದ ಮಾತುಗಳನ್ನು ನಾನಾಡುವುದಿಲ್ಲ"

"ಮಾಲಿನಿ, ನಿನ್ನಿಂದ ಯಾವ ಪ್ರಮಾದವೂ ಘಟಿಸಿಲ್ಲ."

"ಹಾಗಾದರೆ?"

"ಏಕೋ ನನ್ನ ಮನಸ್ಸು ಅಸ್ವಾಸ್ಥ್ಯವನ್ನು ಹೊಂದಿದೆ"

"ಕಾರಣ?"

"ನನಗೆ ತಿಳಿಯದು; ನನ್ನ ಮನಸ್ಸು ಈ ದಿನ ಮೌಢ್ಯವನ್ನು ಹೊಂದಿರುವುದು."

ಇಲ್ಲಿ ಯಾವದೋ ಒಂದು ಪ್ರಧಾನ ಸಂಗತಿಯನ್ನು ಅಮಾತ್ಯನಂದಿನಿಯು ತನ್ನಿಂದ ಮುಚ್ಚುಮರೆ ಮಾಡಲು ಪ್ರಯತ್ನಿಸುತ್ತಿರುವಳೆಂಬುದನ್ನು ಮಾಲಿನಿಯು ಗ್ರಹಿಸಿದಳು ಯಾವದೋ ಒಂದು ಪ್ರಬಲವಾದ ವಿಷಯವು ಅಮಾತ್ಯನಂದಿನಿಯ ಮನಸ್ಸನ್ನು ಪೀಡಿಸುತ್ತಿರುವುದೆಂದೂ, ಅದನ್ನು ಅವಳು ತನ್ನಿಂದ ಮರೆ ಮರೆಮಾಡಲು ಕಾರಣವೇನೆಂದೂ ಆ ಚಾಣಾಕ್ಷಳು ತನ್ನಲ್ಲಿಯೇ ಆಲೋಚಿಸಲು ಯತ್ನಿಸಿದಳು; ಆದರೆ ಅವಳಿಗೆ ಯಾವದೂ ಹೊಳೆಯಲಿಲ್ಲ.

"ಅಮಾತ್ಯನಂದಿನಿ, ನಿನ್ನ ಅಂತರಂಗವನ್ನು ನನಗೆ ಬಿಚ್ಚಿ ತೋರಿಸು.

ಗೆಳತಿ, ನಿನ್ನ ಹೃದಯುವನ್ನು ಬಾಧಿಸಿರುವ ವಿಷಾದವನ್ನು ಅನುಭವಿಸುವದರಲ್ಲಿ ನಾನೂ ಒಂದು ಭಾಗವನ್ನು ವಹಿಸಿ ನಿನ್ನ ಭಾರವನ್ನು ಕಡಿಮೆ ಮಾಡಲು ಪ್ರಯತ್ನಿಸುವೆನು. ನನ್ನನ್ನು ನಂಬು" ಎಂದು ಮಾಲಿನಿಯು ತನ್ನ ಗೆಳತಿಯನ್ನು ಸಂತೈಸುತ್ತ ನುಡಿದಳು.

"ಮಾಲಿನಿ, ನಿನ್ನ ಹಾಗೆ ನನ್ನ ಜೀವನದ ಗೆಳೆತಿಯರು ಬೇರೆ ಇಲ್ಲವೆಂಬುದು ನಿಜ. ನಿನ್ನೊಡನೆ ನನ್ನಂತರಂಗವನ್ನು ಬಿಚ್ಚಿತೋರಿಸಲು ನನಗೆ ನಾಚಿಕೆಯಿಲ್ಲ" ಎಂದು ವಿಷಯಾಕುಮಾರಿಯು ತನ್ನ ಮಾತುಗಳನ್ನು ಬೇರೆ ಸಂಗತಿಗೆ ತಿರುಗಿಸಲು ಯತ್ನಿಸುತ್ತ ಅಂದಳು:—"ರಾಜಕುಮಾರಿಯು ವಿಪತ್ತಿನಿಂದ ಪಾರಾಗಿ ಹಿಂದಿರುಗಿ ಬಂದ ವಾರ್ತೆಯನ್ನು ನೀನು ತಿಳಿದಿರುವೆಯಾ?"

"ಆ ವಾರ್ತೆಯನ್ನರಿತೆನು; ಯಾವನೋ ಒಬ್ಬ ರಾಜಕುಮಾರನು ದುಷ್ಟರ ಕರಗಳಿಂದ ಅವಳನ್ನು ರಕ್ಷಿಸಿದನಂತೆ."

"ಅಹುದು. ನಿನ್ನೇ ದಿನ ಅಣ್ಣನ ಸಂಗಡ ಅವನು ಇಲ್ಲಿಗೆ ಬಂದಿದ್ದನು."

"ನೀನು ಆ ವೀರನನ್ನು ನೋಡಿದೆಯಾ?"

"ಹೂಂ, ಅವನ ಹೆಸರು ಚಂದ್ರಹಾಸನೆಂದು "

ಈ ಹೆಸರನ್ನು ಉಚ್ಚರಿಸುವಾಗ ವಿಷಯಾದೇವಿಯ ಮುಖವು ನಸುಗೆಂಪುವರ್ಣವನ್ನು ತಾಳಿತು. ಅವಳ ಕಣ್ಣುಗಳು ಹೊಳೆದವು. ಅವಳ ಮುಖದಲ್ಲಿ ಗೋಚರವಾದ ಭಾವಭೇದಗಳನ್ನು ದರ್ಶಿಸಿ ಮಾಲಿನಿಯು ಅಮಾತ್ಯನಂದಿನಿಯ ಹೃದಯುವನ್ನು ಪೀಡಿಸುತ್ತಿರುವ ವಿಚಾರವು ಯಾವುದೆಂದು ಊಹಿಸಿ ತಿಳಿದುಕೊಂಡಳು. ಆ ಹೆಣ್ಣು ಹೃದಯುವು ತನ್ನ ಗೆಳತಿಯ ಸಂಕಟವು ಯಾವುದೆಂಬುದನ್ನು ಅರಿತುಕೊಂಡಿತು. ಚಂದ್ರಹಾಸನಲ್ಲಿ ವಿಷಯಾದೇವಿಗೆ ಅನುರಾಗವು ಹುಟ್ಟಿದೆಯೆಂದು ಮಾಲಿನಿಯು ನಿರ್ಧರಿಸಿದಳು. ಮಾಲಿನಿಯು ತನ್ನ ಗೆಳತಿಯ ಅಂತರಂಗವೇನೆಂಬುದನ್ನು ತಿಳಿದುಕೊಳ್ಳಲು, ಸಂತೋಷಭರಿತವಾದ ನಗುವೊಂದು ಅವಳ ವದನಾರವಿಂದದಿಂದ ಹೊರಬಿದ್ದಿತು.

"ಮಾಲಿನಿ, ಏಕೆ, ನಗುತ್ತಿರುವೆ?"

"ಊಂ, ಹೂಂ,-ಏನೂ ಇಲ್ಲ!"

"ಹಾಗಾದರೆ ಉನ್ಮಾದವು ನಿನ್ನನ್ನು ಬಾಧಿಸಿತೇ?"

"ಅದೇನೂ ಇಲ್ಲ; ಅಮಾತ್ಯನಂದಿನಿ, ನೀನು ನನ್ನಿಂದ ಗೋಪ್ಯವಾಗಿಡಲು ಪ್ರಯತ್ನಿಸುತ್ತಲಿದ್ದ ಸಂಗತಿಯನ್ನು ತಿಳಿದುಕೊಂಡೆನು."

"ಯಾವದು ಅದು?"

"ನಾನು ಮೊದಲು ಊಹಿಸಿದ ಅನುರಾಗದ ಕಾಹಿಲೆಯೇ!"

"ಅಲ್ಲದ ಸಲ್ಲದ ಊಹೆಗಳಲ್ಲಿ ನಿನ್ನ ಮತಿಯನ್ನು ವ್ಯಯಗೊಳಿಸಿ ಪ್ರಯೋಜನವಿಲ್ಲ."

"ನನ್ನ ಊಹೆಯು ಸತ್ಯವೆಂಬುದಕ್ಕೆ ನಿನ್ನ ಮೊಗದಲ್ಲಿ ತಲೆದೋರಿರುವ ಲಕ್ಷಣಗಳೇ ಸಾಕ್ಷಿ!"

"ಥೂ! ಹುಚ್ಚೀ!"

'ನಾನು ಹುಚ್ಚಿಯಲ್ಲ; ನೀನು ಚಂದ್ರಹಾಸನಲ್ಲಿ ಅನುರುಕ್ತಳಾಗಿರುವೆ.'

ವಿಷಯಾಕುಮಾರಿಯು ಮಾತಾಡಲಿಲ್ಲ; ಮಾಲಿನಿಯ ಮೊಗವನ್ನು ವಿಸ್ಮಯದೃಷ್ಟಿಯಲ್ಲಿ ಅವಲೋಕಿಸಿದಳು. ಏನು ಮಾತಾಡಬೇಕೆಂಬುದು ಅವಳಿಗೆ ತಿಳಿಯಲಿಲ್ಲ. ಮೂಢಳ ಹಾಗೆ ಆಲೋಚಿಸುತ್ತ ಮೌನವನ್ನವಲಂಬಿಸಿ ನಿಂತಳು.

"ಅಮಾತ್ಯನಂದಿನಿ; ಇದನ್ನು ಕುರಿತು ಇಷ್ಟು ಪರಿಭ್ರಮಿಸಬೇಕಾದುದಿಲ್ಲ ಚಂದ್ರಹಾಸನಲ್ಲಿ ನೀನು ಅನುರಕ್ತಳಾದುದು ಸ್ವಾಭಾವಿಕವಾಗಿದೆ. ಅನುರಾಗವಿಲ್ಲದೆ ಹೆಣ್ಣಿನ ಜೀವನವು ಮುಂದೆ ಸಾಗದು."

"ಆದರೆ ಆ ದಾರಿಯಲ್ಲಿ ಹಲವು ಪ್ರತಿಬಂಧಗಳು ಭಯಂಕರಾಕಾರವನ್ನು ತಾಳಿ ನಿಂತಿರುವುವು"

"ರಾಜಕುಮಾರನನ್ನು ವರಿಸಲು ಯಾವ ಪ್ರತಿಬಂಧಕಗಳೂ ಇಲ್ಲ. ಅವನಂಥ ಶ್ರೇಷ್ಠತರಗತಿಯ ತರುಣರನ್ನು ವರಿಸುವುದರಲ್ಲಿ ಅಮಾತ್ಯರಿಂದಿಗೂ ಅಡ್ಡಿ ಮಾಡಲಾರರು."

"ಆದರೆ ಕುಳಿಂದ ಕುಲಚಿತ್ರಭಾನುವು ನನ್ನ ತಂದೆಯ ವೈರಿಯು!" ಎಂದು ದೀರ್ಘವಾದ ನಿಟ್ಟುಸಿರೊಂದನ್ನು ಹೊರಚೆಲ್ಲಿ ಅಮಾತ್ಯನಂದಿನಿಯು ನುಡಿದಳು. ಆ ಬಿಸಿ ಉಸಿರಿನಲ್ಲಿ ನಿರಾಶೆಯು ತುಂಬಿದ್ದಿತು!

---

## ಉಪವನದಲ್ಲಿ.

ಸುಂದರವಾದ ಹೂಗಳಿಂದ ನಿಬಿಡವಾಗಿ ಸೌಂದರ್ಯವು ಮೂರ್ತಿಮತ್ತಾಗಿ ನಿಂತಿರುವ ಕುಂತಳ ರಾಜವನವು ಅತ್ಯಂತ ಮನೋಹರವಾಗಿರುವದು. ವಿವಿಧ ಜಾತಿಯ ಸುಮಗಳು ವಿಕಾಸವನ್ನು ಹೊಂದಿ ಸಂಜೆಯ ಸೂರ್ಯನ ಕಿರಣಗಳಿಂದ ಅತ್ಯಂತ ರಮಣೀಯತೆಯನ್ನು ಪಡೆದು ನಲಿ

ದಾಡುತ್ತಿರುವವು. ಕೊಳಗಳಲ್ಲಿ ಬೆಳಗುತ್ತಿರುವ ಕೆಂದಾವರೆಯ ಹೂಗಳು ಪ್ರೇಕ್ಷಕನಿಗೆ ಸುಸ್ವಾಗತವನ್ನು ಬಯಸುತ್ತಲಿರುವವು. ಅಲ್ಲಲ್ಲಿ ಹಬ್ಬಿರುವ ಮಲ್ಲಿಕಾ ಲತೆಗಳು ತಮ್ಮ ಹೂಗಳಲ್ಲಿ ತುಂಬಿರುವ ಸುವಾಸನೆಯನ್ನು ನೀಡಿ ಜೀವರಾಶಿಗಳ ಘ್ರಾಣೇಂದ್ರಿಯವನ್ನು ಸಂತೃಪ್ತಿಗೊಳಿಸುವದರಲ್ಲಿ ಬದ್ಧಶ್ರದ್ಧ ವಾಗಿರುವವು. ಹೊಂಬಣ್ಣದ ಜವಂತೀ ಹೂಗಳು ಮಂದಸ್ಮಿತಗಳನ್ನು ಬೀರು ತ್ತ, ಪ್ರೇಕ್ಷಕನ ಮನಸ್ಸನ್ನು ಆಹ್ಲಾದಗೊಳಿಸುವದರಲ್ಲಿ ನಿರತವಾಗಿರುವವು. ಅಲ್ಲಲ್ಲಿ ನಿಂತಿರುವ ದ್ರುಮಗಳು ತಮ್ಮ ಮೃದುವಾದ ಎಳೆ ಚಿಗುರುಗಳ ಬೀಸಣಿಕೆಯಿಂದ ಮನುಷ್ಯನ ಆಯಾಸವನ್ನು ಪರಿಹರಿಸುತ್ತಲಿರುವವು.

ಕುಂತಳ ರಾಜನಂದಿನಿಯು ಉಪವನದಲ್ಲಿ ಒಂದು ಅಮೃತಶಿಲೆಯ ಆಸನದ ಮೇಲೆ ಉಪವಿಷ್ಟಳಾಗಿ ಮಲ್ಲಿಗೆ ಹೂಗಳ ಹಾರವೊಂದನ್ನು ಪೋಣಿ ಸುವುದರಲ್ಲಿ ನಿರತಳಾಗಿರುವಳು. ಪ್ರಸನ್ನಭಾವವನ್ನು ಹೊಂದಿದ ಅವಳ ಕಪೋಲಗಳು ಹರ್ಷರುಚಿಗಳನ್ನು ಹೊರಸೂಸುತ್ತಲಿರುವವು. ವಿಶಾಲವಾದ ನೇತ್ರಗಳು, ಹೊಸದಾದ ಬಾಳು ಅವಳ ದರ್ಶನೇಂದ್ರಿಯಗಳ ಮುಂದೆ ನಿಂತಿ ರುವುದನ್ನು ಅವಲೋಕಿಸುವದರಿಂದ ಸಂಪ್ರಾಪ್ತವಾಗುವ ಆನಂದದ ಕಿಡಿ ಗಳನ್ನು ಹೊರಗೆ ಪ್ರಕಟಿಸುತ್ತಲಿದ್ದುವು ಆ ಹಕ್ಕಿಯ ಹೃದಯದಲ್ಲಿ ವಿಷಾದವೆಂಬುದು ತಿಲಾಂಶದಷ್ಟೂ ಇರಲಿಲ್ಲ ಬಡತನದಿಂದ ಬದುಕುವ ದರಿದ್ರನಿಗೆ ನಿಧಿಯೊಂದು ದೊರಕಿದರೆ ಅವನಿಗೆ ಉಂಟಾಗಬಹುದಾದ ಹರ್ಷ ವೆಷ್ಟಿರಬಹುದೋ, ಅದು ಅವಳ ಹೃದಯದಲ್ಲಿ ತುಂಬಿತುಳುಕುತ್ತಲಿದ್ದಿತು!

ತನ್ನನ್ನು ತಾನೇ ಮರೆತು, ಹರ್ಷವಾರಿಧಿಯಲ್ಲಿ ಮುಳುಗಿ, ರಾಜ ಕುಮಾರಿಯು ಮಲ್ಲಿಗೆಯ ಹೂಮಾಲೆಯನ್ನು ಹೆಣೆಯುತ್ತಲಿದ್ದಳು. ಸುಂದರ ವಾದ ಆ ಹೂಗಳನ್ನು ಪೋಣಿಸುವ ದೃಶ್ಯವು ನೋಡಲು ಬಹು ಮನೋ ಹರವಾಗಿದ್ದಿತು ಅವಳು ತನ್ನಲ್ಲಿಯೇ:—"ಈ ಹೂಮಾಲೆಯನ್ನು ಆತ ನಿಗೆ ಅರ್ಪಿಸಿದರೆ ಅವನು ಅಪರಿಮಿತವಾದ ಹರ್ಷವನ್ನು ಹೊಂದು ವುದರಲ್ಲಿ ಸಂದೇಹವಿಲ್ಲ" ಎಂದು ನುಡಿಯುತ್ತಿದ್ದಳು. ಆ ಹೆಸರನ್ನು ನೆನೆಯು ವಾಗ ಅವಳ ಮನಸ್ಸು ವಿಕಾರಪರವಶವಾಗಿ, ಶರೀರವು ರೋಮಾಂಚನವನ್ನು ಹೊಂದಿತು. ಮೊಗವು ಅರುಣವರ್ಣವನ್ನು ಪಡೆದಿತು; ಕಣ್ಣುಗಳ ರೆಪ್ಪೆ ಗಳು ಅರ್ಧ ಮುಚ್ಚಿಹೋದವು. ಸ್ವಪ್ನಸಾಮ್ರಾಜ್ಯದ ಸುಖವನ್ನು ಅನು ಭವಿಸುತ್ತಿರುವ ಜೀವಿಯಂತೆ, ಅವಳು ವಿಚಾರತಲ್ಲೀನಳಾದಳು. ಅವಳು ತನ್ನ ಮನಸ್ಸಿನಲ್ಲಿಯೇ ತಾನು ನೆನೆಯುತ್ತಿರುವ ರೂಪವನ್ನು ನೋಡಿ, ಹರ್ಷಸಮ್ಮಿಲಿತವಾದ ಲಜ್ಜೆಯನ್ನು ಹೊಂದಿದ್ದರಿಂದ, ಅವಳ ಕೋಮಲ

ಕಪೋಲಗಳು ನಸುಗೆಂಪು ಬಣ್ಣವನ್ನು ತಾಳಿ, ಅರಳಿದ ಗುಲಾಬಿ ಹೂವಿನಂತೆ ಅತ್ಯಂತ ಮನೋಹರವಾಗಿ ಕಂಗೊಳಿಸಿದುವು.

ಈ ರೀತಿ ವಿಚಾರತಲ್ಲೀನಳಾಗಿ ಹಾರ ಪೋಣಿಸುವದರಲ್ಲಿ ನಿರತಳಾಗಿದ್ದ ರಾಜನಂದಿನಿಯು, ತನ್ನನ್ನು ಒಂದು ಮರದ ಹಿಂದೆ ನಿಂತು ಒಬ್ಬ ತರಣನು ಅವಲೋಕಿಸುತ್ತಿರುವದನ್ನು ಕಾಣಲಿಲ್ಲ. ಸುಂದರಾಕಾರದ ಯುವಕನೋರ್ವನು ಸುವಾಸನೆಯಿಂದ ತುಂಬಿದ ಸುಮಗಳಿಂದ ನಿಬಿಡವಾದ ಒಂದು ಸಂಪಿಗೆಯ ಮರದ ಹಿಂದೆ ನಿಂತು, ರಾಜನಂದಿನಿಯ ರೂಪ-ಲಾವಣ್ಯಗಳನ್ನು ಸವಿದು ಸಂತೃಪ್ತಿ ಹೊಂದುವದರಲ್ಲಿ ನಿರತನಾಗಿದ್ದನು. ಅವನೆಷ್ಟು ಸಮಯದ ವರೆಗೆ ದ್ರುಮಚ್ಛಾಯೆಯ ಆಶ್ರಯವನ್ನು ಹೊಂದಿ ಆ ರೀತಿ ನಿಂತಿದ್ದನೆಂಬುದು ನಿರ್ಧರಿಸುವದು ಕಷ್ಟವಾಗಿದೆ. ಭಾವನೆಯ ಕಡಲಿನಲ್ಲಿ ತೇಲಿ ಆನಂದವನ್ನು ಆಸ್ವಾದಿಸುತ್ತಲಿರುವ ರಾಜಕುಮಾರಿಯು ತನ್ನ ಕಡೆಗೆ ದೃಷ್ಟಿ ಬೀರಲಾರಳೆಂಬುದನ್ನು ಅವನು ತಿಳಿದು ಒಂದೊಂದು, ಹೆಜ್ಜೆಯನ್ನು ಮುಂದಿಡುತ್ತ ರಾಜಕುಮಾರಿಯ ಬೆನ್ನ ಹಿಂದೆ ಬಂದು ನಿಂತನು; ಆದರೆ ಹಾರವನ್ನು ಹೆಣೆಯುವದರಲ್ಲಿ ನಿರತಳಾದ ರಾಜನಂದಿನಿಗೆ ಅವನು ಬಂದುದು ಗೋಚರವಾಗಲೇ ಇಲ್ಲ.

ಆ ತರುಣನು ಎರಡು ನಿಮಿಷಗಳ ಪರ್ಯಂತ ಆ ರೀತಿ ನಿಂದಿರಬಹುದು; ರಾಜಕುಮಾರಿಯು ತನ್ನ ಕೆಲಸವನ್ನು ನಿಲ್ಲಿಸಿ ಮೊಗವೆತ್ತಿ ನೋಡಿದಳು. ಸುಂದರವಾದ ಒಬ್ಬ ಯುವಕನ ವದನವು ತನ್ನ ಬೆನ್ನ ಹಿಂದೆ ನಿಂತು ಮಂದಸ್ಮಿತವನ್ನು ಚೆಲ್ಲುತ್ತಿರುವುದನ್ನು ಅವಳು ವೀಕ್ಷಿಸಿದಳು. ಅವಳು ನಾಚಿಕೆ-ಸಂಭ್ರಮ ಇವುಗಳಿಂದ ಕೂಡಿದವಳಾಗಿ ತನ್ನಾಸನವನ್ನು ಬಿಟ್ಟು ಎದ್ದು ನಿಂತಳು.

"ರಾಜನಂದಿನಿ! ನನ್ನನ್ನು ಕಂಡು ಭಯವಿಹ್ವಲಳಾದೆಯಾ?" ಎಂದನು ಆ ತರುಣನು.

ರಾಜನಂದಿನಿಯು ಮಾತಾಡಲಿಲ್ಲ; ತನ್ನ ಲಲಾಟದಲ್ಲಿ ಮುತ್ತಿನಂತೆ ನಿಂತಿರುವ ಬೆವರಿನ ಹನಿಗಳನ್ನು ಸೀರೆಯ ಸೆರಗಿನಿಂದ ಒರೆಸಲು ಪ್ರಯತ್ನಿಸಿದಳು. ತನ್ನ ಕಡೆಗಣ್ಣಿಗಳಿಂದ ಒಂದು ಬಾಣವನ್ನು ತರುಣನ ಬಳಿಗೆ ಎಸೆದು, ಶಿರವನ್ನು ತಗ್ಗಿಸಿ ನೆಲವನ್ನು ನೋಡುತ್ತಾ ನಿಂತಳು. ಲಜ್ಜೆಯು ಆ ಚೆಲುಮೊಗವನ್ನು ಆವರಿಸಿದ್ದಿತು.

"ರಾಜನಂದಿನಿ! ಅದೇಕೆ ಮೌನವು? ನಾನೊಬ್ಬ ತಸ್ಕರನೆಂದು ಬಗೆದಿರುವೆಯಾ?"

"ತರುಣಿಯೊಬ್ಬಳು ಏಕಾಂಗಿಯಾಗಿ, ಸ್ವೈರೋಲ್ಲಾಸಕ್ಕೆ ಉಪವನಕ್ಕೆ ಬರಲು, ಅವಳನ್ನು ಹಿಂಬಾಲಿಸುವುದು ವೀರರಿಗೆ ಉಚಿತವೇ?"

"ತಸ್ಕರರ ಬಾಧೆಯು ನಿನ್ನನ್ನು ಅಂಟಬಹುದೆಂದು ವಿಚಾರಿಸಿ ಬಂದೆನು; ನಾನು ಇಲ್ಲಿ ನಿಲ್ಲುವುದು ನಿನಗೆ ಇಷ್ಟವಾಗದಿದ್ದರೆ, ಈಗಲೇ ಉಪವನವನ್ನು ತ್ಯಜಿಸಿ ಹೋಗುವೆನು."

"ಕ್ಷಮಿಸಿರಿ; ತಾವು ಗೈದ ಉಪಕಾರಗಳನ್ನು ಮರೆಯುವ ಪಾಪಿನಿಯು ನಾನಲ್ಲ."

"ರಾಜಕುಮಾರಿ, ಈ ಎರಡು ಬಣ್ಣಗಳೇಕೆ? ಈಗ ಒಂದು ನಿಮಿಷಕ್ಕೆ ಮೊದಲು ನೀನು ನನ್ನ ಮೇಲಿನ ಕೋಪದ ಬಾಣವನ್ನು ಪ್ರಯೋಗಿಸಿದೆ? ಈಗೇಕೆ ಈ ಕೃತಜ್ಞತೆಯ ಭಾರವನ್ನು ನನ್ನ ಮೇಲೆ ಹೊರಿಸುತ್ತಿರುವೆ?

ರಾಜಕುಮಾರಿಯು ಮಾತಾಡದೆ ತರುಣನ ಕಡೆಗೆ ತನ್ನ ಕಡೆಗಣ್ಣಿನ ನೋಟವನ್ನು ಬೀರುತ್ತಾ ನಿಂತಳು. ತಾನು ಏನು ಮಾತಾಡಬೇಕೆಂಬುದು ಅವಳಿಗೆ ತಿಳಿಯಲಿಲ್ಲ; ತಾನು ಆ ತರುಣನೊಡನೆ ಆಡಿದ ಮಾತುಗಳು ಅಸಂಬದ್ಧವಾದವುಗಳು ಎಂಬುದು ಈಗ ಅವಳಿಗೆ ತಿಳಿದಿತು. ತಾನು ಪುನಃ ತಪ್ಪುಗಳನ್ನು ಹೇಳಿ ಎಲ್ಲಿ ಹಾಸ್ಯಕ್ಕೆ ಗುರಿಯಾಗುವೆನೋ? ಎಂಬ ಭೀತಿಯು ಅವಳಿಗಿದ್ದಿತು. ಏನು ನುಡಿಯಬೇಕೆಂಬುದನ್ನು ತಿಳಿಯದೆ, ಒಂದು ಶಿಲಾಪ್ರತಿಮೆಯಂತೆ ನಿಂತಳು ಅವಳು.

"ನಾನು ನಾಳೆ ದಂಡಿನೊಡನೆ ತೆರಳುವೆನು."

"ಎಲ್ಲಿಗೆ?"

"ರಣಭೂಮಿಗೆ; ಕುಂತಳ ಸಾಮ್ರಾಜ್ಯಕ್ಕಾಗಿ ಕಾದಾಡಲು!'

"ರಣಭೂಮಿ ಎಂಬ ಮಾತನ್ನು ಕೇಳಿದೊಡನೆಯೇ ರಾಜನಂದಿನಿಯ ಶರೀರವು ಭೀತಿಯಿಂದ ಕಂಪಿಸಿತು ಕಾದಾಟವೆಂದರೆ ಅವಳ ರಕ್ತವು ಹೆಪ್ಪುಗಟ್ಟುವದು. ಅವಳ ಸ್ವಭಾವವು ಹೀಗಿರಲು, ತಾನು ಕದನಕ್ಕೆ ತೆರಳುವೆನೆಂದು ನುಡಿದ ತರುಣನ ಮಾತುಗಳು ಅವಳನ್ನು ಕಾತರಿಸುವಂತೆ ಮಾಡಿದುವು. "ಭಯವಾಗುವದಿಲ್ಲವೇ?"

"ಅದೇಕೆ ಭಯವು? ವೀರರಿಗೆ ಸಂಗ್ರಾಮ ಭೂಮಿಯಷ್ಟು ಪಾವನವಾದ ತೀರ್ಥಸ್ಥಳವು ಬೇರೊಂದಿಲ್ಲವೆ"ಂದು ತರಣನು ನಗುತ್ತ ನುಡಿದನು.

"ನನಗೇಕೋ ಕಾದಾಟವೆಂದರೆ ಭಯ! ಇತರ ಹುಡುಗಿಯರು ರಣಭೂಮಿಗೆ ಸಂಬಂಧಿಸಿದ ಕತೆಗಳನ್ನು ಕೇಳಲು ಹೆಚ್ಚು ಇಷ್ಟಪಡುತ್ತಾರೆ; ಆದರೆ ಆ ಭಯಂಕರ ವರ್ಣನೆಯನ್ನು ಕೇಳಲು ನನ್ನಿಂದಾಗುವದಿಲ್ಲ."

ಎಂದು ಒಂದು ಬಿಸಿಯುಸುರನ್ನು ಸೂಚಿಸುತ್ತ ರಾಜನಂದಿನಿಯು ಹೇಳಿದಳು.

"ಅದು ನಿನ್ನ ಎದೆಯು ಅಷ್ಟು ಮೃದುವಾದುದರಿಂದಾಗಿರಬಹುದು!"

"ಹಾಗಾದರೆ ಯುದ್ಧರಂಗದಿಂದ ಹಿಂದಿರುಗಿ ಬರುವದು ಯಾವಾಗ?"

"ವಿಜಯಲಕ್ಷ್ಮಿಯೊಡನೆ-ಅಲ್ಲದಿದ್ದರೆ--ಸ್ವರ್ಗಲಕ್ಷ್ಮಿಯ ಸಂದರ್ಶನ!" ಎಂದು ನಿಶ್ಚಯ ಸ್ವರದಲ್ಲಿ ಆ ತರಣನು ನುಡಿದನು. ಆ ವಚನ ಕೇಳುವಾಗ ರಾಜನಂದಿನಿಯ ಹೃದಯವೊಂದು ಬಾರಿ ಕಂಪಿಸಿತು.

"ರಾಜನಂದಿನಿ, ಏಕೆ ತಲ್ಲಣಿಸುತ್ತಿರುವೆ? ಕರದಲ್ಲಿ ಖಡ್ಗವನ್ನು ಹಿಡಿದು ಬಾಳಬೇಕಾಗಿ ಬರುವ ಕ್ಷತ್ರಿಯನ ಅವಸ್ಥೆಯು ಇದಲ್ಲದೆ ಇನ್ನೇನು?'

"ಆದರೆ ಅದನ್ನು ಕುರಿತು ಆಲೋಚಿಸುತ್ತಿರುವಾಗ, ನನಗೆ ಅತ್ಯಂತ ಭಯವಾಗುತ್ತಿರುವುದು. ಕೊಲೆ! ನರಹತ್ಯೆ! ಇವು ಎಷ್ಟು ಭೀಕರವಾಗಿಹವು! ಮರಣದೊಡನೆ ಇರುವ ಆಟಗಳು!"

"ಹೌದು; ಆದರೆ ಅದೆಷ್ಟು ಭಯಂಕರವಾಗಿದ್ದರೂ, ಪ್ರಜಾಪಾಲನೆಗಾಗಿ ಆಯುಧವನ್ನು ಹಿಡಿದಿರುವ ಕ್ಷತ್ರಿಯನ ಕರ್ತವ್ಯವೇ ಅದಾಗಿದೆ! ಒಂದು ದೇಶದ ಜನರ ಹಿತವನ್ನು ಚಿಂತಿಸಿ ಕೆಲವರನ್ನು ಕೊಲ್ಲಬೇಕಾಗಿ ಬರಬಹುದು; ಒಂದು ಕುಟುಂಬದ ರಕ್ಷಣೆಗಾಗಿ ಒಬ್ಬನು ಪ್ರಾಣದಾನವನ್ನು ಮಾಡಬೇಕಾಗಿ ಬರಬಹುದು. ಒಬ್ಬ ಜ್ಞಾನಯೋಗಿಯ ದೃಷ್ಟಿಯಲ್ಲಿ ಇದು ಅತ್ಯಂತ ಬೀಭತ್ಸವೂ, ಅಸಹ್ಯವೂ ಆಗಿ ತೋರಿದರೆ, ಒಬ್ಬ ಕರ್ಮಸಾಧಕನಿಗೆ ಈ ಭಯಂಕರ ವ್ಯಾಪಾರಗಳು ಅವನ ಕರ್ತವ್ಯಗಳಾಗಿರುತ್ತವೆ. ಕ್ಷತ್ರಿಯರು ಯುದ್ಧವು ಭಯಂಕರ ವ್ಯಾಪಾರವೆಂದೂ, ಅಧರ್ಮವೆಂದೂ ನೆನೆದು ತಮ್ಮ ಬಿಲ್ಲುಬಾಣಗಳನ್ನು ಮುರಿದು ಮೂಲೆಗೆ ಎಸೆದರೆ, ಅದರಿಂದಾಗುವ ಪರಿಣಾಮವು ಕೆಟ್ಟುದಲ್ಲದೆ, ಒಳಿತಾಗಲಾರದು. ಲೋಕವು ಒಂದು ವೇಳೆ ಆ ಅತ್ಯುನ್ನತ ಪದವಿಗೆ ತಲುಪಿದ್ದರೆ, ಕಾರ್ಮುಕ-ಖಡ್ಗಗಳು ಅವಶ್ಯವಿರುತ್ತಿರಲಿಲ್ಲ; ಆದರೆ ನಮ್ಮ ದುರ್ದೈವದಿಂದ ಜಗತ್ತು ಇನ್ನೂ ಆ ಸ್ಥಿತಿಗೆ ತಲುಪಿರುವದಿಲ್ಲ. ನಮ್ಮ ನಾಡಿನಲ್ಲಿ ಅನೇಕಾನೇಕ ಮಂದಿ ಯೋಗಿಗಳೂ, ಮಹರ್ಷಿಗಳೂ, ಅವತಾರ ಪುರುಷರೂ ಜನ್ಮವೆತ್ತಿ ಧರ್ಮಪ್ರಸಾರವನ್ನು ಮಾಡಿದ್ದರೂ ದುಷ್ಟತನವು ಪರಿಪೂರ್ಣವಾಗಿ ನಶಿಸಿರುವುದಿಲ್ಲ. ಆ ಕೆಡುಕುಗಳನ್ನು-ಅಧರ್ಮವನ್ನು ಎದುರಿಸಲು ಕ್ಷಾತ್ರತೇಜವು ಅತ್ಯಾವಶ್ಯಕವಾಗಿದೆ. ಉಪದೇಶಗಳಿಂದ ಸರಿಯಾದ ಮಾರ್ಗವನ್ನು ಹಿಡಿಯದವನನ್ನು ದಂಡನೆಯಿಂದಲಾದರೂ ಸರಿಯಾದ ಪಥಕ್ಕೆ ಕರೆದುಕೊಂಡು ಬರಬೇಕಾಗಿದೆ ಈ ದಂಡನಾಪದ್ಧತಿಯೇ ಕ್ಷಾತ್ರಧರ್ಮವು! ಕ್ಷತ್ರಿಯನಾದವನು ಈ ಉದ್ಯಮವು ಸರಿಯಲ್ಲವೆಂದು

ಬಗೆದು, ಕರದಲ್ಲಿ ಹಿಡಿದ ಆಯುಧವನ್ನು ತ್ಯಜಿಸುವದು ಅವನ ಅಧಃಪತನದ ದಾರಿಯಾಗಿದೆ"

"ತಾವು ಅಸಾಧಾರಣ ಪಂಡಿತರಿರುವಿರಿ; ವಾದಗಳನ್ನು ಖಂಡಿಸಲು ಶಕ್ತಳು ನಾನಲ್ಲ ಆದರೂ ಸಮಯವನ್ನು ಕುರಿತು ವಿಚಾರಿಸುವಾಗ, ನನ್ನ ನೇತ್ರರು ಹೆಪ್ಪುಗಟ್ಟುತ್ತದೆ. ವಿಪತ್ತುಗಳ ನಡುಮನೆಯೇ ಅದಾಗಿದೆ! ಜೀವವನ್ನು-ನಾವು ಅತ್ಯಂತ ಆಸಕ್ತಿಯಿಂದ ಕಾಣುತ್ತಿರುವ ಪ್ರಾಣವನ್ನು-ಬಲಿಯಾಗಿ ಅರ್ಪಿಸುವದನ್ನು ಕುರಿತು ಚಿಂತಿಸುವಾಗ-" ಎಂದು ರಾಜಕುಮಾರಿಯು ಅರ್ಧನುಡಿದು ಸುಮ್ಮನಾದಳು.

"ಅದೇನೇ ಇರಲಿ. ರಾಜನಂದಿನಿ, ಅಬಲೆಯರಿಗೆ ಯುದ್ಧದಲ್ಲಿ ಭಯವಿರುವದು ಸ್ವಾಭಾವಿಕವು!" ಎಂದು ತರುಣನು ಮಂದಸ್ಮಿತದೊಡನೆ ಅಂದನು. ತರುಣನ ನುಡಿಗಳನ್ನು ಕೇಳಿ ಚಂಪಕಮಾಲಿನಿಯು ಇನ್ನಿಷ್ಟು ನಾಚಿದಳು.

"ರಾಜನಂದಿನಿ, ನಾನು ತೆರಳುವದಕ್ಕಿಂತ ಮುಂಚೆ, ಒಂದು ಭಿಕ್ಷೆಯನ್ನು ಯಾಚಿಸುವುದಕ್ಕಾಗಿ ನಿನ್ನ ಬಳಿಗೆ ಬಂದಿರುವೆನು"

"ಅಬಲೆಯಾದ ನಾನು ಯಾವ ದಾನವನ್ನು ನೀಡಲಿ?"

"ನಿನ್ನಲ್ಲಿರುವ ವಸ್ತುವನ್ನೇ ನಾನು ಬೇಡುತ್ತಿರುವೆನು!" ಎಂದು ರಾಜನಂದಿನಿಯ ಕಣ್ಣುಗಳನ್ನು ನೋಡುತ್ತ, ವಿಕಾರಭರಿತ ಹೃದಯದೊಡನೆ ತರುಣನು ನುಡಿದನು.

"ತಾವು ನನ್ನನ್ನು ದುಷ್ಟರ ಕರಗಳಿಂದ ರಕ್ಷಿಸಿದವರು; ತಾವು ಯಾವುದನ್ನು ಯಾಚಿಸಿದರೂ ಅದನ್ನು ನೀಡಲು ಈ ಪಾಮರಳು ಸಿದ್ಧಳು."

"ನಿನ್ನ ಮಾತುಗಳನ್ನು ನಂಬಲೋ?"

"ಧಾರಾಳವಾಗಿ!"

"ಅಂತ್ಯದಲ್ಲಿ ನನ್ನನ್ನು ಹತಾಶನನ್ನಾಗಿ ಮಾಡಬಾರದು."

"ನಾನು ಅದನ್ನು ನೀಡಲು ಶಕ್ತಳಾದರೆ, ತಾವು ಹತಾಶರಾಗಬೇಕಾದುದಿಲ್ಲ."

"ನಿನಗೆ ಮನಸ್ಸಿದ್ದರೆ ಅದನ್ನು ನೀಡಲು ಸಾಧ್ಯವಾಗುವುದು."

"ಹಾಗಾದರೆ ಏನನ್ನಾಗಿದೆ ತಾವು ಬೇಡುವದು?"

"ಅಂತ್ಯದಲ್ಲಿ ನನ್ನನ್ನು ಒಬ್ಬ ಹುಚ್ಚನೆಂದು ಹೇಳಬಾರದು."

"ಇಲ್ಲ."

"ಹಾಗಾದರೆ........" ಎಂದು ಭಯಕಂಪಿತ ಸ್ವರದಲ್ಲಿ ತರುಣನು

ನುಡಿಯತೊಡಗಿ, ಅನಂತರ ಅರ್ಧದಲ್ಲಿಯೇ ತನ್ನ ಮಾತನ್ನು ನಿಲ್ಲಿಸಿದನು.

"ಏಕೆ, ತಮ್ಮ ಮಾತುಗಳನ್ನು ಅರ್ಧದಲ್ಲಿ ನಿಲ್ಲಿಸಿದಿರಿ?"

"ಹೇಳಿಬಿಡಲೋ?"

"ಅಗತ್ಯವಾಗಿ"

"ರಾಜನಂದಿನಿ, ಕೋಪಿಸಬೇಡ; ನಾನೀಗ ಪ್ರಣಯಭಿಕ್ಷೆಯನ್ನು ಯಾಚಿಸಲು ಬಂದಿರುವೆನು. ನಿನ್ನ ಹೃದಯದಲ್ಲಿ ನನಗೆ ಸ್ಥಾನವನ್ನು ನೀಡಬೇಕೆಂಬುದೇ ನನ್ನ ಪ್ರಾರ್ಥನೆಯು!"

ಚಂಪೆಯು ಮಾತಾಡಲಿಲ್ಲ; ಲಜ್ಜೆಯಿಂದ ಶಿರವು ಬಗ್ಗಿ ಹೋಯಿತು. ಮೈ ಬೆವರಿತು. ಹೃದಯಸ್ಪಂದನವು ಅತ್ಯಂತ ವೇಗದಲ್ಲಾಗತೊಡಗಿತು. ತರುಣನನ್ನು ಒಮ್ಮೆ ತನ್ನ ಕಡೆಗಣ್ಣಿನಿಂದ ನೋಡಿದಳು. ಅವನ ಪ್ರಾರ್ಥನೆಗೆ ಯಾವ ಜವಾಬನ್ನೂ ಅವಳು ಹೇಳಲಿಲ್ಲ.

ತರುಣನು ಮೌನವನ್ನು ಭಂಜಿಸಿದನು; ರಾಜನಂದಿನಿಯ ವದನ ಮಂಡಲವನ್ನು ನೋಡುತ್ತ ಅವನು ನುಡಿಯಲಾರಂಭಿಸಿದನು: "ರಾಜನಂದಿನಿ, ನಾನು ನಿನಗೆ ಯೋಗ್ಯನಲ್ಲವೆಂಬುದನ್ನು ಬಲ್ಲೆನು. ದುಷ್ಟರ ಕರಗಳಿಂದ ನಿನ್ನನ್ನು ಕಾಪಾಡಿದಂದಿನಿಂದ ನಿನ್ನ ರೂಪವು ನನ್ನ ಎದೆಯಲ್ಲಿ ನಿಂತಿತು; ನನ್ನ ಮನಸ್ಸು ನಿನ್ನ ಹಿಂದೆಯೇ ಓಡಲಾರಂಭಿಸಿತು. ಹಲವು ವಿಧದ ಸಂಯಮನಗಳಿಂದ ಹೃದಯದಲ್ಲಿ ಮೂಡಿದ್ದ ಅನುರಾಗಪಿಶಾಚವನ್ನು ಓಡಿಸಲು ನಾನು ಪ್ರಯತ್ನಿಸಿದೆನು; ಆದರೆ ನಾನು ನಡೆಯಿಸಿದ ಉದ್ಯಮಗಳು ವಿಫಲವಾದವು. ನನ್ನ ಹೃದಯದಲ್ಲಿ ಆತುರವು ತೀವ್ರವಾಗಿ ಚಿಗುರಿ ಬೆಳೆಯಲಾರಂಭಿಸಿತು. ನೀನಿಲ್ಲದೆ ಹೋದರೆ, ನನ್ನ ಜೀವನವು ಶೂನ್ಯವಾಗಿ ಹೋಗುವುದೆಂಬ ಹೆದರಿಕೆಯು ನನ್ನಲ್ಲಿ ತಲೆದೋರುವದು. ಮೌನದಲ್ಲಿ ಆ ಪ್ರಣಯಾಗ್ನಿ ಜ್ವಾಲೆಯನ್ನು ಸಹಿಸಲು ನನಗೆ ಅಸದಳವಾಗಿ ಪರಿಣಮಿಸಿದೆ. ಆದುದರಿಂದ ರಾಜಕುಮಾರಿ, ನಾನೀಗ ಪ್ರಣಯ ಭಿಕ್ಷೆಯನ್ನು ಯಾಚಿಸುವದಕ್ಕಾಗಿ ಬಂದಿರುವೆನು. ನಿರ್ಲಜ್ಜನಾಗಿ ನಾನು ಭಿಕ್ಷೆಯನ್ನು ಯಾಚಿಸಿದುದು ಅನುಚಿತವಾಗಿರಬಹುದು. ನನ್ನ ಮನಸ್ಸಿನಲ್ಲಿಯೇ ಕುದಿಯುತ್ತಿರುವ ಈ ವಿಚಾರಗಳನ್ನು ರಹಸ್ಯವಾಗಿಡುವದಕ್ಕಿಂತ ಮೇಲು. ನನ್ನ ಹೃದಯಕವಾಟಗಳನ್ನು ತೆರೆದು ನಿನಗೆ ತೋರಿಸುವದು ಉಚಿತವೆಂದು ಭಾವಿಸಿದುದರಿಂದ ಈ ರೀತಿ ವರ್ತಿಸಿದೆನು. ಕರವಾಳವನ್ನು ನಾನು ನಿನ್ನ ಹಸ್ತಗಳಲ್ಲಿ ನೀಡಿರುವೆನು; ನನ್ನನ್ನು ಕೊಲ್ಲುವ ಅಥವಾ ಕಾಯುವ ಕೆಲಸವು ನಿನ್ನದು."

ಆ ತರುಣನು ಕುಳಿಂದ ವಂಶಪ್ರದೀಪಕನಾದ ಚಂದ್ರಹಾಸನಾಗಿದ್ದನು. ರಾಜಕುಮಾರಿಯು ಮೌನದಲ್ಲಿ ಚಂದ್ರಹಾಸನ ದೀರ್ಘವಾದ ನುಡಿಗಳನ್ನು ಆಶ್ರಾವಿಸುತ್ತಲಿದ್ದಳು. ಅವನ ಮಾತುಗಳನ್ನು ಲಾಲಿಸಲು ಅವಳ ನೇತ್ರಗಳು ತಾರೆಗಳಂತೆ ಪ್ರಕಾಶಮಾನವಾದವು. ಎದೆಯಲ್ಲಿ ಉದಯವನ್ನು ಹೊಂದಿದ ಹರ್ಷವು ಮೊಗದಲ್ಲಿ ಹರಿದಾಡಲಾರಂಭಿಸಿತು; ಆದರೆ ಲಲನಾ ಸಹಜವಾದ ಲಜ್ಜೆಯು ಅವಳ ಮನಸ್ಸನ್ನು ಬಂಧಿಸಿದುದರಿಂದ, ಮಾತಾಡುವದು ಅವಳಿಗೆ ಸಾಧ್ಯವಾಗಲಿಲ್ಲ.

"ರಾಜನಂದಿನೀ!" ಕಂಪಿತ ಸ್ವರದಲ್ಲಿ ಚಂದ್ರಹಾಸನು ನುಡಿದನು: "ನನ್ನ ಅಪೇಕ್ಷೆಯನ್ನು ನಿರಸನ ಮಾಡದಿರು! ನಾನು ನಿನ್ನಿಂದ ಅಪೇಕ್ಷಿಸುವದು ಒಂದೇ ಒಂದು ಮಾತನ್ನು ಮಾತ್ರವಾಗಿದೆ. ನಿನಗಾಗಿ ಈ ಜೀವನದಲ್ಲಿ ಯಾವ ತ್ಯಾಗಗಳನ್ನೂ ಮಾಡಲು ನಾನು ಸನ್ನದ್ಧನಾಗಿರುವೆನು. ನೀನಿಲ್ಲದೆ ಹೋದರೆ ನನ್ನ ಬಾಳುವೆಯಲ್ಲಿ ಬೆಳಕು ಲಭಿಸಲಾರದು. ನೀನು ನನ್ನ ಅಪೇಕ್ಷೆಯನ್ನು ಸ್ವೀಕರಿಸಿದರೆ ನಾನು ಕೃತಾರ್ಥನಾದೆನು ಇಲ್ಲದಿದ್ದರೆ, ಆಜೀವಪರ್ಯಂತ ಬ್ರಹ್ಮಚರ್ಯವನ್ನು ಸ್ವೀಕರಿಸಿ, ದಿನಗಳನ್ನು ಕಳೆಯುವೆನು."

ಎಷ್ಟು ದೈನ್ಯದಿಂದ ಅವನು ಆ ನುಡಿಗಳನ್ನು ನುಡಿದನೆಂಬುದನ್ನು ವಿವರಿಸುವದು ಕಷ್ಟವು. ಅನುರಾಗವೆಂಬ ಸುಧಾಪಾನದಿಂದ ಉನ್ಮತ್ತತೆಯನ್ನು ಹೊಂದಿದ ಅವನ ಮನಸ್ಸು ಚಂಪಕಮಾಲಿನಿಯಲ್ಲಿ ವಿಲೀನವನ್ನು ಹೊಂದುವುದಕ್ಕಾಗಿ ಹೊಯ್ದಾಡುತ್ತಲಿದ್ದಿತು. ಅವಳ ಹೃದಯದಲ್ಲಿ ತನ್ನ ಹೃದಯವನ್ನು ಬೆರೆಸುವುದೇ ಪೂರ್ಣತೆಗಿರುವ ಏಕದಾರಿಯೆಂದು ಅವನು ಬಗೆದಿದ್ದನು. ರಾಜನಂದಿನಿಯಿಂದ ಪ್ರತ್ಯುತ್ತರವನ್ನು ನಿರೀಕ್ಷಿಸುತ್ತಾ ಅವನು ಶಿಲಾಗೊಂಬೆಯಂತೆ ನಿಂತನು.

"ತಾವು ಬಹು ಶ್ರೇಷ್ಠರು; ನನ್ನಂಥ ಅಪರಿಪಕ್ವ ಬುದ್ಧಿಯ ಕಿಶೋರಿಯು ಏನಾದರೂ ಅಪರಾಧಗಳನ್ನು ಗೈದಿದ್ದರೆ ತಾವು ಕ್ಷಮಿಸಿರಿ!"

"ರಾಜನಂದಿನಿ, ನೀನು ಸಹಸ್ರ ಅಪರಾಧಗಳನ್ನು ಗೈದರೂ ನಾನು ಕ್ಷಮಿಸುವೆನು. ನಿನ್ನ ಪ್ರೇಮವನ್ನಾಗಿದೆ ನಾನು ಯಾಚಿಸುತ್ತಿರುವದು!"

"ನನ್ನಲ್ಲಿರುವ ಸರ್ವಸ್ವವನ್ನೂ ನನ್ನ ಜೀವನದ ಭಾಗ್ಯವಿಧಾತನಿಗೆ ಸಮರ್ಪಿಸಿರುವೆನು!"

"ಆ ಭಾಗ್ಯಶಾಲಿ ಯಾರು? ನಿನ್ನ ಹೃದಯವನ್ನು ಅಲಂಕರಿಸಿರುವ ದಿನಮಣಿ ಯಾರು? ರಾಜನಂದಿನಿ, ನಿನ್ನ ಹೃದಯದಲ್ಲಿ ನನಗೆ ಸ್ಥಾನವಿಲ್ಲವೇ?"

"ಮಾನವ ಶ್ರೇಷ್ಠನಾದ ನರಕೇಸರಿಗೆ ಅರ್ಪಿಸಿರುವೆನು ಈ ಹೃದಯ

ವನ್ನು! ಆ ದಿವ್ಯ ಚರಣತಲಗಳಲ್ಲಿ ಈ ನನ್ನ ತನುವನ್ನು ಅರ್ಪಿಸಲು ನಾನು ಸನ್ನದ್ಧಳಾಗಿರುವೆನು. ಆ ರಾಜಕುಮಾರನಂಥ ಶೂರರು ಇಂದು ಭಾರತ ವರ್ಷದಲ್ಲಿ ಬೇರೊಬ್ಬರಿಲ್ಲವೆಂದು ನನ್ನ ಮನವರಿಕೆಯು!"

"ಯಾರು ಆ ಪುಣ್ಯಾತ್ಮ?"

"ಸ್ವಾಮಿಯ ಪುಣ್ಯನಾಮವನ್ನುಸುರುವದು ಕುಲವಧುಗಳಿಗೆ ಭೂಷಣವಲ್ಲ!"

"ಯಾವ ದೇಶದವನೆಂಬುದನ್ನೂ ಯಾರ ಮಗನೆಂಬುದನ್ನೂ ಹೇಳ ಬಹುದಷ್ಟೇ?"

"ಕುಳಿಂದ ಕುಲಚಿತ್ರಭಾನುವು ಅವನಾಗಿದ್ದಾನೆ!"

ಬಹು ಮೃದುವಾಗಿ ರಾಜನಂದಿನಿಯು ಈ ನುಡಿಗಳನ್ನು ಆಡಿದಳು. ಈ ನುಡಿಗಳನ್ನು ಆಶ್ರಾವಿಸುತ್ತಲೆ ಚಂದ್ರಹಾಸನು ತನ್ನ ಶರೀರದ ಪರಿವೆಯನ್ನು ಮರೆತು ಆನಂದತಲ್ಲೀನನಾಗಿ ಹೋದನು. ಆ ತರುಣ ಕಾಮುಕ-ಕಾಮುಕಿಯರು ಪರಸ್ಪರರ ನೇತ್ರಗಳನ್ನು ನೋಡುತ್ತಾ, ಇನ್ನೊಬ್ಬರ ಹೃದಯದಂತರಂಗದಲ್ಲಿ ಅನುರಾಗವು ಎಷ್ಟು ತೀವ್ರವಾಗಿ ದೇದೀಪ್ಯಮಾನವಾಗಿದೆ? ಎಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತಲಿದ್ದರು. ಇಬ್ಬರ ವದನಮಂಡಲಗಳಲ್ಲಿಯೂ ಹರ್ಷ ಮತ್ತು ಲಜ್ಜೆ ಇವುಗಳು ತಾಂಡವವಾಡುತ್ತಲಿದ್ದುವು.

"ರಾಜನಂದಿನಿ!"

"ಹೂಂ" ಎಂದು ಹೇಳಿದಳಲ್ಲದೆ ಬೇರೆ ನುಡಿಗಳನ್ನು ಹೊರಚಲ್ಲಲಿಲ್ಲ.

"ನೀನು ನನ್ನನ್ನು ಪ್ರೀತಿಸುತ್ತಿರುವೆಯಾ?"

"ಆ ದುಷ್ಟರ ಕರಗಳಿಂದ ಯಾವ ದಿನ ತಾವು ನನ್ನನ್ನು ರಕ್ಷಿಸಿದರೋ, ಆ ದಿನವೇ ಈ ಹೃದಯವನ್ನು ತವ ಚರಣಗಳಲ್ಲಿ ಅರ್ಪಿಸಿರುವೆನು."

"ಚಂಪೇ;—ಹಾಗಾದರೆ ನಾನು ಕೃತಾರ್ಥನಾದೆನು; ಬಾಳಿನಲ್ಲಿ ಬೆಳಕನ್ನು ಕಂಡೆನು."

"ಈ ನನ್ನ ಹೃದಯವನ್ನು ಸ್ವೀಕರಿಸಿ, ತವ ಚರಣಗಳನ್ನು ಅರ್ಚಿಸಲು ಸಮ್ಮತವನ್ನು ನೀಡಬೇಕೆಂಬುದೇ ನನ್ನ ಬೇಡಿಕೆಯು!"

"ಅದೇಕೆ? ನೀನು ನನ್ನ ಜೀವಿತೇಶ್ವರಿ! ನನ್ನ ಹೃದಯಸಾಮ್ರಾಜ್ಯದ ರಾಣಿ! ನನ್ನಪಾಲಿನ ದೇವಿ! ಆನಂದದಿಂದ ನಾನು ನಿನ್ನನ್ನುಆರಾಧಿಸುವೆನು."

ಚಂಪೆಯು ಮಾತಾಡಲಿಲ್ಲ. ಈ ಪ್ರಣಯಿ-ಪ್ರಣಯಿನಿಯರು ಮೌನವನ್ನವಲಂಬಿಸಿ ನಿಂತಿದ್ದರು. ಆ ಸಂಧಿಯಲ್ಲಿ ಬೇರೊಂದು ವ್ಯಕ್ತಿಯು ಬಂದು ಒಂದು ಮಲ್ಲಿಕಾಲತೆಯ ಹಿಂದೆ ನಿಂತು ತಮ್ಮ ಸಂಭಾಷಣವನ್ನು ಆಶ್ರಾವಿ

ಸುತ್ತಿರುವುದನ್ನು ಅವರು ನೋಡಲಿಲ್ಲ. ಅವರಿಬ್ಬರೂ ಪರಸ್ಪರ ರೂಪ-ಲಾವಣ್ಯ ಗಳನ್ನು ನೋಡಿ ಸವಿಯುವುದರಲ್ಲಿ ನಿರತರಾಗಿದ್ದರು.

"ರಾಜನಂದಿನಿ, ಈ ಮಂಜೂಷವು ನಿನ್ನ ಕೈಯಲ್ಲಿರಲಿ! ಸಮರಾಂಗ ಣಕ್ಕೆ ತಾನು ತೆರಳಿದರೂ ನನ್ನ ನೆನಪು ನಿಲ್ಲುವುದಕ್ಕಾಗಿ ನಾನು ನೀಡಿರು ನೆನು. ಯುದ್ಧರಂಗದಿಂದ ಹಿಂದಿರುಗಿ ಬಂದನಂತರ ನಾವು ಒಂದಾಗೋಣ." ಈ ರೀತಿ ನುಡಿದು, ಚಂದ್ರಹಾಸನು ತನ್ನ ಹೆಸರಿನಿಂದ ಕೂಡಿದ ಉಂಗುರ ವನ್ನು ಚಂಪೆಗೆ ಕೊಟ್ಟನು. ರಾಜನಂದಿನಿಯು ಅದನ್ನು ಆದರಪೂರ್ವಕವಾಗಿ ಸ್ವೀಕರಿಸಿದಳು.

"ಕುಳಿಂದಕುಲಚಿತ್ರಭಾನು! ಈ ದಾಸಿಯ ನೆನಪಿಗಾಗಿ ಈ ರತ್ನಹಾರ ವನ್ನು ಸ್ವೀಕರಿಸಬೇಕೆಂಬುದೇ ನನ್ನ ಬೇಡಿಕೆಯು! ಸಮರಾಂಗಣದಲ್ಲಿ ಜಗ ದೀಶ್ವರನು ತಮಗೆ ಸಕಲ ವಿಜಯಗಳನ್ನೂ ನೀಡಲಿ!" ಎಂದೆನ್ನುತ್ತ, ರಾಜ ಕುಮಾರಿಯು ತನ್ನ ಕೊರಳಿನಲ್ಲಿ ಹೊಳೆಯುತ್ತಿರುವ ರತ್ನಹಾರವನ್ನು ಚಂದ್ರಹಾಸನ ಕರಗಳಲ್ಲಿ ನೀಡಿದಳು. ತನ್ನ ರಾಣಿಯು ನೀಡಿದ ಉಪ ಹಾರವನ್ನು ಚಂದ್ರಹಾಸನು ಅತ್ಯಂತ ಆದರದಿಂದ ಸ್ವೀಕರಿಸಿದನು.

ಸ್ವಲ್ಪ ಸಮಯವು ಗತಿಸಲು, ಮಲ್ಲಿಗೆಯ ಬಳ್ಳಿಯ ಹಿಂದೆ ಅವಿತು ಕೊಂಡಿದ್ದ ವ್ಯಕ್ತಿಯು ಆ ಪ್ರದೇಶವನ್ನು ಬಿಟ್ಟು ಹೊರಗೆ ಬಂದು ಚಂಪೆಯ ಕಣ್ಣುಗಳಿಗೆ ಕಾಣಿಸಿಕೊಂಡಿತು ಅದನ್ನು ಕಾಣಲು ಚಂಪಕಮಾಲಿನಿಯು ಆಶ್ಚರ್ಯಭರಿತಳಾಗಿ, "ಅಮಾತ್ಯನಂದಿನಿ!" ಎಂಬ ಉದ್ಗಾರಗಳನ್ನು ಹೊರ ಸೂಸಿದಳು.

"ರಾಜಕುಮಾರಿ! ನೀನೇಕೆ ಆಶ್ಚರ್ಯಚಕಿತಳಾದೆ? ನೀನು ಬಂದು ನನ್ನನ್ನು ನೋಡದಿದ್ದರೂ, ನಿನ್ನನ್ನು ಬಂದು ಕಾಣುವದು ನನ್ನ ಕರ್ತವ್ಯ ವೆಂದು ಭಾವಿಸಿ ನಾನು ಅರಮನೆಗೆ ಹೋಗಿದ್ದೆನು. ಅಲ್ಲಿ ನೀನಿಲ್ಲದುದರಿಂದ ಉಪವನದಲ್ಲಿ ನೀನಿರಬಹುದೆಂದು ವಿಚಾರಿಸಿ ಇಲ್ಲಿಗೆ ಬಂದೆನು." ಎಂದು ತನ್ನ ಮೊಗದಲ್ಲಿದ್ದ ವಿಕಾರಗಳನ್ನು ಮರೆಮಾಚುತ್ತ ಅಮಾತ್ಯನಂದಿನಿಯು ಹೇಳಿದಳು

"ಗೆಳತಿ, ವಿಪತ್ತುಗಳಿಗೆ ಒಳಗಾದುದರಿಂದ, ನನ್ನ ಶರೀರ ಪ್ರಕೃತಿಯು ಸುಧಾರಿಸಲು, ವಿಶ್ರಾಮವನ್ನು ಪಡೆಯುವುದು ಅತ್ಯಾವಶ್ಯಕವಾಗಿದ್ದಿತು. ಆದುದರಿಂದ ನಿನ್ನ ಗೃಹಕ್ಕೆ ಬರಲು ನನಗೆ ಸಾಧ್ಯವಾಗಲಿಲ್ಲ. ಕ್ಷಮಿಸು"

"ನನಗಿಂತ ಹೆಚ್ಚು ಬೆಲೆಯಾದ ವಸ್ತುವು ನಿನಗೆ ಲಭಿಸಿದೆಯಷ್ಟೆ!" ಎಂದು ಶೋಕಸಮ್ಮಿಶ್ರ ಸ್ವರದಲ್ಲಿ ವಿಷಯಾಕುಮಾರಿಯು ಅಂದಳು.

"ಅಮಾತ್ಯನಂದಿನಿ, ಅದೇಕೆ ಹಾಗೆ ನುಡಿಯುತ್ತಿರುವೆ? ನಿನ್ನಷ್ಟು ಪರಮಮಿತ್ರಳು ಬೇರೊಬ್ಬಳು ನನಗಿಲ್ಲ. ನಾಳೆ ದಿನ ನಾನೇ ನಿನ್ನಲ್ಲಿಗೆ ಬರಬೇಕೆಂದಿದ್ದೆ!"

"ಇರಬಹುದು" ಎಂದು ನುಡಿದು ವಿಷಯೆಯು ಮೌನವನ್ನು ಅವಲಂಬಿಸಿದಳು. ಈ ಕೆಳದಿಯರು ತಮ್ಮ ಮನಸಾ ಇಚ್ಛೆಯಂತೆ ಮಾತಾಡಲು ತಾನೊಂದು ಪ್ರತಿಬಂಧಕವೆಂದು ತಿಳಿದು, ಚಂದ್ರಹಾಸನು ಅಲ್ಲಿಂದ ಹೊರಡಲು ಅನುವಾದನು.

"ರಾಜನಂದಿನಿ ನಾನು ಹೋಗಿ ಬರುವೆನು; ಅಮಾತ್ಯನಂದಿನಿ, ಪ್ರಣಾಮಗಳು!" ಎಂದು ಹೇಳಿ, ಚಂದ್ರಹಾಸನು ಉಪವನವನ್ನು ತ್ಯಜಿಸಿದನು. ಅವನು ಕಣ್ಮರೆಯಾಗುವವರೆಗೆ ಅವನನ್ನು ರಾಜನಂದಿನಿಯೂ, ಸಚಿವಕುಮಾರಿಯೂ ನೋಡುತ್ತಲಿದ್ದರು. ಅಮಾತ್ಯನಂದಿನಿಯ ನೇತ್ರಗಳಲ್ಲಿ ಶೋಕವು ತುಂಬಿ ತುಳುಕುತ್ತಲಿದ್ದಿತು.

"ಆ ತರುಣನು ಯಾರು?" ಎಂದು ಏನನ್ನೂ ತಿಳಿಯದವಳ ಹಾಗೆ ನಟಿಸುತ್ತ, ಅಮಾತ್ಯನಂದಿನಿಯು ಚಂಪೆಯ ಕಣ್ಣುಗಳಲ್ಲಿ ಹೊಳೆಯುತ್ತಿರುವದೇನೆಂಬುದನ್ನು ತಿಳಿಯಲು ನುಡಿದಳು.

"ಕುಳಿಂದ ಪ್ರಾಂತ್ಯದ ಭಾವೀ ಮಾಂಡಲಿಕನು."

"ಹೆಸರು ಚಂದ್ರಹಾಸನೆಂದಲ್ಲವೇ? ನಿನ್ನನ್ನು ದುಷ್ಟರ ಕರಗಳಿಂದ ರಕ್ಷಿಸಿದ ಧೀರನೇ ಇವನು!"

"ಹೌದು!"

"ಗೆಳತಿ, ಆ ತರುಣನು ನಿನ್ನ ಹೃದಯವನ್ನು ಕದ್ದಂತೆ ತೋರುತ್ತದೆ!"

"ಥೂ, ಅಮಾತ್ಯನಂದಿನಿ, ನಿನಗೆ ಮಾತಾಡಲು ಬೇರೆ ಯಾವ ಸಂಗತಿಗಳೂ ಇಲ್ಲವೇ?"

"ರಾಜಕುಮಾರಿ, ನೀನು ಸಿಟ್ಟಾಗಬೇಡ; ನಿನ್ನ ಮನಸ್ಸು ಅವನ ಹಿಂದೆ ಓಡುತ್ತಿರುವದೆಂಬುದನ್ನು ನಿನ್ನ ಕಣ್ಣುಗಳು ನುಡಿಯುತ್ತಿರುವವು." ಎಂದು ಕಂಬನಿಯು ತುಂಬಿದ ನೇತ್ರಗಳೊಡನೆ ಅಮಾತ್ಯನಂದಿನಿಯು ಹೇಳಿದಳು.

"ಹಾಗಾದರೆ ಅದರಲ್ಲಿ ತಪ್ಪೇನು?" ಎಂದು ಅಮಾತ್ಯನಂದಿನಿಯ ನೇತ್ರಗಳಲ್ಲಿ ತುಳುಕುತ್ತಿರುವ ಬಾಷ್ಪವನ್ನು ಕಂಡು ಚಕಿತಳಾಗಿ ಚಂಪೆಯು: "ಗೆಳತಿ, ಅದೇಕೆ ಅಳುತ್ತಿರುವೆ?"

"ಛೇ!" ಎಂದು ತನ್ನ ಶೋಕವನ್ನು ಸಹಿಸಿಕೊಳ್ಳುತ್ತ ಗೆಲುವೊಗ

ವನ್ನು ತಾಳಲು ಪ್ರಯತ್ನಿಸಿದಳು ವಿಷಯಾಕುಮಾರಿ.

"ವಿಷಯೇ, ಯಾವುದೋ ಒಂದು ಪ್ರಬಲವಾದ ಚಿಂತೆಯು ನಿನ್ನನ್ನು ಬಾಧಿಸಿರುವುದು."

"ರಾಜಕುಮಾರಿ, ನೀನು ಭಾಗ್ಯಶಾಲಿನಿಯು! ಸುಖವನ್ನು ಅನುಭವಿಸಲು ನನ್ನ ಲಲಾಟದಲ್ಲಿ ಬರೆದಿರುವದಿಲ್ಲ."

"ಅಷ್ಟು ನಿರಾಶೆಯನ್ನು ಹೊಂದಲು ಕಾರಣವೇನು? ನಿನ್ನ ಗೆಳತಿಯೊಡನೆ ನುಡಿಯಬಾರದೆ?"

"ಹಾಗೆ ನುಡಿಯುವದರಿಂದ ಪ್ರಯೋಜನವು ಸಿಗುವಂತಿಲ್ಲ; ನೀನು ಅದನ್ನು ಕೇಳಿ ವ್ಯಥೆಯನ್ನು ಹೊಂದುವುದೊಂದೇ ಲಾಭವು!" ನಿಟ್ಟುಸಿರು ಬಿಡುತ್ತ ಅಮಾತ್ಯನಂದಿನಿಯು ಅಂದಳು.

"ಆದರೂ ನಿನ್ನ ದುಃಖದಲ್ಲಿ ಭಾಗವನ್ನು ವಹಿಸಲು ಒಬ್ಬ ಗೆಳತಿ ಇರುವಾಗ ನಿನ್ನ ಶೋಕವು ಕಡಿಮೆಯಾಗುವುದಿಲ್ಲವೆ?"

"ನಾನೊಂದು ರತ್ನವನ್ನು ಹುಡುಕುತ್ತಲಿದ್ದೆನು. ಅಂತ್ಯದಲ್ಲಿ ಅದು ಸಿಕ್ಕಿತು; ಆದರೆ ಇನ್ನೊಂದು ವ್ಯಕ್ತಿಯು ಅದನ್ನು ಕದ್ದೊಯ್ದಿತು"

"ಯಾವದು ಆ ರತ್ನವು?" ಎಂದು ಆಶ್ಚರ್ಯಭರಿತಳಾಗಿ ಚಂಪೆಯು ಪ್ರಶ್ನಿಸಿದಳು:—"ಅಮಾತ್ಯನಂದಿನಿ, ನೀನು ತೀವ್ರವಾದ ಅನುರಾಗಾಗ್ನಿಯಲ್ಲಿ ಬೆಯ್ಯುತ್ತಿರುವಂತೆ ತೋರುತ್ತದೆ."

"ರಾಜಕುಮಾರಿ, ನೀನೀರೀತಿ ನುಡಿಯುತ್ತಿರುವುದು ಆಶ್ಚರ್ಯವೇ ಸರಿ!"

"ನಾನು ನಿನ್ನಂತೆಯೇ ಹೆಂಗುಸಲ್ಲವೆ? ಹೆಣ್ಣೊಡಲಿನ ಅಂತರಾಳವನ್ನು ಅರಿಯಲು ನನಗೆ ಶಕ್ತಿಯಿಲ್ಲವೆಂದು ಬಗೆದೆಯಾ? ಹೆಂಗುಸಿನ ಹೃದಯವು ಯಾವಾಗಲೂ ತನ್ನ ಪ್ರೇಮಕ್ಕೆ ಯೋಗ್ಯ ಪಾತ್ರವನ್ನು ಹುಡುಕುತ್ತ ಸಂಚರಿಸುತ್ತಿರುವುದು."

"ಅಲ್ಲವೆನ್ನುವುದಿಲ್ಲ; ರಾಜನಂದಿನಿ, ನೀನು ನಿನ್ನ ಪ್ರೇಮವನ್ನು ಯೋಗ್ಯನೂ ಧೀರನೂ ಆದ ತರುಣನಲ್ಲಿ ಸಮರ್ಪಿಸಿದ ಕೃತಾರ್ಥತೆಯನ್ನು ಹೊಂದಿರುತ್ತೀಯೆ. ಜಗದೀಶ್ವರನು ನಿನಗೆ ಮಂಗಳವನ್ನು ನೀಡಲಿ! ಚಂದ್ರಹಾಸನು ಉತ್ಕೃಷ್ಟ ಸ್ವಭಾವದ ಧೀರೋದಾತ್ತನಿರುವನು!"

"ಅಮಾತ್ಯನಂದಿನಿ, ನೀನು ಅದನ್ನು ಹೇಗೆ ಅರಿತೆ?"

"ನಿಮ್ಮಿಬ್ಬರ ಪ್ರಣಯ ಸಂಭಾಷಣೆಯನ್ನು ನಾನು ಮಲ್ಲಿಕಾಲತೆಯ ಹಿಂಬದಿಯಲ್ಲಿ ನಿಂತು ಕೇಳುತ್ತಲಿದ್ದೆನು."

"ಅಮಾತ್ಯನಂದಿನಿ, ನನ್ನ ಗೆಳತಿಯೊಡನೆ ಯಾವುದನ್ನೂ ಮುಚ್ಚು ಮರೆ ಮಾಡಲು ನಾನು ಬಯುಸುವದಿಲ್ಲ; ನನ್ನ ಸರ್ವಸ್ವವನ್ನೂ ಆ ಚರಣಗಳಲ್ಲಿ ನಾನು ಅರ್ಪಿಸಿದ್ದೇನೆ; ಆದರೆ ನೀನೇಕೆ ಶೋಕಸಂವಿಗ್ನಮನಸ್ಕಳಾಗಿರುವೆ?"

"ನನ್ನ ಶೋಕವು ನಿನ್ನ ಮನಸನ್ನು ತಿಮಿರರಾಶಿಯಲ್ಲಿ ಬೀಳುವಂತೆ ಮಾಡಬಹುದು; ಆ ಸಂಕಟದ ಕಾರಣಭೂತಳು ನಾನಾಗಲು ಬಯುಸುವುದಿಲ್ಲ."

"ಆದರೂ—"

"ನದಿಯು ಕಡಲನ್ನು ಸೇರಲು ಹಾತೊರೆಯುತ್ತಿರುವುದು."

"ಯಾವುದು ಆ ಕಡಲು?"

"ನಿನ್ನ ನದಿಯು ಯಾವ ಸಾಗರದಲ್ಲಿ ಸೇರಿತೋ, ಅಲ್ಲಿಗೇ ನನ್ನ ಹೃದಯುದಿಂದ ಹೊರಟ ಪ್ರವಾಹವೂ ಗಮಿಸಲು ಬಯುಸುತ್ತಿರುವುದು."

ಆಶ್ಚರ್ಯವನ್ನು ಹೊರಚಲ್ಲುತ್ತ, ಚಂಪೆಯು ಅಮಾತ್ಯನಂದಿನಿಯ ಮೊಗವನ್ನು ವೀಕ್ಷಿಸಿದಳು. ಹತಾಶೆಯು ಅಮಾತ್ಯನಂದಿನಿಯ ಮುಖದಲ್ಲಿ ರಾಜಿಸುತ್ತಿತ್ತು.

"ಅಮಾತ್ಯನಂದಿನಿ, ಕುಳಿಂದ ಕುಲಚಿತ್ರಭಾನುವು ನಿನ್ನ ಹೃದಯುವನ್ನಪಹರಿಸಿದನೆ?"

ವಿಷಯಾಕುಮಾರಿಯು ಚಿಕ್ಕ ಮಗುವಿನಂತೆ ಅಳಲು ಪ್ರಾರಂಭಿಸಿದಳು; ಅವಳ ಹೃದಯುದಂತರಾಳದಿಂದ ಹೊರಸೂಸುತ್ತಿರುವ ವಿಷಾದತರಂಗಗಳು ಬಾಹ್ಯಜಗತ್ತಿನಲ್ಲಿ ಪ್ರವೇಶಿಸಿದುವು.

"ಅಮಾನ್ಯನಂದಿನಿ, ಶೋಕಿಸಬೇಡ; ಇದುವರೆಗಿನ ಜೀವನವನ್ನು ನಾವು ಒಂದಾಗಿ ಕಳೆದೆವು. ಮುಂದಿನ ಬದುಕನ್ನಾದರೂ ಅದೇ ರೀತಿ ಕಳೆಯೋಣ. ನಾವಿಬ್ಬರೂ ಆ ಪುಣ್ಯಪುರುಷನ ಚರಣದಾಸಿಗಳಾಗಿ ಬಾಳೋಣ!"

"ಅಷ್ಟು ವಿಶಾಲವಾದುದೇ ನಿನ್ನ ಹೃದಯುವು? ಸವತಿಮಾತ್ಸರ್ಯವು ನಿನ್ನನ್ನು ಬಾಧಿಸದೇ?" ಎಂದು ಅಳುತ್ತಾ ವಿಷಯಾಕುಮಾರಿಯು ನುಡಿದಳು.

"ಇಲ್ಲ! ಇಲ್ಲ! ಅಕ್ಕಾ, ನಾವಿಬ್ಬರೂ ಆತನನ್ನು ಆರಾಧಿಸೋಣ!" ಎಂದು ಪ್ರೇಮಪರಿಪೂರ್ಣಳಾಗಿ ಚಂಪಕಮಾಲಿನಿಯು ಅಮಾತ್ಯನಂದಿನಿಯನ್ನು ಆಲಂಗಿಸಿಕೊಂಡು ಸಂತೈಸಿದಳು.

———

## ಚಂದ್ರಹಾಸನಿಗೆ ಬಂದ ಒಂದು ಓಲೆ.

ಉಪವನವನ್ನು ತ್ಯಜಿಸಿ ಚಂದ್ರಹಾಸನು ಹೊರಬಿದ್ದನು; ರಾಜಧಾನಿಯ ಪ್ರಧಾನ ಬೀದಿಗಾಗಿ ಅವನು ತನ್ನ ವಸತಿಗೆ ಹೋಗುವವನಾಗಿದ್ದನು. ರಾಜಬೀದಿಯಲ್ಲಿ ಒಬ್ಬ ಬಾಲಕನು ಅವನ ಸಮೀಪಕ್ಕೆ ಬಂದನು. ಬಾಲಕನಿಗೆ ೧೨ ವರ್ಷ ಪ್ರಾಯವಿರಬಹುದು. ಅವನು ಚಂದ್ರಹಾಸನಿಗೆ ವಂದಿಸಿ:'ಕುಳಿಂದಕುಲದ ರಾಜಪುತ್ರರು ತಾವೇಯೊ?' ಎಂಬುದಾಗಿ ಪ್ರಶ್ನಿಸಿದನು.

"ಹೌದು; ಏಕೆ ಕಂದಾ?"

"ತಮಗೆ ಒಂದು ಓಲೆಯು ಇರುವದು" ಎಂದು ನುಡಿದು, ತನ್ನ ಕರದಲ್ಲಿದ್ದ ಒಂದು ಓಲೆಯನ್ನು ಆ ಬಾಲಕನು ಚಂದ್ರಹಾಸನ ಹಸ್ತಗಳಿಗೆ ಕೊಟ್ಟನು. ಓಲೆಯನ್ನು ತೆಗೆದುಕೊಂಡು ಓದಿ, ಚಂದ್ರಹಾಸನು ಆಶ್ಚರ್ಯಭರಿತನಾದನು. ಅವನು ಪತ್ರವನ್ನು ಓದಿದ ನಂತರ ತನ್ನ ಶಿರವನ್ನೆತ್ತಿ: "ಈ ಓಲೆಯನ್ನು ಕೊಟ್ಟವನಾರು?" ಎಂದು ಪ್ರಶ್ನಿಸಿದನು; ಆದರೆ ಆ ಓಲೆಯನ್ನು ತಂದುಕೊಟ್ಟ ಬಾಲಕನು ಅಲ್ಲೆಲ್ಲಿಯೂ ಇರಲಿಲ್ಲ; ತನ್ನೊಡನೆ ಮಾತಾಡದೆ ಅಷ್ಟು ಬೇಗನೆ ಬಾಲಕನು ಮಾಯವಾದುದನ್ನು ಕಂಡು ಆಶ್ಚರ್ಯಭರಿತನಾಗಿ ಬೀದಿಯ ನಾಲ್ಕು ಭಾಗಗಳಿಗೂ ಚಂದ್ರಹಾಸನು ತನ್ನ ದೃಷ್ಟಿಯನ್ನು ಹೊರಳಿಸಿದನು; ಆದರೆ ಆ ಬಾಲಕನು ಅಲ್ಲೆಲ್ಲಿಯೂ ಇರಲಿಲ್ಲ!

ವಿಚಾರಮಗ್ನನಾಗಿ ಅವನು ವಸತಿಗೆ ಬಂದನು; ಅವನ ಮುಖದಲ್ಲಿ ಹೊಳೆಯುತ್ತಲಿದ್ದ ವಿಚಾರರಾಶಿಯನ್ನು ಕಂಡು ನಾಗರಾಜನು ಅಚ್ಚರಿಯನ್ನು ಹೊಂದಿದನು. ಅವನು ಚಂದ್ರಹಾಸನನ್ನು ಉಪಚರಿಸುತ್ತ:— "ಚಂದ್ರಹಾಸ, ನಿನ್ನ ಮೊಗದಲ್ಲಿ ಯಾವುದೋ ಒಂದು ಪ್ರಬಲವಾದ ಚಿಂತೆಯು ಮೂಡಿದ್ದಂತೆ ಕಾಣುತ್ತದೆ!" ಎಂದನು.

ತನ್ನ ಆಸನದಲ್ಲಿ ಕುಳಿತುಕೊಂಡ ನಂತರ, ಚಂದ್ರಹಾಸನು ತನ್ನ ಕೈಯಲ್ಲಿದ್ದ ಓಲೆಯನ್ನು ನಾಗರಾಜನಿಗೆ ಕೊಟ್ಟು:—"ಇದೇ ನನ್ನ ಚಿಂತೆಗೆ ಕಾರಣವು." ಎಂದನು.

ನಾಗರಾಜನು ಓಲೆಯನ್ನು ತೆಗೆದುಕೊಂಡು ಓದಿ ನೋಡಿದನು; ಅವನೂ ಚಂದ್ರಹಾಸನಂತೆ ಆಶ್ಚರ್ಯಸಾಗರದಲ್ಲಿ ಮುಳುಗಿದನು. ಓಲೆಯಲ್ಲಿ ಈ ರೀತಿ ಬರೆದಿದ್ದಿತು:

"ಕುಳಿಂದಕುಲ ವಿಭಾವಸು,

ನಿನ್ನ ದೇಹವನ್ನು ನೋಡಿಕೊಳ್ಳುವದರಲ್ಲಿ ಅತ್ಯಂತ ಜಾಗರೂಕನಾಗಿರಬೇಕೆಂಬುದೇ ನನ್ನ ಪ್ರಾರ್ಥನೆಯು! ನಿನ್ನನ್ನು ಸಂಹರಿಸುವದಕ್ಕಾಗಿ

ಒಂದು ಕಾರಸ್ಥಾನವು ಉದಯವನ್ನು ಹೊಂದಿರುವದು. ಸಮರಾಂಗಣ ದಲ್ಲಿಯೂ ನೀನು ಜಾಗರೂಕನಾಗಿರು. ಇಲ್ಲದಿದ್ದರೆ ವಿಪತ್ತುಗಳು ಸಂಭವಿಸುವವು. ನಿನ್ನನ್ನು ರಕ್ಷಿಸಲು ಬದ್ಧಕಂಕಣನಾಗಿರುವೆನು. ಸಮಯ ಬಂದಾಗ ನಾನು ಯಾರೆಂಬುದನ್ನು ಅರುಹುವೆನು.

ನಿನ್ನ ಹಿತಕಾಂಕ್ಷಿ."

"ಈ ಕಾಗದವನ್ನು ಕೊಟ್ಟವರು ಯಾರು?" ಎಂದನು ನಾಗರಾಜ.

"ಹತ್ತು-ಹನ್ನೆರಡು ವರ್ಷ ಪ್ರಾಯದ ಬಾಲಕನು."

"ಎಲ್ಲಿ?"

"ರಾಜಬೀದಿಯಲ್ಲಿ!"

ಕೆಲವು ನಿಮಿಷಗಳ ಪರ್ಯಂತ ಎವೆಯಿಕ್ಕಿ ಆ ಪತ್ರವನ್ನು ನಾಗರಾಜನು ವೀಕ್ಷಿಸಿದನು. ಅದರಲ್ಲಿ ಬರೆದಿರುವ ಲಿಪಿಗಳಿಂದ ಅದನ್ನು ಬರೆದವರು ಯಾರೆಂಬುದನ್ನು ತಿಳಿಯಲು ಅವನು ಪರಿಶ್ರಮಿಸುತ್ತಲಿದ್ದಂತೆ ವ್ಯಕ್ತವಾಗುತ್ತಲಿದ್ದಿತು.

"ರಾಜಕುಮಾರ, ಈ ಪತ್ರವನ್ನು ಬರೆದವಳು ಒಬ್ಬ ಹೆಂಗಸು." ಎಂದು ಕುಶಾಗ್ರಬುದ್ಧಿಯು ನಾಗರಾಜನು ನುಡಿದನು.

"ಅದನ್ನು ಹೇಗೆ ಊಹಿಸಿದೆ?"

" ಈ ಅಕ್ಷರಗಳಿಂದ ವ್ಯಕ್ತವಾಗುತ್ತದೆ; ಈ ಓಲೆಯ ಮೇಲೆ ಅತ್ಯಂತ ಮೃದುವಾಗಿ ಬಿದ್ದಿರುವ ಲಿಪಿರೇಖೆಗಳು ಅವುಗಳ ರಚನಾಕರ್ತೃಯೋರ್ವ ಅಬಲೆಯಾಗಿದ್ದಾಳೆಂಬುದನ್ನು ವ್ಯಕ್ತಪಡಿಸುತ್ತಲಿರುವುವು."

"ಇಲ್ಲಿ ರಾಜನಂದಿನಿಯನ್ನಲ್ಲದೆ ನಾನು ಬೇರೆ ಯಾವ ವನಿತೆಯ ಪರಿಚಯವನ್ನೂ ಹೊಂದಿರುವುದಿಲ್ಲ"

"ನಿನ್ನನ್ನು ಬೇರೆ ಯಾರೂ ಅರಿತಿಲ್ಲವೇ?"

"ಉಂ ಹೂಂ,-ನನ್ನನ್ನು ಅಮಾತ್ಯನಂದಿನಿಯು ಮಾತ್ರ ಅರಿತಿರುವಳು"

"ಏನೇ ಇರಲಿ, ಇದು ಹೆಂಗುಸೋರ್ವಳು ಬರೆದ ಪತ್ರವೆಂಬುದು ನಿರ್ವಿವಾದವು 'ನಿನ್ನನ್ನು ಸಂಹರಿಸಲು ಕಾರಸ್ಥಾನವೊಂದು ಉದಯವನ್ನು ಹೊಂದಿದೆ' ಎಂಬುದು ಮಾತ್ರ ಪತ್ರದಲ್ಲಿ ಸೂಚಿಸಲ್ಪಟ್ಟಿದೆಯಲ್ಲದೆ, ಆ ಕಾರಸ್ಥಾನಿಗಳು ಯಾರೆಂಬುದನ್ನು ಸ್ಪಷ್ಟಪಡಿಸಿರುವದಿಲ್ಲ ಆದರಿಂದ ನಿನ್ನ ಹನನಕ್ಕಾಗಿ ಪ್ರಯತ್ನಿಸುತ್ತಲಿರುವ ಆ ಕಾರಸ್ಥಾನಿಗಳ ಹತ್ತಿರದ ಬಂಧುವೋ, ಅಲ್ಲ ಒಡನಾಡಿಯೋ ಈ ಓಲೆಯ ಲೇಖಕಿಯಾಗಿರುತ್ತಾಳೆ, ಎಂಬುದನ್ನು ತಿಳಿದುಕೊಳ್ಳಬಹುದು. ಯಾವ ರೀತಿ ಅವಳು ನಿನಗೆ ಅವ

ರಿಂದ ವಿಪತ್ತುಗಳು ಬಂದೊದಗಬಾರದೆಂದು ಬಯಸುತ್ತಿರುವಳೋ, ಅದ ರಂತೆಯೇ ಕಾರಸ್ಥಾನಿಗಳ ಈ ಭಯಂಕರ ರಹಸ್ಯವು ಹೊರಬಿದ್ದು, ಅವರ ಮಾನಹಾನಿಯಾಗಬಾರದೆಂದೂ ಅವಳು ಬಯಸುತ್ತಿರಬೇಕು."

"ನಾಗರಾಜ, ಇದು ವಿಚಿತ್ರವಾಗಿದೆ; ಈ ಚಿಕ್ಕ ಓಲೆಯಿಂದ ಇಷ್ಟು ಸಂಗತಿಗಳನ್ನು ಸಂಗ್ರಹಿಸುವದು ಹೇಗೆ?

"ಚಂದ್ರಹಾಸ, ನಮ್ಮ ಬುದ್ಧಿಯನ್ನು ಸರಿಯಾದ ಮಾರ್ಗದಲ್ಲಿ ವಿನಿ ಯೋಗಿಸಿದರೆ, ಒಂದು ಚಿಕ್ಕಕಾಗದದ ತುಂಡಿನಿಂದ ಇದಕ್ಕಿಂತಲೂ ಮಹ ತ್ತಾದ ರಹಸ್ಯ ಸಂಗತಿಗಳನ್ನು ಅರಿತುಕೊಳ್ಳಲು ಸಾಧ್ಯವಾಗಬಹುದು."

"ನಾಗರಾಜ, ಈ ಓಲೆಯ ತುಂಡಿನಿಂದ ಇಷ್ಟು ಊಹಿಸಿದ ನೀನು, ರಾಜನಂದಿನಿಯ ಅಪಹಾರವನ್ನು ಸಂಬಂಧಿಸಿದ ಅನೇಕ ರಹಸ್ಯಗಳನ್ನು ಹಿಡಿಯಬಹುದಲ್ಲವೇ? ನಿನ್ನ ಊಹಾ-ಪೋಹಗಳನ್ನು ಕೇಳುವಾಗ ನನಗೆ ಅತ್ಯಂತ ಆಶ್ಚರ್ಯವಾಗುತ್ತಿರುವುದು."

"ಆಶ್ಚರ್ಯಕ್ಕೆ ಅವಕಾಶವಿಲ್ಲ; ಪ್ರಬಲವಾದ ಕಾರಣಗಳ ಮೂಲಕ ಕತ್ತಲೆಯಲ್ಲಿ ಬಿದ್ದಿರುವ ರಹಸ್ಯಗಳನ್ನು ಬೆಳಕಿಗೆ ಬರುವಂತೆ ಮಾಡುವದು ನಮ್ಮ ಬುದ್ಧಿಯನ್ನು ಸರಿಯಾದ ದಾರಿಯಲ್ಲಿ ವಿನಿಯೋಗಿಸುವುದರಿಂದಾ ಗಿದೆ. ಆ ಕಳ್ಳರ ನಾಯಕನ ವದನಮಂಡಲವನ್ನು ನೋಡುವಾಗ, ಮದನ ಕುಮಾರನ ವದನವು ಯಾವ ಬಣ್ಣವನ್ನು ಹೊಂದಿತೆಂಬುದನ್ನೂ ರಾಜ ಕುಮಾರಿಯು ಬಿಡುಗಡೆಯನ್ನು ಹೊಂದಿದ ವಾರ್ತೆಯನ್ನು ತಿಳಿಯಲು ಮಂತ್ರಿಕುಮಾರನ ವದನದಲ್ಲಿ ಎಷ್ಟರಮಟ್ಟಿಗೆ ನಿರಾಶೆಯು ತುಂಬಿದ್ದಿತೆಂಬು ದನ್ನೂ ವೀಕ್ಷಿಸಿದೆಯಾ? ಅವುಗಳು ಈ ಅಪಹರಣೆಯಲ್ಲಿ ಮದನನಿಗೆ ನಿಕಟ ವಾದ ಸಂಬಂಧವಿದೆಯೆಂಬುದನ್ನು ಸೂಚಿಸುತ್ತಿರುವವಲ್ಲವೇ? ಆ ದುಷ್ಟರ ಭಯಂಕರ ಕೃತ್ಯದ ಹಿಂದೆ ಮಂತ್ರಿನಂದನನ ಪ್ರಬಲವಾದ ಕರಕೌಶಲ್ಯವು ನಿಂತಿರುವುದೆಂದು ನಾನು ಊಹಿಸುತ್ತೇನೆ. ನಾವು ಕಾರಾಗಾರದಲ್ಲಿ ಅಪ ರಾಧಿಗಳನ್ನು ನೋಡಲು ಹೋದಾಗ ಮದನನ ಕಣ್ಣುಗಳಿಂದ ಹೊರಬಿದ್ದ ನೋಟಗಳು ಸೂಸುತ್ತಿರುವ ಅರ್ಥವೇನೆಂಬುದನ್ನು ಸುಲಭದಲ್ಲಿ ತಿಳಿದು ಕೊಳ್ಳಬಹುದು. ರಾಜಕುಮಾರಿಯನ್ನು ಮದನನು ಅಪಹರಿಸಲು ಕಾರಣ ವೇನು? ಬಹುಶಃ ಅಮಾತ್ಯನಂದನನು ರಾಜಕುಮಾರಿಯಲ್ಲಿ ಪ್ರಣಯಭಿಕ್ಷೆ ಯನ್ನು ಯಾಚಿಸಿರಬಹುದು, ರಾಜನಂದಿನಿಯು ಅವನ ಪ್ರಾರ್ಥನೆಯನ್ನು ನಿರಾಕರಿಸಿರಲಿಕ್ಕೆ ಸಾಕು. ಹತಾಶನಾದ ಅವನು ತನ್ನ ಕಾರ್ಯಸಾಧನೆಗಾಗಿ ಅಸತ್ಯ ಮತ್ತು ಅಧರ್ಮಗಳ ಮಾರ್ಗವನ್ನು ಹಿಡಿದನೆಂಬುದರಲ್ಲಿ ಸಂಶಯ

ವಿಲ್ಲ. ಇದು ಸತ್ಯವೇ ಎಂಬುದನ್ನು ರಾಜನಂದಿಯನ್ನು ಕೇಳಿ ತಿಳಿದುಕೋ."

"ನಾಗರಾಜ, ಅಷ್ಟು ಚಿಕ್ಕ ಕಾರಣಗಳಿಂದ ಇಷ್ಟು ಮಹತ್ವಾದ ಸಂಗತಿಗಳನ್ನು ಊಹಿಸುವುದನ್ನು ನೋಡುವಾಗ ಅದ್ಭುತವಾಗುತ್ತಿದೆ! ನೀನು ಚಿಕ್ಕವನಾದರೂ ಅಸಾಮಾನ್ಯ ಬುದ್ಧಿಶಾಲಿಯಿರುವೆ. ಒಬ್ಬ ಅದ್ವಿತೀಯ ರಾಜತಂತ್ರಜ್ಞನಾಗಿ ಶೋಭಿಸಬೇಕಾದವನು ನೀನು."

"ಮಿತ್ರನೆ! ಇಷ್ಟೆಲ್ಲ ಅಭಿನಂದನೆಗಳಿಗೆ ನಾನು ಯೋಗ್ಯನಲ್ಲ; ಸಣ್ಣದಾದ ಸಂಗತಿಗಳನ್ನು ಸಹ ಸೂಕ್ಷ್ಮವಾಗಿ ಪರಿಶೋಧಿಸಿ, ಕಾರ್ಯ ಮತ್ತು ಕಾರಣ ಇವುಗಳನ್ನು ಕುರಿತು ಪರ್ಯಾಲೋಚಿಸುವವರ ಬುದ್ಧಿಗೆ, ನಾನು ಮೇಲೆ ನುಡಿದ ಸಂಗತಿಗಳು ಸುಲಭದಲ್ಲಿ ಗೋಚರವಾಗುವುವು. ಆ ಪತ್ರವು ಚಿಕ್ಕದಿದ್ದರೂ, ತಮ್ಮ ಬುದ್ಧಿಯನ್ನು ಉಪಯೋಗಿಸಿ ಪಠಿಸಿದರೆ, ಇದಕ್ಕಿಂತಲೂ ಮಹತ್ವದ ಸಂಗತಿಗಳನ್ನು ತಿಳಿಯಬಹುದು 'ನಿನ್ನನ್ನು ರಕ್ಷಿಸಲು ನಾನು ಬದ್ಧಕಂಕಣನಾಗಿರುವೆನು' ಎಂದು ಬರೆದಿರುವ ವಾಕ್ಯವು ಬಹಳ ಆಳವಾದುದಾಗಿದೆ. ಪರಿಚಯವು ಸಹ ಇಲ್ಲದ ಒಂದು ವ್ಯಕ್ತಿಯನ್ನು ರಕ್ಷಿಸಲು, ಆ ಅಪರಿಚಿತಳಾದ ವ್ಯಕ್ತಿಗೆ (ಪತ್ರವನ್ನು ಬರೆದುದು ಹೆಂಗುಸೆಂದು ಈ ಮೊದಲೆ ನಾನು ನಿರ್ಧರಿಸಿದ್ದೇನೆ) ಇಷ್ಟೇಕೆ ಆಸಕ್ತಿಯು? ಯಾವುದೋ ಒಂದು ಪ್ರಬಲವಾದ ಉದ್ದೇಶವಿಲ್ಲದೆ ಈ ಕೆಲಸಕ್ಕೆ ಅವಳು ಕೈ ಹಾಕಲಾರಳು. ಅವಳ ಉದ್ದೇಶವು ಯಾವುದಿರಬಹುದು? ನೀನು ಅವಳ ಬಂಧುವೂ ಸಹೋದರನೂ ಆಗಿರುವುದಿಲ್ಲ. ಆದುದರಿಂದ ಬಾಂಧವ ಪ್ರೇಮದಿಂದ ಅವಳು ಪ್ರೇರೇಪಿತಳಾಗಿರಲಾರಳು. ಹಾಗಾದರೆ ಯಾವ ಶಕ್ತಿಯು ಅವಳನ್ನು ಇದಕ್ಕೆ ಪ್ರೇರಿಸಿತು? ಬಹುಶಃ ಪ್ರಣಯವಾಗಿರಬಹುದು; ಆದುದರಿಂದ ಈ ಪತ್ರದ ಬರೆಹಗಾರ್ತಿಯು ನಿನ್ನಲ್ಲಿ ಅನುರುಕ್ತಳಾಗಿರುವಳೆಂಬುದಾಗಿ ನಾನು ಊಹಿಸುತ್ತೇನೆ.'

"ಅಸಂಭವವು! ಅಸಂಭವವು! ನಾಗರಾಜ, ಇದು ಕೇವಲ ನಿನ್ನ ಕಲ್ಪನಾವೈಭವ ಮಾತ್ರವಾಗಿದೆ; ನನ್ನನ್ನು ಇದುವರೆಗೆ ನೋಡದಿರುವ ಅಪರಿಚಿತ ವ್ಯಕ್ತಿಯು ನನ್ನಲ್ಲಿ ಅನುರಕ್ತಳಾಗಿರುವ ಬಗೆ ಹೇಗೆ?"

"ಕುಳಿಂದ ಚಿತ್ರಭಾನು! ಪ್ರಕ್ಷುಬ್ಧನಾಗಬೇಡ ಒಂದೊಂದು ಸಂಗತಿಯನ್ನು ಸೂಕ್ಷ್ಮವಾದ ಬುದ್ಧಿಯಿಂದ ಪರಿಶೋಧಿಸಿದ ಅನಂತರವಲ್ಲದೆ ಅಸಂಭವವೆಂದು ಹೇಳಬಾರದು. ನೀನು ಈ ಪತ್ರವನ್ನು ಬರೆದ ವನಿತೆಯನ್ನು ನೋಡಿರುವುದಿಲ್ಲ; ಅಥವಾ ಒಂದು ವೇಳೆ ನೋಡಿದ್ದರೂ ಆ ಬಿಂಬವು ನಿನ್ನ ಸ್ಮೃತಿಪಥದಿಂದ ಮಾಯವಾಗಿರಬಹುದು; ಆದರೆ ಅದರಿಂದ ಅವಳು ನಿನ್ನನ್ನು ನೋಡಿರುವಳು ಎಂದು ಮಾತ್ರವಲ್ಲ, ಅವಳ ಹೃದಯದಲ್ಲಿ ನಿನ್ನ ರೂಪವು

ದೃಢವಾಗಿ ನೆಲೆನಿಂತಿರುವುದು. ಆದುದರಿಂದಲೇ ಆಕೆ ನಿನಗೆ ಬಂದೊದಗಬಹುದಾದ ಪ್ರಾಣಾಪಾಯದ ಎಚ್ಚರಿಕೆಯನ್ನು ಕೊಟ್ಟಿರುವಳಲ್ಲದೆ, ಮುಂಬರುವ ವಿಪತ್ತುಗಳನ್ನು ತಡೆಯುವದಕ್ಕಾಗಿ ಬದ್ಧಕಂಕಣಧಾರಿಣಿಯಾಗಿರುವಳೆಂಬುದನ್ನು ತಿಳಿಸಿದ್ದಾಳೆ.''

''ಆದರೆ ನಾಗರಾಜ'' ಎಂದು ತನ್ನ ಸಂದೇಹವನ್ನು ವ್ಯಕ್ತಪಡಿಸುತ್ತ ಚಂದ್ರಹಾಸನು: ''ಅಮಾತ್ಯನಂದನನು ನನಗೆ ವಿಪರೀತವಾಗಿ ಕಾರಸ್ಥಾನವನ್ನು ಹೂಡಿ ನನ್ನನ್ನು ವಧಿಸಲು ಯತ್ನಿಸಬೇಕಾದ ಅವಶ್ಯಕತೆಯೇನಿದೆ? ಅವನಿಗೆ ಯಾವ ದ್ರೋಹವನ್ನೂ ನಾನು ಬಗೆದಿಲ್ಲವಷ್ಟೆ?''

''ನೀನು ಅವನಿಗೆ ದ್ರೋಹವನ್ನು ಬಗೆದಿಲ್ಲವೆಂಬುದು ನಿಜ; ಆದರೆ ನಿನ್ನ ಮೂಲಕವಲ್ಲವೆ ರಾಜನಂದಿನಿಯು ವಿಪತ್ತುಗಳಿಂದ ಪಾರಾದುದು? ಆದುದರಿಂದ ತನ್ನ ಕೋಪದೃಷ್ಟಿಯನ್ನು ಅವನು ನಿನ್ನ ಮೇಲೆ ತಿರುಗಿಸುವದು ಅತ್ಯಂತ ಸ್ವಾಭಾವಿಕವಾಗಿದೆ. ಇದಲ್ಲದೆ, ಚಂಪಕಮಾಲಿನಿಯು ನಿನ್ನಲ್ಲಿ ಅನುರಕ್ತಳಾದ ಸಂಗತಿಯನ್ನು ಅವನು ತಿಳಿದಿರಬಹುದು ತನ್ನ ದಾರಿಯನ್ನು ಸುಗಮವಾಗಿ ಮಾಡಲು ನಿನ್ನ ಹನನವು ಆವಶ್ಯಕವೆಂದು ಅವನು ಬಗೆದಿದ್ದಾನೆ. ಮದನನು ಗುಣಾಢ್ಯನೆಂಬುದಾಗಿ ನೀನು ನೆನೆಯಬೇಡ; ಅವನ ವಿನಯ ಮತ್ತು ಔದಾರ್ಯ ಇವುಗಳು ಕೇವಲ ಜನರನ್ನು ಮೆಚ್ಚಿಸಲಿರುವ ವಂಚನೆಯ ಪ್ರಯೋಗಗಳಾಗಿವೆ. ಅವನ ಕಣ್ಣುಗಳು ಅವನ ಹೃದಯವು ಕಾಪಟ್ಯಪರಿಪೂರ್ಣವೆಂದು ಸಾರುತ್ತಿರುವವು. ಒಂದುವೇಳೆ ನಾನು ಊಹಿಸುವದಕ್ಕಿಂತಲೂ ಪ್ರಬಲವಾದ ಕಾರಸ್ಥಾನವನ್ನು ಅವನು ಹೂಡಿರಬಹುದು ಅವನ ಆಗ್ರಹವು ಕುಂತಳ ರಾಜನಂದಿನಿಯನ್ನು ವಿವಾಹ ಮಾಡಿಕೊಳ್ಳುವುದಲ್ಲದೆ, ಅದರ ಮೂಲಕ ಕುಂತಳ ಸಿಂಹಾಸನವನ್ನು ಆಕ್ರಮಿಸುವದೂ ಆತನ ಹಂಬಲವಾಗಿರಲಿಕ್ಕೆ ಸಾಕು!''

''ಆದರೆ ದುಷ್ಟಬುದ್ಧಿಯಂಥ ರಾಜಸೇವಾನಿರತನಾದ ಕಾರ್ಯಧುರೀಣನು ಕುಂತಳದಲ್ಲಿ ಬೇರೊಬ್ಬನಿಲ್ಲವೆಂದು ನುಡಿಯುತ್ತಿರುವರಲ್ಲ ಜನರು! ಅಂಥ ಸ್ವಾಮಿನಿಷ್ಠಸೇವಕನ ಮಗನು ಎಂದಾದರೂ ಸಿಂಹಾಸನಕ್ಕೆದುರಾಗಿ ಬಂಡು ಮಾಡುವನೆ?''

''ದುಷ್ಟಬುದ್ಧಿ! ಅವನು ಸ್ವಾಮಿಕಾರ್ಯನಿರತನಿರಬಹುದು; ಕರ್ತವ್ಯದಕ್ಷನಿರಬಹುದು; ಆದರೆ ಅವನಲ್ಲಿ ಅಧಿಕಾರಲಾಲಸೆಯು ಅಪರಿಮಿತವಾಗಿದೆ ಎಂದು ನಾನು ಬಗೆಯುತ್ತೇನೆ. ದುಷ್ಟಬುದ್ಧಿಯು ಕುಳಿಂದದಲ್ಲಿ ನಮ್ಮ ಅರಮನೆಗೆ ಬರುವ ಮುಂಚೆ, ಶಶಾಂಕಶೇಖರನಲ್ಲಿಗೆ ಹೋಗಿದ್ದನೆಂಬು

ದನ್ನು ಬಲ್ಲೆಯಾ?''

"ಇಲ್ಲ; ಆ ಸಂಗತಿಯು ನನಗೆ ತಿಳಿಯದು."

"ಆದರೆ ಅವನು ಆ ಕೋಟ್ಯಾಧೀಶ್ವರನಲ್ಲಿಗೆ ತೆರಳುವದನ್ನು ನಾನು ಬಲ್ಲೆನು ಏಕಾಗಿ?''

"ಏಕಾಗಿರಬಹುದು'' ಎಂದು ಹೇಳಿ ಚಂದ್ರಹಾಸನು ಮೌನವನ್ನು ಅವಲಂಬಿಸಿದನು. ನಾಗರಾಜನ ಮಾತುಗಳಿಂದ ಬಹಳ ವಿಸ್ಮಯವು ಅವನಲ್ಲಿ ಸಂಜಾತವಾಗಿದ್ದಿತು. ತನ್ನ ಗೆಳೆಯನ ಮುಖದಿಂದ ಸಿಡಿಲಿನಂತೆ ಇನ್ನಾವ ಅದ್ಭುತವು ಹೊರಬರುವದೋ, ಎಂಬ ಶಂಕೆಯಿಂದ ಅವನು ನಾಗರಾಜನ ಮುಖವನ್ನು ವೀಕ್ಷಿಸಿದನು.

"ಚಂದ್ರಹಾಸ, ಅವನು ಅಲ್ಲಿಗೆ ತೆರಳಲು ಯಾವದೋ ಒಂದು ಪ್ರಬಲ ಕಾರಣವಿದೆ. ಶಶಾಂಕಶೇಖರನು ದುಷ್ಟಬುದ್ಧಿಯ ಮಿತ್ರನೇನೂ ಅಲ್ಲ; ರಾಜ್ಯಕಾರ್ಯದಲ್ಲಿ ಕೋಟ್ಯಾಧೀಶ್ವರನ ಕೈವಾಡವಿಲ್ಲ. ಹಾಗಿರಲು ಅಲ್ಲಿಗೆ ಅಮಾತ್ಯನು ತೆರಳಲು ಪ್ರಬಲವಾದ ಯಾವುದೋ ಒಂದು ಉದ್ದೇಶವು ಇದ್ದೇ ಇರಬೇಕು. ಆ ಉದ್ದೇಶವು ಧನಕಾರ್ಯ ಸಂಬಂಧಿಸಿದುದಲ್ಲದೆ ಬೇರೆ ಯಾವುದೂ ಆಗಿರಲಾರದು. ರಾಜ್ಯಕಾರ್ಯಕ್ಕಾಗಿ ಧನದ ಬಗ್ಗೆ ಶಶಾಂಕಶೇಖರನನ್ನು ಆಶ್ರಯಿಸಬೇಕಾದ ಆವಶ್ಯಕತೆಯಿಲ್ಲ. ಸ್ವಾರ್ಥೋದ್ದೇಶಕ್ಕಾಗಿದೆ ಧನವು'' ಎಂದು ಹೇಳಿ ನಾಗರಾಜನು ಸುಮ್ಮನಾದನು.

"ಊಹಾ-ಪೋಹಗಳಿಂದ ಕಾರ್ಯಗಳನ್ನು ನಿರ್ಧರಿಸುವದು ಗಾಳಿಯ ಗೋಪುರಗಳಾಗಿ ಪರಿಣಮಿಸಬಹುದು; ಗೆಳೆಯಾ, ಪ್ರತ್ಯಕ್ಷ ನಿದರ್ಶನಗಳಿಲ್ಲದೆ ಒಬ್ಬನನ್ನು ಕುರಿತು ಸಂಶಯವನ್ನು ತಾಳುವುದು ಅನುಚಿತವು."

"ಪ್ರತ್ಯಕ್ಷ ಪ್ರಮಾಣಗಳು ಸಿಗುವುದು ಕಷ್ಟ; ಆದರಲ್ಲಿಯೂ ರಾಜಕಾರಣದಲ್ಲಿ, ಪ್ರತ್ಯಕ್ಷ ಪ್ರಮಾಣಗಳು ದೊರಕದಂತೆ ಜಾಗರೂಕತೆಯಿಂದ ವರ್ತಿಸುವ ರಾಜದ್ರೋಹಿಗಳೇನೂ ಕಡಿಮೆಯಿಲ್ಲ. ಪರಚಕ್ರ ಬಾಧೆಯು ಪ್ರತ್ಯಕ್ಷ ಪ್ರಮಾಣಗಳಿಲ್ಲದುದರಿಂದ ಸುಳ್ಳು ಎಂದು ನಿರ್ಧರಿಸುವುದು ಎಷ್ಟು ವಿವೇಕಶೂನ್ಯವಾಗಿದೆ ಎಂಬುದನ್ನು ನೀನೇ ಆಲೋಚಿಸು. ಶತ್ರುಗಳು ರಹಸ್ಯವಾಗಿ ನಮ್ಮ ನಾಡನ್ನು ಆಕ್ರಮಿಸಲು ಒಳಸಂಚು ಪ್ರಾರಂಭಿಸಿ ಕಾಲವೆಷ್ಟಾಯಿತೆಂದು ಹೇಳಲು ಸಾಧ್ಯವಿಲ್ಲ. ಅನೇಕ ಕಾಲದ ಅವರ ರಹಸ್ಯ ಉದ್ಯಮಗಳ ಫಲವೇ ಲಾಟರ ಇಂದಿನ ಆಕ್ರಮಣ ಸಂಬಂಧವಾಗಿದೆ. ಕುಂತಳದ ರಾಜ್ಯತಂತ್ರಜ್ಞರು ತಾವು ಅಭಿಮಾನ ಪಡುತ್ತಿರುವಷ್ಟೇ ಮೇಧಾವಿಗಳಿದ್ದರೆ, ಈ ಪರಚಕ್ರಬಾಧೆಯನ್ನು ಸಂಗ್ರಾಮವಿಲ್ಲದೆ ಕಿತ್ತು ಹಾಕಬಹು

ದಿತ್ತು. ದೇಶಪಾಲನೆಯನ್ನು ಕೈಗೊಂಡ ಅಧಿಕಾರಿಗಳು ಮರುನಾಡುಗಳ ಶಾಸಕರ ಪ್ರತಿಯೊಂದು ಪ್ರಯತ್ನವನ್ನು ಚಾರರ ಮೂಲಕ ತಿಳಿದುಕೊಂಡು, ಆ ಉದ್ಯಮವನ್ನು ಕುರಿತು ಆಳವಾಗಿ ಚಿಂತಿಸಿ, ಅದರ ಕಾರಣಗಳನ್ನೂ, ಭಾವೀ ಫಲವನ್ನೂ ಊಹಿಸಿ ತಿಳಿದುಕೊಳ್ಳುವುದು ಅತ್ಯವಶ್ಯಕವಾಗಿದೆ. ಅದರಂತೆಯೇ, ಅದು ನಮ್ಮ ನಾಡಿನ ಹಿತಕ್ಕೆ ವಿಪರೀತವೆಂದು ತೋರಿದರೆ, ಅದನ್ನು ನಿವಾರಿಸಲಿರುವ ಮಾರ್ಗವನ್ನು ಒಡನೆಯೇ ಸ್ವೀಕರಿಸತಕ್ಕದು."

"ಅಲ್ಲ ನಾಗರಾಜ, ನೀನು ಊಹಿಸುತ್ತಿರುವ ಮದನನ ಕಾರಸ್ಥಾನಕ್ಕೂ ರಾಜಕಾರಣಕ್ಕೂ ಏನು ಸಂಬಂಧವಿದೆ? ಈ ನಿನ್ನ ಮಾತುಗಳ ತಾತ್ಪರ್ಯವು ನನಗೆ ಹೊಳೆಯಲೊಲ್ಲದು."

"ಚಂದ್ರಹಾಸ, ನಿನ್ನ ಅಸಾಮಾನ್ಯ ಧೈರ್ಯವನ್ನೂ ಕಲಿತನವನ್ನೂ ನಾನು ಮುಕ್ತಕಂಠದಿಂದ ಹೊಗಳುವೆನು. ಆ ಗುಣಗಳನ್ನು ವಿಧಾತನು ನನಗೆ ದಯಪಾಲಿಸದಿದ್ದಕ್ಕಾಗಿ ವ್ಯಸನಪಡುತ್ತೇನೆ; ಆದರೆ ನೀನು ಬಹಳ ಸರಳ ಮನಸ್ಕನು. ಮನುಷ್ಯನ ನಗುಮೊಗದಲ್ಲಿರುವ ಮಂದಹಾಸದ ಹಿಂಬದಿಯಲ್ಲಿ ಅಡಗಿರುವ ಭಯಂಕರ ರಹಸ್ಯಗಳನ್ನು ತಿಳಿದುಕೊಳ್ಳುವ ಚೈತನ್ಯವು ನಿನಗಿಲ್ಲ. ಈ ಶಕ್ತಿಯು ಒಂದು ನಾಡಿನ ಪಾಲನೆಯ ಭಾರವನ್ನು ಹೊರಬೇಕಾಗಿ ಬರುವ ನಿನ್ನಂಥ ವ್ಯಕ್ತಿಗಳಿಗೆ ಅತ್ಯಾವಶ್ಯಕವಾಗಿದೆ. ಆ ಕೌಶಲ್ಯವು ಇಲ್ಲದಿದ್ದರೆ, ಎಷ್ಟು ಪರಾಕ್ರಮಶಾಲಿಯಾದರೂ ತನ್ನ ಅಧಿಕಾರದ ವರ್ಚಸ್ಸನ್ನು ಹರಡುವದು ಪ್ರಯಾಸ ಸಾಧ್ಯವಾದ ಕೆಲಸವಾಗಿದೆ. ಒಬ್ಬೊಬ್ಬ ವ್ಯಕ್ತಿಯ ಸ್ವಭಾವ, ಅವನ ಪ್ರಯತ್ನಗಳು, ಅವುಗಳಿಂದಾಗುವ ಫಲಗಳು, ಅವುಗಳಿಂದ ನಮಗೆ ಸಿದ್ಧಿಸುವ ಗುಣದೋಷಗಳು ಎಂಬಿವುಗಳನ್ನು ನಾವು ಅಗಾಧವಾಗಿ ಚಿಂತಿಸಿ, ತಿಳಿದುಕೊಳ್ಳಬೇಕು. ಅವು ನಮ್ಮ ಅಭ್ಯುದಯಕಾರಕಗಳೆಂದು ತೋರಿದರೆ, ನಮ್ಮ ಕೈಗಳನ್ನು ನೀಡಿ ಅವನನ್ನು ಹಿಡಿದು ಎತ್ತತಕ್ಕದಾಗಿದೆ. ಅದಲ್ಲದೆ ಅವನ ವರ್ತನೆಯು ನಮ್ಮ ದಾರಿಯಲ್ಲಿರುವ ಒಂದು ಪ್ರತಿಬಂಧವೆಂದು ಕಂಡುಬಂದರೆ, ಆ ಕ್ಷಣದಲ್ಲಿಯೇ ಅವನನ್ನು ಹಿಡಿದು ರಸಾತಳಕ್ಕೆ ಮೆಟ್ಟಬೇಕು. ಇದಾಗಿದೆ ಜೀವನವಿಜಯ ರಹಸ್ಯವು! ನಿನಗೊಂದು ಉದಾಹರಣೆಯನ್ನು ನಾನು ಕೊಡುವೆನು: ಕುಂತಳದ ಸಾಮ್ರಾಟನ ಕೀರ್ತಿಯು ಈ ನಾಡಿನಲ್ಲಿ ಬೇರೂರಿದೆ; ಇದಕ್ಕೆ ಕಾರಣವು ಸನ್ನಿವೇಶ, ಜನತೆಯ ಸ್ವಭಾವ ಇವುಗಳನ್ನೆಲ್ಲ ಸಮೂಲಾಗ್ರವಾಗಿ ಚಿಂತಿಸಿ, ನಾಡು ತನಗನುಕೂಲವಾಗುವ ರೀತಿಯಲ್ಲಿ ಅಮಾತ್ಯನು ತನ್ನ ತಂತ್ರಗಳನ್ನು ಪ್ರಯೋಗಿಸಿದುದಾಗಿದೆ. ದುಷ್ಟಬುದ್ಧಿಯ ಪ್ರಯತ್ನ

ಗಳನ್ನೂ ಅವನ ತಂತ್ರಗಳನ್ನೂ ಚೆನ್ನಾಗಿ ಪರಿಶೀಲಿಸಿ ತಿಳಿದುಕೊಂಡವರಿಗೆ ಅವನ ರಾಜ್ಯತಂತ್ರದ ರಹಸ್ಯವು ಗೊತ್ತಾಗುವದು. ಅದರಂತೆಯೇ ಮದನನು ತಂದೆಗಿಂತಲೂ ಮಿಗಿಲಾದ ತಂತ್ರಶಾಲಿಯು! ಆದರೆ ಈ ಚಾಣಾಕ್ಷರಿಬ್ಬರೂ ತಮ್ಮ ದಾರಿಯನ್ನು ತಪ್ಪಿ ನಡೆದರು. ಅವರು ತಮ್ಮ ಭಯಂಕರ ಕಾರಸ್ಥಾನವು ಬೈಲಿಗೆ ಬೀಳದಂತೆ ಅತ್ಯಂತ ಜಾಗರೂಕರಾಗಿ, ತಮ್ಮ ಭಯಂಕರ ಕೃತ್ಯಗಳ ಯಾವ ಕುರುಹುಗಳೂ ಹೊರಬೀಳವಂತೆ ವರ್ತಿಸಿದರು; ಆದರೆ ಅವರು ವಿಚಾರಿಸಿದುದಕ್ಕಿಂತಲೂ ಹೆಚ್ಚು ದೂರಕ್ಕೆ ನನ್ನ ಬುದ್ಧಿಯು ತಲುಪಿತು. ರಾಜಗೇಹಕ್ಕೆ ಬಂದ ಮದನನನ್ನು ಕಂಡೊಡನೆಯೇ ಅವನ ಮುಖದಲ್ಲಿ ಮೂಡಿದ್ದ ನಿರಾಶೆಯ ಭಾವದಿಂದ ಅವನಿಗೂ ರಾಜನಂದಿನಿಯ ಅಪಹರಣೆಯೆಂಬ ಭಯಂಕರ ಕೃತ್ಯಕ್ಕೂ ಯಾವುದೋ ಒಂದು ಸಂಬಂಧವಿದೆಯೆಂದು ನಾನು ಊಹಿಸಿದೆನು. ಘಾತುಕರನ್ನು ಮದನನು ನೋಡಿದಾಗ ಅವನಲ್ಲಿ ಕಂಡ ಆಶ್ಚರ್ಯ, ವಿಸ್ಮಯ, ತನ್ನ ಕಡೆಗಣ್ಣನ್ನು ಹಾರಿಸಿದುದು ಇವೆಲ್ಲವೂ ನನ್ನ ಸಂದೇಹಗಳನ್ನು ದೃಢಪಡಿಸಿದುವು. ಈ ಚಿಕ್ಕ ಸಂಗತಿಗಳು ನನಗೆ ಸರಿಯಾದ ದಾರಿಯನ್ನು ತೋರಿಸಿಕೊಟ್ಟವು. ನಾನೀಗ ನುಡಿಯುತ್ತಿರುವದು ನನ್ನ ಸಂಕಲ್ಪ ಸೃಷ್ಟಿಯಲ್ಲ; ಹಗಲು ಕಂಡ ಸ್ವಪ್ನವಲ್ಲ! ನಾನು ನುಡಿದುದೆಲ್ಲವೂ ಸತ್ಯವೆಂದು ನನಗೆ ಮನದಟ್ಟಾಗಿರುವದು.''

ಚಂದ್ರಹಾಸನು ತನ್ನ ತುಟಿಯನ್ನು ಎರಡು ಮಾಡಲಿಲ್ಲ; ಅವನು ನಾಗರಾಜನ ಈ ದೀರ್ಘವಾದ ಸಂವಾದವನ್ನು ಮೌನದಿಂದ ಆಲಿಸಿದನು. ತನ್ನ ಗೆಳೆಯನ ಊಹಾಪೋಹಗಳು ಅದೆಷ್ಟರಮಟ್ಟಿಗೆ ದಿಟವಾಗಿವೆ? ಎಂಬುದನ್ನು ಚಂದ್ರಹಾಸನು ಮನಸ್ಸಿನಲ್ಲಿಯೇ ಚಿಂತಿಸತೊಡಗಿದನು. ಪ್ರತ್ಯಕ್ಷನಿದರ್ಶನಗಳು ಇಲ್ಲದಿರುವಾಗ ಒಬ್ಬನನ್ನು ಸಂಶಯದೃಷ್ಟಿಯಲ್ಲಿ ವೀಕ್ಷಿಸುವ ಸ್ವಭಾವವು ಚಂದ್ರಹಾಸನಿಗಿರಲಿಲ್ಲ. ಮದನಕುಮಾರನ ಮುಖದಲ್ಲಿ ತೋರಿದ ಭಾವಭೇದಗಳಿಂದ ಅನೇಕ ಸಂಶಯಗಳು ಚಂದ್ರಹಾಸನಲ್ಲಿ ಸಂ-ಜಾತವಾದುವು, ಎಂಬುದನ್ನು ಹಿಂದೆಯೇ ನಾವು ನುಡಿದಿರುವೆವಷ್ಟೆ? ಆದರೆ ಆ ಸರಳಮನಸ್ಕನು ಕುಂತಳದ ಅಮಾತ್ಯಶ್ರೇಷ್ಠನ ಪುತ್ರನು ಇಷ್ಟು ಹೀನತರಗತಿಯ ಉದ್ಯಮಗಳಲ್ಲಿ ನಿರತನಾಗನೆಂದು ತನ್ನ ಮನಸ್ಸಿನಲ್ಲಿ ನೆನೆದು, ತುಂಬಿದ್ದ ಸಂಶಯಪಿಶಾಚಗಳನ್ನು ಹೊಡೆದು ಓಡಿಸಿದನು. ಅದಲ್ಲದೆ, ಮದನನ ಔದಾರ್ಯ ಮತ್ತು ವಿನಯಗಳು ಅವನನ್ನು ಮುಗ್ಧನನ್ನಾಗಿ ಮಾಡಿದ್ದುವು. ಆ ಸರಳ ಹೃದಯನು ನಾಗರಾಜನಂತೆ ಮದನಕುಮಾರನ ಘಟನೆಯ ಹಿಂದೆ ಭಯಂಕರ ಕಾಪಟ್ಯವು ನಿಂತಿದೆ, ಎಂದು ಆಲೋಚಿಸಲಿಲ್ಲ;

ಆ ರೀತಿ ಚಿಂತಿಸಬು ಚಂದ್ರಹಾಸನು ತನ್ನ ಬುದ್ಧಿಯನ್ನು ಉಪಯೋಗಿಸಲಿಲ್ಲ.

ಚಂದ್ರಹಾಸನ ಪರಿಭ್ರಮವನ್ನೂ, ವಿಚಾರತಲ್ಲೀನತೆಯನ್ನೂ ಕಂಡು ನಾಗರಾಜನು ಗಹಗಹಿಸಿ ನಗುತ್ತಾ ನುಡಿದನು:—"ರಾಜಕುಮಾರಾ, ಈ ವಿಷಯವನ್ನು ಕುರಿತು ಚಿಂತಿಸಿ ಮತಿಭ್ರಮೆಯನ್ನು ಹೊಂದದಿರು. ನಾನು ನುಡಿದಿರುವ ಸಂಗತಿಗಳು ವಾಸ್ತವವಾಗಿವೆ ಎಂಬುದಕ್ಕೆ ಪ್ರತ್ಯಕ್ಷ ನಿದರ್ಶನಗಳು ನಿನಗೆ ಸ್ವಲ್ಪ ಕಾಲದಲ್ಲಿಯೇ ದೊರಕುವುವು ಚಂದ್ರಹಾಸ, ನಾನು ರಣಶೂರನಲ್ಲ; ಕಾಳಗವೆಂದರೆ ನನ್ನ ಮೈಮೇಲಿನ ರೋಮಗಳು ಎದ್ದು ನಿಲ್ಲುವುವು. ಮನುಷ್ಯ ರಕ್ತವು ನದಿಯಾಗಿ ಹರಿಯುವುದನ್ನು ನೋಡುವಾಗ, ನನ್ನ ತಲೆಯು ಸುತ್ತುತ್ತಿರುವುದು ಆದುದರಿಂದ ಕಾಳಗದಲ್ಲಿ ನನ್ನಿಂದ ನಿನಗೆ ಹೆಚ್ಚಿನ ಪ್ರಯೋಜನವು ಲಭಿಸಲಾರದು; ಆದರೆ ನನ್ನ ಬುದ್ಧಿಯಿಂದ ನನ್ನ ಚಿಂತನೆಗಳಿಂದ, ಯಾವುದಾದರೂ ಪ್ರಯೋಜನಗಳು ನಿನಗೆ ಲಭಿಸುವುದಾದರೆ ಅವುಗಳನ್ನು ನೀಡಲು ನಾನು ಸಹರ್ಷ ಸನ್ನದ್ಧನಾಗಿರುವೆನು!"

ನಾಗರಾಜನ ಕಂಠವನ್ನು ತನ್ನ ತೋಳುಗಳಿಂದ ಬಿಗಿದಪ್ಪಿ ಪ್ರೇಮಭರಿತನಾದ ಚಂದ್ರಹಾಸನು ನುಡಿವನು:—"ಗೆಳೆಯಾ, ನಾಗರಾಜ, ನೀನು ನನ್ನ ಪರಮ ಆಪ್ತನು; ಅಣ್ಣತಮ್ಮಂದಿರು ನನಗಿಲ್ಲ; ಆದರೆ ಆ ಬಂಧುಪ್ರೇಮವನ್ನು ನಾನು ನಿನ್ನಲ್ಲಿ ಹೀರುತ್ತಿರುವೆನು. ಇದುವರೆಗೆ ನೀನು ಮಾಡಿದ ಮಹದುಪಕಾರಗಳನ್ನು ಎಂದಿಗೂ ಮರೆಯಲಾರೆನು. ನಿನ್ನ ಚಿಂತನೆ, ಜ್ಞಾನ ಇವುಗಳಿಂದ ಮಹತ್ತಾದ ಪ್ರಯೋಜನವನ್ನು ನಾನು ಹೊಂದಿರುವೆನು. ನಾನು ಪರಾಕ್ರಮಶಾಲಿಯಾಗಿದ್ದರೆ ಅದಕ್ಕೆ ಕಾರಣಭೂತನು ನೀನು! ನಿನ್ನ ಉಪದೇಶಗಳಿಂದಲೇ ನನ್ನ ಎದೆಯು ಧೈರ್ಯವನ್ನು ಹೊಂದುವುದು."

ನಾಗರಾಜ-ಚಂದ್ರಹಾಸ ಇವರ ಸಂಬಂಧವು ಅಣ್ಣತಮ್ಮಂದಿರ ನಡುವೆ ಇರುವ ಪ್ರೇಮಕ್ಕಿಂತಲೂ ಗಾಢವಾಗಿದ್ದಿತು. ಚಂದ್ರಹಾಸನು ನುಡಿದಂತೆ ಅವನ ಸಾಧನೆಗಳಿಗೆ ಸ್ಫೂರ್ತಿಯನ್ನು ನೀಡುತ್ತಿರುವ ವ್ಯಕ್ತಿಯು ನಾಗರಾಜನಾಗಿದ್ದನು. ಆ ಇಬ್ಬರು ಗೆಳೆಯರು ಶಕ್ತಿ, ಧೈರ್ಯ, ಸಾಹಸಗಳೂ ಅಸಾಮಾನ್ಯ ಬುದ್ಧಿಕೌಶಲ್ಯವೂ ಮಿಲನವನ್ನು ಹೊಂದಿದಂತೆ ಇದ್ದರು. ಅವರಿಬ್ಬರೂ ಬೇರೆ ಬೇರೆಯಾಗಿ ಜೀವಿಸಿದ್ದರೆ, ಚಂದ್ರಹಾಸನ ಬದುಕು ಇಷ್ಟು ಆವೇಶಜನಕವಾಗುತ್ತಿರಲಿಲ್ಲ; ವಿಜಯವು ಕರಗತವಾಗುತ್ತಿರಲಿಲ್ಲ. ಚಂದ್ರಹಾಸನ ವಿಜಯಗಳಲ್ಲಿ ಅವನ ಶೌರ್ಯ-ಸಾಹಸಗಳು ತುಂಬಿದ್ದಂತೆಯೇ ನಾಗರಾಜನ ಬುದ್ಧಿಕೌಶಲ್ಯವೂ ಅವುಗಳಲ್ಲಿ ತುಳುಕುತ್ತಿತ್ತು. ನಾಗರಾಜನು ಆ ವಿಜಯದ ಹೆಸರನ್ನು ತನ್ನ ಗೆಳೆಯನಿಗೆ ಕೊಟ್ಟು ತಾನು ಓರ್ವ ಸಾಮಾನ್ಯ

ನಂತೆ ಹಿಂಜರಿದು ನಿಂತು, ಆ ದೃಶ್ಯವನ್ನು ನೋಡುತ್ತ ತನ್ನ ಗೆಳೆಯನ ಶ್ರೇಯಸ್ಸಿನಲ್ಲಿ ಅಭಿಮಾನವನ್ನು ತಾಳುತ್ತಲಿದ್ದನು.

ಬೆಳಗಾಯಿತು; ರಣರಂಗಕ್ಕಿರುವ ಯಾತ್ರೆಯನ್ನು ಪ್ರಾರಂಭಿಸಲು ಆವಶ್ಯವಿರುವ ಸನ್ನಾಹಗಳ ಕೋಲಾಹಲವು ಕುಳಿಂದ ಸೈನ್ಯದ ಪಾಳಯ ಗಳಿಂದ ಕೇಳಿಬರುತ್ತಲಿದ್ದಿತು. ನಾಲ್ಕಾರು ದಿನಗಳ ವಿಶ್ರಾಮಕ್ಕಾಗಿ ಸೈನಿಕರು ರಾಜಧಾನಿಗೆ ಬಂದು ಪ್ರವಾಸದಿಂದ ಉಂಟಾದ ಬಳಲಿಕೆಯನ್ನು ಹೋಗಲಾಡಿಸಿಕೊಂಡು ಹೊಸ ಸ್ಫೂರ್ತಿಯನ್ನು ಪಡೆದಿದ್ದರು. ತಮ್ಮ ತರುಣ ನಾಯಕನ ನೇತೃತ್ವದಲ್ಲಿ ರಣಾಂಗಣದಲ್ಲಿ ವಿಜಯಶ್ರೀಯನ್ನು ಸಂಪಾದಿಸಲು ಅವರು ಹಾತೊರೆಯುತ್ತಿದ್ದರು. ದಂಡಯಾತ್ರೆಯನ್ನು ಮುಂದುವರಿಸಲು ನಾಯಕನಿಂದ ಉಪಲಬ್ಧವಾದ ಆಜ್ಞೆಯು ಅವರ ಉತ್ಸಾಹಗಳನ್ನು ದ್ವಿಗುಣೀಗೊಳಿಸಿತು.

ದಂಡು ತನ್ನ ಯಾತ್ರೆಗಿರುವ ಸನ್ನಾಹಗಳನ್ನು ಸಿದ್ಧಗೊಳಿಸುತ್ತಿರಲು, ಚಂದ್ರಹಾಸನು ನಾಗರಾಜನೊಡನೆ ಮಹಾರಾಜನನ್ನು ಕಂಡು ಬೀಳ್ಕೊಳ್ಳುವುದಕ್ಕಾಗಿ ಅರಮನೆಗೆ ತೆರಳಿದನು. ರಾಜಕುಮಾರನು ಅರಮನೆಯ ಹೆಬ್ಬಾಗಿಲಿಗೆ ತಲುಪಲು, ಭೃತ್ಯರು ಅವರಿಬ್ಬರನ್ನು ಆದರಪೂರ್ವಕವಾಗಿ ಉಪಚರಿಸಿ ಕುಂತಳೇಂದ್ರನ ವಸತಿಗೆ ಒಯ್ದರು. ಕುಂತಳೇಂದ್ರನು ಯಾವುದೋ ಒಂದು ಅಧ್ಯಾತ್ಮಿಕ ಗ್ರಂಥವನ್ನು ಕೈಯಲ್ಲಿ ಹಿಡಿದುಕೊಂಡು ಪಾರಾಯಣ ಮಾಡುವದರಲ್ಲಿ ನಿರತನಾಗಿದ್ದನು ಚಂದ್ರಹಾಸನೂ ನಾಗರಾಜನೂ ಅರಸನಿಗೆ ಭಕ್ತಿಪೂರ್ವಕವಾಗಿ ತಮ್ಮ ಪ್ರಣಾಮಗಳನ್ನು ಅರ್ಪಿಸಿದರು. ತರುಣರನ್ನು ಕಂಡೊಡನೆಯೇ ಕುಂತಳೇಂದ್ರನು ತನ್ನ ಪಾರಾಯಣವನ್ನು ನಿಲ್ಲಿಸಿ, ಗ್ರಂಥವನ್ನು ಒಂದು ಬದಿಗಿಟ್ಟು, ಸ್ನೇಹಪರಿಪೂರ್ಣವಾದ ದೃಷ್ಟಿಯಲ್ಲಿ ಚಂದ್ರಹಾಸನನ್ನು ನೋಡುತ್ತ ನುಡಿದನು:—"ಮಗೂ, ಚಂದ್ರಹಾಸ, ಆರೋಗ್ಯವೇ?" ಎಂಬುದಾಗಿ.

"ಮಹಾರಾಜರ ಕೃಪೆಯಿಂದ ಯಾವುದಕ್ಕೂ ಕಡಿಮೆಯಿಲ್ಲ!"

"ಚಂದ್ರಹಾಸ, ನೀನು ಆರೋಗ್ಯದಿಂದಿರುವೆಯೆಂಬುದನ್ನರಿತು ನನಗೆ ಹರ್ಷವಾಯಿತು ನೀನು ನನಗೆ ಅನ್ಯನಲ್ಲ; ಕುಳಿಂದಕನ ಪುತ್ರನು ನನಗೂ ಕುಮಾರನೇ ಆಗಿರುವನು"

"ಮಹಾರಾಜರು ನನ್ನ ಮೇಲೆ ಅಷ್ಟು ಕೃಪೆಯಿಟ್ಟಿರುವುದರಿಂದ ನಾನು ಭಾಗ್ಯಶಾಲಿಯೇ ಸರಿ!"

"ನೀನು ರಾಜಧಾನಿಯನ್ನು ನೋಡಿ ಆನಂದಿಸಿದೆ, ಎಂದು ಭಾವಿಸುತ್ತೇನೆ"

"ಹೌದು; ಮಹಾರಾಜರು ತೋರಿಸಿದ ಮನ್ನಣೆಯನ್ನು ನಾನು ಮರೆಯುವವನಲ್ಲ. ತಮ್ಮ ಅಪ್ಪಣೆಯನ್ನು ಪಡೆಯಲು ನಾನು ಬಂದಿರುವೆನು."

"ಏನದು?"

"ಕಾಳಗಕ್ಕೆ ತೆರಳಲು. ನಮಗೆ ನಾಲ್ಕಾರು ದಿನಗಳ ವಿಶ್ರಾಂತಿಯು ಲಭಿಸಿತು. ದಂಡಾಳುಗಳು ತಮ್ಮ ಬಳಲಿಕೆಗಳನ್ನು ಪರಿಹರಿಸಿಕೊಂಡು, ತಮ್ಮ ಪ್ರಯಾಣವನ್ನು ಮುಂದುವರಿಸಲು ಉತ್ಸಾಹಿಗಳಾಗಿರುತ್ತಾರೆ. ಇನ್ನು ವಿಳಂಬ ಮಾಡಬೇಕಾದ ಆವಶ್ಯಕತೆಯಿಲ್ಲವೆಂದು ಭಾವಿಸಿ, ತಮ್ಮ ಅಪ್ಪಣೆಯನ್ನು ಪಡೆಯುವದಕ್ಕಾಗಿ ಬಂದೆನು."

"ಪ್ರಯಾಣಕ್ಕೆ ಯಾವಾಗ ಹೊರಡುವಿರಿ?"

"ಇಂದು ಸಂಜೆಗೇ!"

"ನಿನಗೆ ರಣಾಂಗಣದಲ್ಲಿ ವಿಜಯವಾಗಲಿ! ಕುಳಿಂದಸ್ವಾತಂತ್ರ್ಯದ ಜನರ ಬಾಹುಗಳ ಬಲದಿಂದ ನಮ್ಮ ಸಾಮ್ರಾಜ್ಯವು ನೆಲೆನಿಂತಿರುವುದೆಂಬುದನ್ನು ನಾನು ಮರೆಯತಕ್ಕವನಲ್ಲ. ಈಗಲಾದರೂ ನಮ್ಮ ವಿಜಯವು ನಿಮ್ಮ ತೋಳುಗಳನ್ನು ಆಶ್ರಯಿಸಿ ನಿಂತಿರುವುದೆಂಬುದನ್ನು ಬಲ್ಲೆನು."

"ನಮ್ಮ ನಾಡಿನ ಜನರ ಮೇಲೆ ಮಹಾರಾಜರು ಇಷ್ಟು ಅಭಿಮಾನವನ್ನಿಟ್ಟಿರುವದು ನನಗೆ ಹೆಮ್ಮೆಯನ್ನು ನೀಡುತ್ತಿದೆ. ಕುಳಿಂದದ ಜನರು ಈ ಯುದ್ಧದಲ್ಲಿ ತಮ್ಮ ರಣಕೌಶಲ್ಯವನ್ನು ತೋರಿಸಿ ವಿಜಯಶ್ರೀಯನ್ನು ಸಂಪಾದಿಸುವರೆಂದು ನಾನು ತಮಗೆ ಭರವಸೆಯನ್ನು ನೀಡುವೆನು."

"ಕುಳಿಂದದ ಜನರಲ್ಲಿ ನನಗೆ ನಂಬಿಕೆಯಿದೆ; ಚಂದ್ರಹಾಸ, ನೀನು ವಿಜಯಿಯಾಗಿ ನಿನ್ನ ತಂದೆಯವರ ಪಾವನದ ಹೆಸರಿನ ಕೀರ್ತಿಯನ್ನು ಹೆಚ್ಚಿಸು."

"ಮಹಾರಾಜರ ಅನುಗ್ರಹದಿಂದ ಅದು ಸಾಧ್ಯವಾಗುವುದೆಂದು ನನ್ನ ನಂಬಿಕೆಯು! ರಾಜನಂದಿನಿಯನ್ನು ಕಂಡು ಅವಳಿಗೆ ನನ್ನ ಪ್ರಣಾಮಗಳನ್ನು ಅರ್ಪಿಸಲು ಅನುಮತಿಯನ್ನು ನೀಡಬೇಕಾಗಿ ನನ್ನ ಪ್ರಾರ್ಥನೆಯು!"

"ದುಷ್ಟರ ಕರಗಳಿಂದ ಅವಳನ್ನು ರಕ್ಷಿಸಿದ ನೀನು ಅವಳ ದರ್ಶನಕ್ಕಾಗಿ ನನ್ನ ಅನುಮತಿಯನ್ನು ಪಡೆಯಬೇಕೆಂಬ ನಿರ್ಬಂಧನೆಯಿರುವದಿಲ್ಲ. ನೀನು ಯುದ್ಧರಂಗಕ್ಕೆ ತೆರಳುವ ಮುಂಚೆ ಅವಳನ್ನು ಅಗತ್ಯವಾಗಿ ನೋಡಬೇಕಾಗಿದೆ." ಎಂದು ಒಂದು ಮಂದಸ್ಮಿತವನ್ನು ಬೀರಿ, ಕುಂತಳೇಂದ್ರನು ಒಬ್ಬ ಭೃತ್ಯನನ್ನು ಕರೆದು ಹೇಳಿದನು:

"ಈ ರಾಜಕುಮಾರನಿಗೆ ಚಂಪೆಯ ವಸತಿಯನ್ನು ತೋರಿಸಿಕೊಡು."

"ಹಾಗೆಯೇ ಆಗಲಿ ಮಹಾಪ್ರಭು" ಎಂದು ಭೃತ್ಯನು ತೆರಳಿದನು. ಚಂದ್ರಹಾಸನು ಅವನನ್ನು ಹಿಂಬಾಲಿಸಿದನು.

ಚಂದ್ರಹಾಸನು ತೆರಳಿದ ನಂತರ ನಾಗರಾಜನು ಕುಂತಳೇಂದ್ರನನ್ನು ನೋಡುತ್ತ ನಮ್ರಭಾವದಲ್ಲಿ ಹೇಳಿದನು:—"ಮಹಾರಾಜರು ಈಗ ರಾಜಕಾರಣದಲ್ಲಿ ಹೆಚ್ಚಿನ ಶ್ರದ್ಧೆಯನ್ನು ಪತಿಕವಿರುವ ಹಾಗೆ ತೋರುತ್ತದೆ."

"ಇಲ್ಲ. ದುಷ್ಟಬುದ್ಧಿಯು ಉತ್ತಮ ತರಗತಿಯ ರಾಜತಂತ್ರಜ್ಞನು. ಅವನು ಕುಂತಳದ ಅಮಾತ್ಯನಾಗಿರುವಾಗ, ನಾನು ರಾಜಕಾರಣದಲ್ಲಿ ಶ್ರಮವನ್ನು ವಹಿಸಬೇಕಾದುದಿಲ್ಲ. ನನ್ನ ಮನಸ್ಸು ರಾಜಕಾರಣದಿಂದ ವಿರಕ್ತಿಯನ್ನು ಹೊಂದಿ, ಅಧ್ಯಾತ್ಮಿಕ ಸಾಧನಗಳಲ್ಲಿ ನಿರತವಾಗಿರುವದು."

"ದುಷ್ಟಬುದ್ಧಿಯು ಅದ್ವಿತೀಯ ರಾಜತಂತ್ರಜ್ಞನೆಂಬುದು ವಾಸ್ತವವು; ಅಂಥ ಕುಶಲ ಬುದ್ಧಿಯ ಅಮಾತ್ಯನ ಕರಗಳಲ್ಲಿ ಖಡ್ಗವನ್ನೂ ಕೊರಳನ್ನೂ ಅರ್ಪಿಸುವುದು ವಿಹಿತವಲ್ಲ!"

"ನಾಗರಾಜ," ಎಂದೆಂದು ಆಶ್ಚರ್ಯಚಕಿತನಾದ ಕುಂತಳೇಂದ್ರನು: "ಆದೇಕೆ ಹಾಗೆ ನುಡಿಯುತ್ತಿರುವೆ? ದುಷ್ಟಬುದ್ಧಿಯು ಅತ್ಯಂತ ಸ್ವಾಮಿನಿಷ್ಠನಾದ ಅಮಾತ್ಯನಾಗಿರುವನು."

"ಮಹಾಸ್ವಾಮಿಯವರು ಆ ಚಾಣಾಕ್ಷನ ನಟನೆಗಳನ್ನು ಕಂಡು ಅವನು ಅತ್ಯಂತ ಸ್ವಾಮಿನಿಷ್ಠನೆಂದು ನಂಬಿದುದರಲ್ಲಿ ಆಶ್ಚರ್ಯವಿಲ್ಲ; ಆದರೆ ಅವನು ತನ್ನ ಅಂತರಂಗದಲ್ಲಿ ಕುಂತಳ ಸಿಂಹಾಸನಕ್ಕೆ ದ್ರೋಹವನ್ನು ಚಿಂತಿಸುತ್ತಿರುವನು."

ನಾಗರಾಜನ ಈ ನುಡಿಗಳನ್ನು ಆಶ್ರವಿಸಿ, ರಾಜೇಂದ್ರನು ಆಶ್ಚರ್ಯ ಮತ್ತು ಭಯ ಇವುಗಳಿಂದ ದಿಙ್ಮೂಢನಾಗಿ ಹೋದನು. ತನ್ನ ವಿಶ್ವಸ್ತ ಮಂತ್ರಿ,-ತಾನು ರಾಜಕಾರಣದ ಸಕಲ ಭಾರಗಳನ್ನೂ ಹೊರಿಸಿರುವ ದುಷ್ಟಬುದ್ಧಿ,--ನಾಗರಾಜನು ನುಡಿಯುತ್ತಿರುವಂತೆ ಕುಂತಳ ಸಿಂಹಾಸನಕ್ಕೆ ದ್ರೋಹವನ್ನು ಬಗೆಯುತ್ತಿರುವ ವೃತ್ತಿಯವನಿರಬಹುದೇ? ಎಂಬ ಶಂಕೆಯು ಕುಂತಳೇಂದ್ರನ ಹೃದಯದಲ್ಲಿ ಮೊದಲನೆಯ ಬಾರಿ ಸ್ಥಾನವನ್ನು ಹಿಡಿದಿತು. ದುಷ್ಟಬುದ್ಧಿಯು ಕುಂತಳದ ಅಭ್ಯುದಯಕ್ಕಾಗಿ ನೆರವೇರಿಸಿದ ಮಹತ್ಕಾರ್ಯಗಳನ್ನು ನೆನೆಯುವಾಗ, ನಾಗರಾಜನ ಮಾತುಗಳಲ್ಲಿ ಹುರುಳಿಲ್ಲವೆಂದು ಆತನಿಗೆ ತೋರಿ ಬಂದಿತು.

"ನಾಗರಾಜ, ನಿನ್ನ ಮಾತುಗಳನ್ನು ಕೇಳುವಾಗ ಅತ್ಯಂತ ಆಶ್ಚರ್ಯವಾಗುತ್ತಿರುವದು. ಕುಂತಳದ ಅಭ್ಯುನ್ನತಿಗಾಗಿ ನಿರಂತರ ದುಡಿಯುತ್ತಿರುವ

ದುಷ್ಟಬುದ್ಧಿಯು ಸಿಂಹಾಸನವನ್ನು ಅಡಿಮೇಲು ಮಾಡಲು ಯತ್ನಿಸುತ್ತಿರುವನೆಂಬ ಮಾತುಗಳನ್ನು ಹೇಗೆ ನಂಬಲಿ?''

''ನನ್ನ ಮಾತುಗಳನ್ನು ನಂಬುವದು-ಬಿಡುವದು ಮಹಾರಾಜರ ಇಷ್ಟವಾಗಿದೆ. ನನಗೆ ತಿಳಿದಿರುವ ಸಂಗತಿಗಳನ್ನು ನಾನು ಅರುಹಿದೆನು. ರಾಜನಂದಿನಿಯ ಅಪಹರಣೆಯ ರಹಸ್ಯವನ್ನು ತಾವು ಅರಿತಿಲ್ಲವೆಂದು ತೋರುತ್ತದೆ.''

''ಚಂಪೆಯನ್ನು ಅಪಹರಿಸಿದ ದುಷ್ಟರು ಕಾರಾಗೃಹದಲ್ಲಿ ನರಳುತ್ತಿರುವರಷ್ಟೆ? ಅವರಲ್ಲದೆ ಇನ್ನಾರು ಅಪಹರಿಸಿದುದು?''

'ಆ ಘಾತುಕರು ಇನ್ನೊಂದು ವ್ಯಕ್ತಿಯ ಹಸ್ತಕರು ಮಾತ್ರವಾಗಿದ್ದಾರೆ!'

''ಆ ವ್ಯಕ್ತಿಯು ಯಾರು?"

''ಸನ್ಮಾನ್ಯ ರಾಜನಿಷ್ಠ ರಾಜ್ಯತಂತ್ರಜ್ಞನಾದ ದುಷ್ಟಬುದ್ಧಿಯ ಮಗನು!''

''ಯಾರು? ಮದನಕುಮಾರನೆ?''

''ಹೌದು.''

''ಏಕೆ ಅಪಹರಿಸಿದನು? ಕಾರಣವೇನು? ಇವೆಲ್ಲವೂ ನನಗೆ ಅದ್ಭುತಗಳಾಗಿ ತೋರುತ್ತಲಿವೆ!''

''ತಮಗೆ ಅದ್ಭುತವಾಗಿ ತೋರುತ್ತಿರಬಹುದು; ಆದರೆ ನಾನು ನುಡಿಯುತ್ತಿರುವದು ವಾಸ್ತವ ಸಂಗತಿಯಾಗಿದೆ ಮದನಕುಮಾರನು ರಾಜನಂದಿನಿಯೊಡನೆ ಪ್ರಣಯಭಿಕ್ಷೆಯನ್ನು ಯಾಚಿಸಿದನು. ಆ ಯಾಚನೆಯು ಫಲಕಾರಿಯಾಗದಿರಲು, ಆತನು ರಾಜನಂದಿನಿಯನ್ನು ಅಪಹರಿಸುವ ಕಾರಸ್ಥಾನದಲ್ಲಿ ಉದ್ಯುಕ್ತನಾದನು!''

''ಅವನು ಪ್ರಣಯಭಿಕ್ಷೆಯನ್ನು ಯಾಚಿಸಿ ಪರಾಜಯವನ್ನು ಹೊಂದಲು, ಈ ಭಯಂಕರ ಕೃತ್ಯದಲ್ಲಿ ಉದ್ಯುಕ್ತನಾದನೆಂದು ನೀನು ನುಡಿಯುತ್ತಿರುವೆಯಾ?''

''ಹೌದು, ಹೌದು; ರಾಜನಂದಿನಿಯನ್ನು ಪ್ರಶ್ನಿಸಿದರೆ, ಆ ಯಥಾರ್ಥ ಸಂಗತಿಯನ್ನು ತಾವು ತಿಳಿದುಕೊಳ್ಳಬಹುದು.''

ನಾಗರಾಜನ ವಚನಗಳು ಶಾಂತಶೀಲನನ್ನು ಸ್ತಂಭಿತನನ್ನಾಗಿ ಮಾಡಿದುವು. ಚಂಪೆಯ ಅಪಹರಣೆಯಲ್ಲಿ ಮದನನ ಕೈಯಿರುವದೆಂದ ಮೇಲೆ ಅವನನ್ನು ನಂಬುವದು ಹೇಗೆ? ಸಿಂಹಾಸನವನ್ನೇ ಅಡಿಮೇಲು ಮಾಡಲು ತನ್ನ ನಂಬಿಗೆಗೆ ಪಾತ್ರರಾದ ದುಷ್ಟಬುದ್ಧಿಯೂ ಅವನ ಮಗನೂ ಯತ್ನಿಸಿದರೆ ತನ್ನ ಗತಿಯೇನು? ನಾಗರಾಜನ ಮುಖವು ಅವನು ಆಡುತ್ತಿರುವದು ಸತ್ಯವನ್ನಾಗಿದೆ, ಎಂಬುದನ್ನು ಸೂಚಿಸುತ್ತಲಿದ್ದಿತು. ತನ್ನ ಮಗಳನ್ನು ದುಷ್ಟರ

ಕರಗಳಿಂದ ಸಲುಹಿದ ಚಂದ್ರಹಾಸನ ಆಪ್ತಮಿತ್ರನಿಗೆ ಯಾವ ದುರುದ್ದೇಶವೂ ಇಲ್ಲವೆಂಬುದನ್ನು ಇವನ ನಿಷ್ಕಲಂಕವಾದ ಮುಖವೇ ನುಡಿಯುತ್ತಿರುವುದು. ಮದನನೊಡನೆ ನಾಗರಾಜನು ಮತ್ಸರಿಸಲು ಕಾರಣವಿಲ್ಲ ನಾಗರಾಜನು ಹೇಳಿದ ಮಾತುಗಳಲ್ಲಿ ಸ್ವಲ್ಪವಾದರೂ ಸತ್ಯಾಂಶವಿದ್ದೇ ಇರಬೇಕು. ಈ ರೀತಿಯ ಹಲವು ವಿಚಾರತರಂಗಗಳ ಹಾವಳಿಯಿಂದ ಕುಂತಳೇಂದ್ರನ ಪ್ರಶಾಂತವಾಗಿದ್ದ ಮನಸ್ಸು ಕ್ಷುಬ್ಧಭಾವವನ್ನು ಹೊಂದಿತು.

ಭೃತ್ಯನೊಬ್ಬನನ್ನು ಕರೆದು ರಾಜನಂದಿನಿಯನ್ನು ಒಡನೆಯೇ ತನ್ನ ವಸತಿಗೆ ಕರೆದುತರಬೇಕೆಂದು ಅರಸನು ಆಜ್ಞಾಪಿಸಿದನು. ಅರಸನ ಆದೇಶವನ್ನು ನೆರವೇರಿಸಲು ಭೃತ್ಯನು ತೆರಳಿದನು.

ರಾಜನಂದಿನಿಯು ಬಂದಳು; ಅವಳನ್ನು ಹಿಂಬಾಲಿಸುತ್ತ ಚಂದ್ರಹಾಸನೂ ಬಂದನು. ತಂದೆಯ ಉದ್ರೇಕ ಮುಖಭಾವವನ್ನು ಕಂಡು ಚಂಪಕಮಾಲಿನಿಯು ಆಶ್ಚರ್ಯ, ಭಯ, ಪರಿಭ್ರಮಯುಕ್ತಳಾದಳು. ಯಾವುದೋ ಒಂದು ಪ್ರಬಲಕಾರಣವಿಲ್ಲದೆ ತಂದೆಯು ಈ ವಿಚಿತ್ರ ಅವತಾರವನ್ನು ಕೈಗೊಂಡಿರಲಾರನೆಂದು ಆ ಹುಡುಗಿಯು ಊಹಿಸಿದಳು.

"ಮಗು, ಚಂಪಾ!"

"ಏಕಪ್ಪಾ?"

"ಅಮಾತ್ಯನಂದನನು ನಿನ್ನೊಡನೆ ಪ್ರಣಯಭಿಕ್ಷೆಯನ್ನು ಯಾಚಿಸಿದನೇ?"

ಈ ಪ್ರಶ್ನೆಯನ್ನು ಕೇಳುತ್ತಲೆ ಚಂಪಕಮಾಲಿನಿಯ ಹೃದಯದಲ್ಲಿ ಲಜ್ಜೆಯು ಸಂಜಾತವಾಯಿತು; ಭಯವು ಅವಳನ್ನು ಪೀಡಿಸಿತು; ನಾಚಿಕೆಯಿಂದ ಶಿರವು ಬಗ್ಗಿಹೋಯಿತು.

"ಚಂಪೇ! ಮಂತ್ರೀಕುಮಾರನು ನಿನ್ನೊಡನೆ ಪ್ರಣಯಭಿಕ್ಷೆಯನ್ನು ಯಾಚಿಸಿದನೇ?" ಈ ಬಾರಿ ತೀಕ್ಷ್ಣವಾದ ಸ್ವರದಲ್ಲಿ ಅರಸನು ಪ್ರಶ್ನಿಸಿದನು.

"ಹೂಂ" ಎಂಬ ಸ್ವರವನ್ನು ಮಾತ್ರ ಅರಸುಮಗಳು ಹೊರಚೆಲ್ಲಿದಳು.

"ಆತನಿಗೆ ನೀನೆಂದು ಹೇಳಿದೆ?"

"ಅವನ ಯಾಚನೆಯನ್ನು ತಿರಸ್ಕರಿಸಿದೆನು."

"ಅದು ಯಾವಾಗ?"

"ನನಗೆ ವಿಪತ್ತು ಬಂದೊದಗುವದಕ್ಕೆ ಮೂರು ದಿನಗಳ ಮುಂಚೆ."

ದೀರ್ಘವಾದ ಒಂದು ನಿಟ್ಟುಸುರನ್ನು ಬಿಟ್ಟನು ಅರಸನು. ಅದರಲ್ಲಿ ಶೋಕ ಮತ್ತು ಪರಿತಾಪ ಇವುಗಳೆರಡೂ ತುಂಬಿದ್ದುವು. ನಾಗರಾಜನ

ನಿರ್ಧಾರವು ಸರಿಯಾದುದೆಂಬುದು ಅವನಿಗೆ ಮನದಟ್ಟಾಯಿತು. ಅವನ ಈ ಊಹೆಯು ಸರಿಯಾಗಿರುವಾಗ ಇತರ ಸಂಗತಿಗಳು ಅವಾಸ್ತವವಾಗಿರಲಾರವೆಂದೂ, ತನ್ನ ಮಗಳನ್ನು ಅಪಹರಿಸಲು ಯತ್ನಿಸಿದ ನೀಚನು ಸಿಂಹಾಸನವನ್ನು ಅಡಿಮೇಲು ಮಾಡಲು ಹಿಂಜರಿಯುವನೇ ಎಂದೂ ಅರಸನು ಮನಸ್ಸಿನಲ್ಲಿಯೇ ಚಿಂತಿಸಿದನು

"ನಾಗರಾಜ, ಈ ಸಂಗತಿಯನ್ನು ಹೇಗೆ ಅರಿತೆ?"

"ಒಂದು ಚಿಕ್ಕ ಸಂಗತಿಯನ್ನು ಕುರಿತು ಚಿಂತಿಸಿ, ಅದರ ಮೂಲವನ್ನು ಹುಡಿಕಿದುದರಿಂದ ಈ ರಹಸ್ಯಗಳು ಸಿಕ್ಕಿದುವು; ಚಂದ್ರಹಾಸನಿಗೆ ಬರೆದವರ ಹೆಸರಿಲ್ಲದ ಒಂದು ಓಲೆಯು ಬಂದಿದೆ ಅದು ಒಬ್ಬ ಹೆಂಗಸಿನ ಹಸ್ತಾಕ್ಷರವಾಗಿ ನನಗೆ ಕಂಡು ಬಂದಿತು ಅವನಿಗೆ ಕೆಲವು ಮಂದಿ ಶತ್ರುಗಳಿಂದ ವಿಪತ್ತು ಬಂದೊದಗಬಹುದೆಂಬ ಸೂಚನೆಯು ಆ ಓಲೆಯಲ್ಲಿರುವದು"

"ನಿನ್ನ ಬಳಿಯಲ್ಲಿ ಆ ಓಲೆಯಿರುವುದೇ?" ಎಂದು ಅರಸನು ಚಂದ್ರಹಾಸನನ್ನು ಪ್ರಶ್ನಿಸಿದನು.

"ಅಹುದು" ಎಂದು ಹೇಳಿ ಕುಳಿಂದಕುಮಾರನು ಓಲೆಯನ್ನು ಅರಸನ ಕೈಗೆ ನೀಡಿದನು. ಅರಸನು ಆ ಪತ್ರದಲ್ಲಿರುವ ಸಂಗತಿಯನ್ನು ತಿಳಿದು ಆಶ್ಚರ್ಯಚಕಿತನಾದನು. ಆ ಓಲೆಯ ಹಸ್ತಾಕ್ಷರವನ್ನು ಕಾಣುತ್ತಲೆ ಅರಸು ಕುಮಾರಿಯು ಆಶ್ಚರ್ಯಭರಿತಳಾದಳು. 'ಇದು ಮಾಲಿನಿಯ ಹಸ್ತಾಕ್ಷರ!' ಎಂದಳವಳು.

"ಅವಳು ಯಾರು?" ಎಂದಂದು ನಾಗರಾಜನು: "ಅವಳು ಅವಿವಾಹಿತಳೆ?"

"ಅಲ್ಲ, ವಿವಾಹಿತಳು!"

"ಹಾಗಾದರೆ ನನ್ನ ಊಹೆಯು ಸ್ವಲ್ಪ ತಪ್ಪಿತು; ನಾನು ಈ ಪತ್ರದ ಲೇಖಕಿಯು ಅವಿವಾಹಿತಳೆಂದು ಬಗೆದಿದ್ದೆನು."

"ಅದನ್ನು ಹೇಗೆ ಊಹಿಸಿದೆ?" ಎಂದು ಅರಸನು ಪ್ರಶ್ನಿಸಿದನು.

"ಈ ಓಲೆಯು ಆ ತರುಣಿಗೆ ಚಂದ್ರಹಾಸನಲ್ಲಿರುವ ಪ್ರಣಯವನ್ನು ಸೂಚಿಸುತ್ತಿದೆ!"

"ಇದರಲ್ಲಿ ಅನುರಾಗವನ್ನು ಸೂಚಿಸುವ ಒಂದು ನುಡಿಯಾದರೂ ಇಲ್ಲ."

"ನಿನ್ನನ್ನು ರಕ್ಷಿಸಲು ಬದ್ಧಕಂಕಣವನ್ನು ಧರಿಸಿರುವೆನು" ಎಂಬ ವಾಕ್ಯವನ್ನು ಚೆನ್ನಾಗಿ ಪರಿಶೋಧಿಸಿದರೆ ಅದು ಹೊಳೆಯುವದು. ಚಂದ್ರಹಾಸ

ನಿಗೆ ಮುಂಬರುವ ವಿಪತ್ತುಗಳನ್ನೂ ಅವುಗಳನ್ನು ನಿವಾರಿಸಲು ಪ್ರಯತ್ನಿಸುವೆನೆಂದೂ ಸೂಚಿಸಬೇಕಾದರೆ, ಯಾವುದೋ ಒಂದು ಉದ್ದೇಶವು ಇದರ ಲೇಖಕಿಗೆ ಇದ್ದೇ ಇರಬೇಕು. ತನಗೆ ಯಾವ ಸಂಬಂಧವೂ ಇಲ್ಲದ ಒಬ್ಬ ತರುಣನನ್ನು ರಕ್ಷಿಸಲು ಯಾವ ಹೆಂಗುಸೂ ಹೊರಡಲಾರಳು. ಅವಳನ್ನು ಈ ಕೆಲಸಕ್ಕೆ ಪ್ರೇರೇಪಿಸುವ ಶಕ್ತಿಯು ಅನುರಾಗವಲ್ಲದೆ ಬೇರೆ ಆಗಿರಲು ಅವಕಾಶವಿಲ್ಲ" ಎಂದು ನುಡಿದ ನಂತರ ನಾಗರಾಜನು ರಾಜನಂದಿನಿಯ ಕಡೆಗೆ ತಿರುಗಿ ಹೇಳಿದನು:-"ಈ ಮಾಲತಿಯ ಗೆಳತಿಯು ಯಾರೆಂಬುದನ್ನು ಬಲ್ಲಿರಾ?"

"ಒಬ್ಬಳು ನಾನು; ಇನ್ನೊಬ್ಬಳು ಅಮಾತ್ಯನಂದಿನಿ"

"ನಾನು ಊಹಿಸಿದುದು ವಾಸ್ತವವು; ವಿಷಯಾಕುಮಾರಿಯು ಮಾಲಿನಿಯಿಂದ ಆ ಪತ್ರವನ್ನು ಬರೆಸಿದಳು; ಚಂದ್ರಹಾಸನನ್ನು ವಧಿಸಲು ಯತ್ನಿಸುವ ವ್ಯಕ್ತಿಯು ಮದನನೇ ಆಗಿದ್ದಾನೆ."

"ಚಂದ್ರಹಾಸನನ್ನು ವಧಿಸಲು ಮದನನು ಉದ್ಯುಕ್ತನಾಗುವ ಕಾರಣವೇನು?" ಎಂದು ಕುಂತಳೇಂದ್ರನು ಪ್ರಶ್ನಿಸಿದನು.

"ರಾಜಕುಮಾರಿಯ ವಿಮೋಚನೆಗೆ ಕಾರಣಭೂತನು ಚಂದ್ರಹಾಸನಲ್ಲವೆ!"

ನಾಗರಾಜನ ಆದ್ಭುತಕರವಾದ ಬುದ್ಧಿಶಕ್ತಿಯನ್ನು ಕಂಡು ಕುಂತಳೇಂದ್ರನು ಆಶ್ಚರ್ಯಪರತಂತ್ರನಾಗಿ ಹೋದನು. ಇದು ಈ ತರುಣನ ಸಂಕಲ್ಪ ಸೃಷ್ಟಿಯಲ್ಲವೆಂದೂ ಊಹಾಪೋಹಗಳಿಂದೂ, ಒಂದು ಸಂಗತಿಯನ್ನು ಸೂಕ್ಷ್ಮವಾಗಿ ಸಮೂಲಾಗ್ರನಾಗಿ ಪರಿಶೋಧಿಸಿದ ನಂತರ ಬೆಳಕಿಗೆ ಬಂದ ಸತ್ಯ ಸಂಗತಿಯೆಂದೂ ಕುಂತಳೇಂದ್ರನು ನಂಬತೊಡಗಿದನು ನಾಗರಾಜನ ಮಾತುಗಳಿಂದ ತನಗಾದರೂ ಹಲವು ಆಪತ್ತುಗಳು ಸಂಭವಿಸಲು ಅವಕಾಶವಿದೆ, ಎಂದು ಕುಂತಳೇಂದ್ರನು ತಿಳಿದುಕೊಂಡನು.

"ಹಾಗಾದರೆ ನನಗೆ ಬಂದೊದಗಬಹುದಾದ ವಿಪತ್ತುಗಳನ್ನು ನಿವಾರಿಸುವ ಬಗೆ ಹೇಗೆ ನಾಗರಾಜ?"

"ರಾಜಕಾರಣದಲ್ಲಿ ಹೆಚ್ಚಿನ ಶ್ರದ್ಧೆಯನ್ನು ವಹಿಸಿ, ದುಷ್ಟಬುದ್ಧಿಯ ಸ್ವತಂತ್ರ ವರ್ತನೆಗಳನ್ನು ಕಡಿಮೆ ಮಾಡುವುದು. ಪ್ರಜಾಗಣದ ಮಧ್ಯದಲ್ಲಿ ತಮ್ಮಗಳ ಕೀರ್ತಿಯು ಹೆಚ್ಚುವಂತೆ ಮಾಡುವುದು. ಇವುಗಳಿಂದ ದುಷ್ಟಬುದ್ಧಿಯ ಕರಗಳ ಬಲವು ಕ್ಷಯಿಸುವುದು. ಅವನ ಶಕ್ತಿಯು ಕ್ಷಯಿಸಿದರೆ, ಬಂದೊದಗಬಹುದಾದ ವಿಪತ್ತುಗಳ ತೀಕ್ಷ್ಣತೆಯೂ ಕಡಿಮೆಯಾಗುವದು.

ತಾವು ಜಾಗರೂಕರಾಗಿದ್ದು ಕಾರ್ಯಗಳನ್ನು ನಿರೀಕ್ಷಿಸಿ, ಬೇಕಾದ ಪ್ರತಿವಿಧಿಗಳನ್ನು ಕೈಗೊಳ್ಳತಕ್ಕದು."

ಅನಂತರ ಚಂದ್ರಹಾಸನೂ ನಾಗರಾಜನೂ ಅರಸನಿಗೆ ವಂದಿಸಿ ಬೀಳ್ಕೊಂಡರು

## ವಿಷಯಾಕುಮಾರಿಯ ವಿವಾಹಸಂಭ್ರಮ.

"ಅಣ್ಣಾ" ಎಂದು ಅಮಾತ್ಯನಂದಿನಿಯು ಕೂಗಿದಳು.

"ಏಕೆ ವಿಷಯಾ?"

"ನನ್ನನ್ನು ನೀವೆಲ್ಲರೂ ಆ ಮುದಿಹದ್ದಿಗೆ ಬಲಿಯನ್ನು ನೀಡಲು ಸನ್ನದ್ಧರಾಗಿರುವಿರಾ?"

"ಶಶಾಂಕಶೇಖರನು ಅಷ್ಟು ಮುದುಕನೇನೂ ಅಲ್ಲ. ರೂಪರಾಶಿಯನ್ನು ವಿಧಾತನು ಅತನಿಗೆ ನೀಡದಿದ್ದರೂ, ಅವನು ಗುಣಾಢ್ಯನೂ ಧನಾಢ್ಯನೂ ಆಗಿರುವನು. ಅವನ ಪತ್ನೀಪದವನ್ನು ಸ್ವೀಕರಿಸುವದರಿಂದ ನಿನ್ನ ಭಾವೀ ಜೀವನವು ಶೋಭಾಯಮಾನವಾಗುವದರಲ್ಲಿ ಸಂದೇಹವಿಲ್ಲ."

"ತೋಳನ ಬಾಯಿಗೆ ನನ್ನನ್ನು ಬಲಿಯಾಗಿ ನೀಡುವಿರಲ್ಲವೆ? ಶುಭಪ್ರದವಾದ ಕೆಲಸವು!"

"ಶಶಾಂಕನು ತೋಳನಲ್ಲ; ಅವನು ಮಧ್ಯಮವಯಸ್ಕನಾದ ಪುರುಷನು. ಅವನನ್ನು ಕುರಿತು ಇಷ್ಟು ನಿರಸನವನ್ನು ಕೈಗೊಳ್ಳುವದು ತಂದೆಯ ಹಂಚಿಕೆಗಳಿಗೆ ಬೂದಿಯನ್ನು ಎರಚುವ ಕೆಲಸವಾಗಿದೆ. ತಂದೆಯ ಮೇಲಿರುವ ಭಕ್ತಿ-ಬಹುಮಾನಗಳನ್ನು ಮಾನಿಸುವದಕ್ಕಾಗಿಯಾದರೂ ನೀನು ಈ ವಿವಾಹಕ್ಕೆ ಒಪ್ಪಬೇಕಾಗಿದೆ. ತಂದೆಯ ಮಾತುಗಳನ್ನು ಮನ್ನಿಸುವದು ನಮ್ಮ ಕರ್ತವ್ಯವಲ್ಲವೆ?"

"ನನ್ನ ಭಾವೀ ಜೀವನವನ್ನು ಅನಿಷ್ಟದಾಯಕ ಮಾರ್ಗದಲ್ಲಿ ದೂಡುವ ನಾನು ಕೃತ್ಯಕ್ಕೆ ಒಪ್ಪದಿದ್ದರೆ, ಅದರಿಂದ ನನಗೆ ತಂದೆಯವರಲ್ಲಿ ಭಕ್ತಿಯಿಲ್ಲವೆಂದು ಊಹಿಸುವುದು ತಿಳಿಗೇಡಿತನದ ಕೆಲಸವಾಗಿದೆ. ನಾನು ಪ್ರಬುದ್ಧಳಾದ ಹೆಂಗುಸು. ನನ್ನ ಭಾವೀಜೀವನವನ್ನು ರೂಪೀಕರಿಸಲಿರುವ ಸ್ವಾತಂತ್ರ್ಯವು ನನಗಿದೆ, ಎಂದು ನಾನು ನಂಬುತ್ತೇನೆ. ನನ್ನ ಇಷ್ಟಕ್ಕೆ ವಿಪರೀತವಾಗಿ ನಾನು ತಂದೆಯವರ ನುಡಿಯಂತೆ ವರ್ತಿಸುವುದಾದರೆ, ಅದು ನನ್ನ ಆತ್ಮದ ಮೇಲೆ ಕತ್ತಲೆಯ ಕೋಣೆಯನ್ನು ಕಟ್ಟುವ ಉದ್ಯಮವಾಗಿದೆ."

"ವಿಷಯೇ, ನಿನ್ನ ಈಗಲಿನ ಮಾತುಗಳು, ವಿಚಾರಗಳು ವಿಚಿತ್ರವಾದ ಬಣ್ಣಗಳನ್ನು ತಾಳುತ್ತಿರುವುದು ಸೋಜಿಗದ ಸಂಗತಿಯಾಗಿದೆ. ಇದುವರೆಗೆ ನಮ್ಮನ್ನು ಪೋಷಿಸಿ, ಲಾಲಿಸಿ, ವಿದ್ಯಾಭ್ಯಾಸವನ್ನು ನೀಡಿ, ನಮ್ಮನ್ನು ಪ್ರಬುದ್ಧರನ್ನಾಗಿ ಮಾಡಿದ ತಂದೆಗೆ ನಮ್ಮ ಭಾವೀ ಜೀವನವನ್ನು ರೂಪೀಕರಿಸುವುದರಲ್ಲಿ ಯಾವ ಅಧಿಕಾರವೂ, ನ್ಯಾಯವೂ ಇಲ್ಲವೆಂದೆನ್ನುವುದು ನ್ಯಾಯವೇ? ನಮ್ಮನ್ನು ಇದುವರೆಗೆ ಪ್ರೇಮದಿಂದ ಸಲಹಿದ ಜನಕನು ಎಂದಿಗಾದರೂ ನಮ್ಮ ಅಭ್ಯುನ್ನತಿಗೆ ವಿಪರೀತವಾಗಿ ವರ್ತಿಸುವನೇ?"

"ಅಣ್ಣಾ, ನಿನ್ನ ಮಾತುಗಳಲ್ಲಿ ಸತ್ಯಾಂಶವಿರಬಹುದು. ತಂದೆ-ತಾಯಿಗಳಿಗೆ ನಮ್ಮ ದಾರಿಯನ್ನು ನಿರ್ದೇಶಿಸಲು ಅಧಿಕಾರವಿದೆ, ಎಂಬುದು ವಾಸ್ತವವೇ! ಅಂದಮಾತ್ರಕ್ಕೆ ವಿಚಾರ ಶಕ್ತಿಯಿರುವ ಮಾನುಷಜೀವಿಯು ತಂದೆ-ತಾಯಿಗಳ ನುಡಿಗಳನ್ನು ಕುರಿತು ಯುಕ್ತಾಯುಕ್ತ ವಿವೇಚನೆಯನ್ನು ಮಾಡದೆ, ಮೇಕೆ ಮರಿಯಂತೆ ಅನುಸರಿಸುವದರಿಂದ ಅಭ್ಯುದಯವನ್ನು ಹೊಂದುವನು, ಎಂದು ನಾನು ನಂಬಿರುವದಿಲ್ಲ. ತನ್ನ ಬಯಕೆ, ತನ್ನ ದಾರಿ ಇವುಗಳನ್ನು ಕುರಿತು ಮಾನವನು ಅನ್ಯರಿಗಿಂತ ಹೆಚ್ಚಾಗಿ ತಿಳಿದಿರುವದರಿಂದ, ಅವನಭಿರುಚಿಗನುಸಾರವಾದ ಬದುಕನ್ನು ಅವನೇ ಸ್ವೀಕರಿಸುವದು ಒಳ್ಳೆಯದು. ಅವನ ಭಾವೀ ಬದುಕನ್ನು ಕುರಿತು ತಾಯಿತಂದೆಗಳು ಅವಶ್ಯವಿರುವ ನಿರ್ದೇಶಗಳನ್ನು ನೀಡಬಹುದು; ಆದರೆ ಅವರು ನಿರ್ದೇಶಿಸಿದ ದಾರಿಯನ್ನೇ ಅವನು ಹಿಡಿಯಬೇಕೆಂದು ನಿರ್ಬಂಧಿಸುವದು ಮಾತ್ರ ಅನುಚಿತವು. ಅದು ಅವನನ್ನು ಅಗಾಧಪತನದ ಕೂಪದಲ್ಲಿ ತಳ್ಳಬಹುದು."

"ತಂಗೀ, ತಾಯಿತಂದೆಗಳ ನಿರ್ದೇಶವು ಮಕ್ಕಳಿಗೆ ಅಹಿತವನ್ನು ಉಂಟು ಮಾಡುವುವೇ? ತಮಗಿಂತಲೂ ಹೆಚ್ಚಿಗೆ ಪ್ರೀತಿಸುತ್ತಿರುವ ಜೀವಿಗಳಿಗೆ ಅವರು ಹಾನಿಯನ್ನೆಂದೂ ಬಯಸಲಾರರು. ರಾಮಾಯಣದ ಕತೆಯನ್ನು ನೀನು ಅರಿತಿಲ್ಲವೆ? ಪಿತೃವಾಕ್ಯ ಪರಿಪಾಲನೆಗಾಗಿ ವನವಾಸವನ್ನು ಕೈಗೊಂಡ ಆ ಪುಣ್ಯಪುರುಷನ ಆ ಮಹತ್ಕೃತ್ಯವು ನಮ್ಮಂತಹರಿಗೆ ಮಾರ್ಗದರ್ಶಕವಾಗಿರುವದಿಲ್ಲವೇ?"

"ಇಂದು ದ್ವಾರಕೆಯಲ್ಲಿ ವಿರಾಜಿಸುತ್ತಿರುವ ಶ್ರೀಕೃಷ್ಣನು ಭಗವಂತನ ಅವತಾರವೆಂದಲ್ಲವೆ ಜನರು ನುಡಿಯುತ್ತಿರುವುದು? ಆ ಮಹಾತ್ಮನ ತಂಗಿಯಾದ ಸುಭದ್ರೆಯು ತನ್ನ ಅಣ್ಣಂದಿರ ಇಷ್ಟಕ್ಕೆ ವಿಪರೀತವಾಗಿ ಅರ್ಜುನನನ್ನು ವರಿಸಿದ ವರ್ತಮಾನವನ್ನು ನೀನು ಅರಿತಿರುವದಿಲ್ಲವೆ? ವಿವಾಹದಂಥ ಒಂದು ಭಾವೀ ಬದುಕನ್ನು ಸಂಬಂಧಿಸಿದ ಕಾರ್ಯಗಳಲ್ಲಿ ಪೂರ್ಣ ಸ್ವಾತಂತ್ರ್ಯ

ವನ್ನು ಅವಲಂಬಿಸಿ, ತಮಗಭಿರುಚಿಯುಳ್ಳ ಗಂಡಂದಿರನ್ನು ಆರಿಸುವ ಅಧಿಕಾರವು ಹೆಂಗಸರಿಗೆ ಇದೆ, ಎಂಬುದಕ್ಕೆ ಅದೊಂದು ನಿದರ್ಶನವು ಸಾಲದೆ? ಸ್ವಯಂವರ ಪದ್ಧತಿಯು ಹೆಂಗಸರಿಗೆ ತಮ್ಮ ಪತಿಗಳನ್ನು ಆರಿಸುವ ಅಧಿಕಾರವಿದೆ, ಎಂಬುದನ್ನು ಸೂಚಿಸುತ್ತಲಿದೆ. ನಾನು ಮನಸಾ ಒಬ್ಬ ಪತಿಯನ್ನು ಆರಿಸಿ, ಅವನ ಬಿಂಬವನ್ನು ಸದಾ ಹೃದಯದಲ್ಲಿ ಆರಾಧಿಸುತ್ತಲಿರುವೆನು. ಈ ರೀತಿ ಮನಸಾ ವರಿಸಿದ ಪತಿಯನ್ನು ತ್ಯಜಿಸಿ, ಬೇರೊಬ್ಬನ ಕೈಯನ್ನು ಹಿಡಿಯಲು ನಾನು ಪ್ರಯತ್ನಿಸಿದರೆ, ನನ್ನ ಸತೀತ್ವಕ್ಕೆ ಲೋಪಬರುವುದಿಲ್ಲವೆ?"

"ವಿಷಯಾ, ನೀನು ಯಾರನ್ನು ಪತಿಯಾಗಿ ಸ್ವೀಕರಿಸಲು ಬಯಸುತ್ತಿರುವೆ?" ಎಂದು ಮದನಕುಮಾರನು ಆಶ್ಚರ್ಯಚಕಿತನಾಗಿ ಪ್ರಶ್ನಿಸಿದನು

ಅವನ ಪಾವನವಾದ ಹೆಸರನ್ನು ಹೇಳಲು ನಾನು ಬಯಸುವದಿಲ್ಲ ಅವನನ್ನು ನನ್ನ ಪತಿಯಾಗಿ ಸ್ವೀಕರಿಸಲು ಸಾಧ್ಯವಾಗದಿದ್ದರೆ, ಆಜೀವ ಪರ್ಯಂತ ಬ್ರಹ್ಮಚಾರಿಣಿಯಾಗಿ ಜೀವಿಸುವೆನು. ಅವನೇ ನನ್ನ ಭಾಗ್ಯದ ಚಿತ್ರಭಾನು! ಆ ದಿವ್ಯಾತ್ಮನ ಚರಣ ಕಮಲಗಳಲ್ಲಿ ಈ ದೇಹವನ್ನು ಅರ್ಪಿಸಿರುವೆನು. ನನ್ನನ್ನು ಸ್ವೀಕರಿಸುವ ಅಥವಾ ತ್ಯಜಿಸುವ ಭಾರ ಅವನದು."

"ಕುಮಾರಿ! ಹಾಗಾದರೆ ತಂದೆಯವರ ನಿರ್ಧಾರ?"

"ಜಲಮಧ್ಯ ಯಜ್ಞವಾಗಲಿ! ಆ ಮುದಿಹದ್ದಿನ ಸಹಧರ್ಮಿಣಿಯಾಗಿ ಜೀವಿಸುವದೇ? ತಂದೆಯವರು ಧನದ ಲೋಭದಿಂದ ಆ ತೋಳನಿಗೆ ನನ್ನನ್ನು ಬಲಿನೀಡಲು ಸನ್ನದ್ಧರಿರುವ ಹಾಗೆ ತೋರುತ್ತದೆ; ಆದರೆ ಆ ಹೀನವಾದ ಜೀವನವನ್ನು ನಾನು ಕೈಗೊಳ್ಳಲಾರೆನು"

"ವಿಷಯಾ, ನೀನೀ ರೀತಿ ಭ್ರಮಿಷ್ಟಳಾಗಿ, ಹುಚ್ಚಳಂತೆ ವರ್ತಿಸಬೇಡ; ಪಿತೃನಿಂದನೆಯು ಮಹಾ ಪಾತಕವಾಗಿದೆ. ಅದರಿಂದ ನಿನಗೆ ಶ್ರೇಯಸ್ಸು ಲಭಿಸಲಾರದು."

ಈ ಸಂವಾದವು ವಿಷಯಾಕುಮಾರಿ, ಮದನ ಇವರ ಮಧ್ಯೆ ನಡೆದಿತು. ಶಶಾಂಕಶೇಖರನಿಗೆ ತನ್ನ ಮಗಳನ್ನು ನೀಡಲು ಅಮಾತ್ಯನು ಒಪ್ಪಿಕೊಂಡ ಸಂಗತಿಯನ್ನು ವಾಚಕರು ಕಳೆದ ಪರಿಚ್ಛೇದಗಳಿಂದ ತಿಳಿದುಕೊಂಡಿರಬಹುದು. ದುಷ್ಟಬುದ್ಧಿಯು ತನ್ನ ವಚನವನ್ನು ನೆರವೇರಿಸುವದಕ್ಕಾಗಿ, ವಿವಾಹಕ್ಕೆ ಬೇಕಾದ ಸನ್ನದ್ಧತೆಗಳನ್ನು ಒದಗಿಸತೊಡಗಿದನು. ಧನ ಮತ್ತು ಸಿಂಹಾಸನಗಳ ಆಶೆಗೆ ಬಲಿಯಾದ ಅವನು, ತನ್ನ ಮಗಳ ಭಾವೀ ಜೀವನವನ್ನು ಕುರಿತು ತಿಲಾಂಶದಷ್ಟಾದರೂ ಚಿಂತಿಸಲಿಲ್ಲ. ತನ್ನ ಕುಮಾರಿಗೆ ಅಭ್ಯುದಯದಾಯಕವಾದ ದಾರಿಯನ್ನು ತೋರಿಸಿಕೊಡುವದು ತನ್ನ ಕರ್ತವ್ಯವೆಂಬುದು

ಅವನ ನೆನಪಿಗೆ ಬರಲಿಲ್ಲ. ವಿಷಯಾಕುಮಾರಿಯನ್ನು ಆ ಧನಿಕನಿಗೆ ಬಲಿಗೊಟ್ಟು ಧನವನ್ನು ಗಳಿಸುವ ಕೆಲಸವನ್ನು ಸಾಧಿಸುವಾಗ ಅವನ ಹೃದಯದಲ್ಲಿ ಒಂದು ತೊಟ್ಟಾದರೂ ಮಮತೆಯು ಉಳಿಯಲಿಲ್ಲ. ಅವಳೂ ಒಬ್ಬ ಜೀವಿ; ತನ್ನ ವರ್ತನೆಯು ಅವಳನ್ನು ಶೋಕಸಾಗರದಲ್ಲಿ ಕೆಡುಹಬಹುದು, ಎಂಬ ವಿಚಾರವು ಅವನನ್ನು ತನ್ನ ನಿರ್ಧರವನ್ನು ವ್ಯತ್ಯಸಪಡಿಸುವಂತೆ ಪ್ರೇರೇಪಿಸಲಿಲ್ಲ.

ತನ್ನ ತಂದೆಯ ಈ ನಿರ್ಧರವನ್ನು ವೀಕ್ಷಿಸಿ, ವಿಷಯಾಕುಮಾರಿಯು ಅತ್ಯಂತ ಶೋಕಪರವಶಳಾದಳು. ವೃದ್ಧನೂ ಹೃದಯಶೂನ್ಯನೂ ಆದ ಶಶಾಂಕಶೇಖರನ ಅರ್ಧಾಂಗಿಯಾಗಿ ಜೀವಿಸುವುದರ ಬದಲು, ಆತ್ಮಹತ್ಯೆಯಿಂದ ಜೀವನದ ಯಾತ್ರೆಯನ್ನು ಸಮಾಪ್ತಿಗೊಳಿಸುವದುಚಿತವೆಂದು ಅವಳು ಬಗೆದಳು. ಅವಳ ಹೃದಯದಲ್ಲಿ ಚಂದ್ರಹಾಸನ ಮೋಹಕ ರೂಪವು ನಿಂತು ತಾಂಡವವಾಡುತ್ತಿತ್ತು. ಚಂದ್ರಹಾಸನನ್ನು ತನ್ನ ಪ್ರಣಯದೇವನನ್ನಾಗಿ ಸ್ವೀಕರಿಸಿ, ಅವನ ಸುಂದರ ವಿಗ್ರಹವನ್ನು ಅವಳು ನಿರಂತರ ಆರಾಧಿಸುತ್ತಲಿದ್ದಳು. ಅವನಿಲ್ಲದೆ ಹೋದರೆ ತನ್ನ ಬಾಳುವೆಯು ವ್ಯರ್ಥವೆಂದು ಅವಳು ಬಗೆದಳು. ಹೀಗೆ ಚಂದ್ರಹಾಸನಲ್ಲಿ ಅನುರಕ್ತಳಾದ ಅಮಾತ್ಯನಂದಿನಿಯ ಹೃದಯವು, ಶಶಾಂಕಶೇಖರನಿಗೆ ಅವಳನ್ನು ವಿವಾಹಮಾಡಿಕೊಡಬೇಕೆಂಬ ದುಷ್ಟಬುದ್ಧಿಯ ನಿರ್ಧರವನ್ನು ವೀಕ್ಷಿಸಿ ಎಷ್ಟರ ಮಟ್ಟಿಗೆ ಬೆಂದಿರಬಹುದೆಂಬುದನ್ನು ನಾನು ವಿವರಿಸುವದಕ್ಕಿಂತ ವಾಚಕರೇ ಊಹಿಸಿ ತಿಳಿದುಕೊಳ್ಳುವುದು ಮೇಲು.

ತನ್ನ ತಂದೆಯ ನಿರ್ಧರವನ್ನು ವಿಷಯಾಕುಮಾರಿಯು ತೀವ್ರವಾಗಿ ಎದುರಿಸಿದಳು. ಈ ಭೀಷಣ ವಿವಾಹಕ್ಕೆ ತನ್ನನ್ನು ಒಡಂಬಡಿಸಲು ಬಂದಿದ್ದ ತನ್ನ ಅಣ್ಣನೊಡನೆ ಅವಳು ತನ್ನ ಎದೆಯನ್ನು ಬಿಚ್ಚಿ ನುಡಿದಳು; ಆದರೆ ಅವಳ ಮಾತುಗಳನ್ನು ತಂದೆಯಾಗಲಿ, ಅಣ್ಣನಾಗಲಿ ಮನ್ನಿಸಲಿಲ್ಲವು, ಎಂದು ಮಾತ್ರವಲ್ಲ; ಅವಳು ಒಪ್ಪದಿದ್ದರೆ ಬಲಾತ್ಕಾರದಿಂದಲಾದರೂ ಅವಳನ್ನು ಶಶಾಂಕಶೇಖರನ ಕೊರಳಿಗೆ ಕಟ್ಟಬೇಕೆಂದು ಅವರಿಬ್ಬರೂ ನಿರ್ಧರಿಸಿದ್ದರು. ತನ್ನ ಭವಿಷ್ಯವನ್ನು ನಿರ್ಧರಿಸಲು ತನಗೆ ಅಧಿಕಾರವಿದೆ, ಎಂಬ ಅವಳ ವಾದವನ್ನು ಅವರು ಮನ್ನಿಸುವಂತಿರಲಿಲ್ಲ. ಏನು ಮಾಡುವಳು? ಅವಳು ಅಬಲೆ; ಸ್ವತಂತ್ರವಾಗಿ ವರ್ತಿಸಲು ಅವಳಿಗೆ ಚೈತನ್ಯವಿಲ್ಲ. ತನ್ನ ಮುಖವನ್ನು ಕಣ್ಣೀರಿನಿಂದ ಕ್ಷಾಲಿಸುವುದಲ್ಲದೆ, ಬೇರೆ ಯಾವುದಕ್ಕೂ ಅವಳಿಗೆ ನಿವೃತ್ತಿಯಿಲ್ಲ.

"ವಿಷಯಾ, ನೀನು ಒಪ್ಪದಿದ್ದರೆ ಬೇಡ; ನಿನ್ನ ವಿವಾಹವನ್ನು ನಾವು ಜರುಗಿಸುವೆವು. ಅದು ಹೇಗೆ ಜರುಗಿಸಬೇಕೆಂಬುದನ್ನು ನಾನೂ ಅಪ್ಪನೂ ತಿಳಿದಿರುವೆವು" ಎಂದು ಮದನನು ಸಿಟ್ಟಿನಿಂದ ನುಡಿದು ಹೊರಟು ಹೋದನು.

ವಿಷಯಾಕುಮಾರಿಯು ತನ್ನ ಕೋಣೆಯಲ್ಲಿ ಏಕಾಂಗಿಯಾಗಿ ಕುಳಿತು ಶೋಕವನ್ನು ತಡೆಯಲಾರದೆ ಅಳತೊಡಗಿದಳು. ರಕ್ಷಿಸುವವರು ಯಾರು? ಸಂತೈಸುವವರು ಯಾರು? ಯಾರೂ ಇಲ್ಲ. ತನ್ನ ಸುತ್ತಲೂ ಕತ್ತಲೆಯು ಕವಿದಂತೆ ಅವಳಿಗೆ ಭಾಸವಾಯಿತು.

.... ..........ಚಿಂತೆಯಲಿ ಮುಳುಗಿ-
ರುವಾ ಎದೆಯು ಸೂಸಿತು
ಸಿಟ್ಟುಸುರನೊಂದು ಶೋಕದಾ ರೂಸು ಮನದಿ
ಮೂಡಿತಾ ಹೂವಿನೊಳು
(ಪಶ್ಚಾತ್ತಾಪ)

ಎಂದು ಕವಿಯು ನುಡಿದಿರುತ್ತಿರುವ ಸ್ಥಿತಿಗೆ ತಲುಪಿದಳು ಅಮಾತ್ಯನಂದಿನಿಯು ಶೋಕದ ರೂಪವೇನೆಂಬುದನ್ನು ಅದುವರೆಗೂ ತಿಳಿದಿರಲಿಲ್ಲ; ಪ್ರಣಯದ ಆವಿರ್ಭಾವದೊಡನೆಯೇ ಶೋಕಪಿಶಾಚದ ಭಯಂಕರ ನೃತ್ಯವನ್ನು ಆ ಅಬಲೆಯು ವೀಕ್ಷಿಸಬೇಕಾಗಿ ಬಂದಿತು. ತನಗೆ ಒಂದು ಧೈರ್ಯದ ನುಡಿಯನ್ನು ಹೇಳುವ ಗೆಳತಿಯರಿಲ್ಲ; ತನ್ನ ಸಂಕಟದಲ್ಲಿ ಸಹತಾಪವನ್ನು ಸೂಚಿಸುವ ಕರುಣಾರ್ದ್ರ ಹೃದಯರಿಲ್ಲ. ಏಕಾಂಗಿನಿಯಾಗಿ ದುಃಖದ ಮಹಾಭಾರವನ್ನು ಆ ಅಬಲೆಯು ಹೊರಬೇಕಾಗಿ ಬಂದಿತು. ಮೌನದಲ್ಲಿ ತನ್ನ ಎದೆಯ ಮೇಲೆ ಬೀಳುತ್ತಿರುವ ಪ್ರಬಲ ತಾಪಗಳನ್ನು ಆ ವನಿತೆಯು ಸಹಿಸಬೇಕಾಗಿ ಬಂದಿತು. ಸುತ್ತಲೂ ಕತ್ತಲೆ! ಬೆಳಕಿಲ್ಲ. ಹೃದಯದ ಆರಾಧನಾಮೂರ್ತಿಯು ಎಷ್ಟೋ ಗಾವುದಗಳ ದೂರದಲ್ಲಿರುವನು. ಈ ಅಬಲೆಯನ್ನು ರಕ್ಷಿಸಲು ಆ ಧೀರನು ಎಂದಿಗಾದರೂ ಬರುವನೇ? ಇಲ್ಲ, ಎಂದಿಗೂ ಇಲ್ಲ. ಅತ್ಯಂತ ಭಕ್ತಿಯಲ್ಲಿ ಓರ್ವಳು ತನ್ನನ್ನು ಆರಾಧಿಸುತ್ತಿರುವಳೆಂಬ ಸಂಗತಿಯು ಸಹ ಅವನಿಗೆ ತಿಳಿಯದು.

ತನ್ನ ಕೋಣೆಯಲ್ಲಿ ಕುಳಿತು ಆ ಕಿಶೋರಿಯು ಬಿಕ್ಕಿ ಬಿಕ್ಕಿ ಅಳಲಾರಂಬಿಸಿದಳು. ತನ್ನ ಹತವಿಧಿಯನ್ನು ತಾನೇ ಶಪಿಸುತ್ತ ಅವಳು ಕುಳಿತುಕೊಂಡಳು. ಈ ಸಂದರ್ಭದಲ್ಲಿ ಅವಳ ಕೆಳದಿ ಮಾಲಿನಿಯು ಬಂದುದ್ದೂ ಅವಳಿಗೆ ತಿಳಿಯಲೇ ಇಲ್ಲ. ಮಾಲಿನಿಯು ಬಂದು: "ಅಮಾತ್ಯನಂದಿನಿ" ಎಂದು ನುಡಿದಳು; ಆದರೆ ವಿಷಯಾಕುಮಾರಿಯು ಮೌನವನ್ನವಲಂಬಿಸಿದ್ದ

ಳಲ್ಲದೆ ಮಾತಾಡಲಿಲ್ಲ. ಈ ವಿಚಿತ್ರ ವರ್ತನೆಯನ್ನು ಕಂಡು ಮಾಲಿನಿಯು ಕೋಣೆಯೊಳಗೆ ಪ್ರವೇಶಿಸಿ ತನ್ನ ಸಖಿಯ ಮುಖಮಂಡಲವನ್ನು ಅವಲೋಕಿಸಿದಳು. ವಿಷಯಾಕುಮಾರಿಯ ಕಣ್ಣುಗಳು ಕೆಂಪಾಗಿದ್ದುವು; ಮುಖವು ಮ್ಲಾನಭಾವವನ್ನು ತಾಳಿದ್ದಿತು. ನೇತ್ರಗಳಿಂದ ಬಾಷ್ಪಗಳು ಹೊರಸೂಸುತ್ತಲಿದ್ದವು. ಅಮಾತ್ಯನಂದಿನಿಯ ಈ ಅವಸ್ಥೆಯನ್ನು ಕಂಡು ಆಶ್ಚರ್ಯವಿಹ್ವಲಳಾಗಿ ಮಾಲಿನಿಯು: "ಅಮಾತ್ಯನಂದಿನಿ, ನೀನೇಕೆ ಅಳುತ್ತಿರುವೆ? ಯಾವ ಪ್ರಮಾದವು ಘಟಿಸಿತು?" ಎಂದಳು.

"ಮಾಲಿನಿ, ಸರ್ವನಿನಾಶದ ಬಾಗಿಲು ನನ್ನ ಜೀವನದಲ್ಲಿ ಈಗ ತೆರೆಯಲ್ಪಟ್ಟಿದೆ! ನನ್ನ ಬಾಳು ನನ್ನನ್ನೇ ನುಂಗುವುದಕ್ಕೆ ಯತ್ನಿಸುತ್ತಿದೆ!"

"ಇಷ್ಟು ಭಯಾನಕವಾದದ್ದೇನು? ನಿನಗೆ ಸಹಾಯವನ್ನು ನೀಡಲು ನಾನು ಸನ್ನದ್ಧನಾಗಿರುವೆನು. ನಿನ್ನ ಶೋಕದ ಕಾರಣವನ್ನು ಹೇಳು. ನಿನ್ನ ದುಃಖದ ಭಾರವನ್ನು ಕಡಿಮೆ ಮಾಡಲು ಪ್ರಯತ್ನಿಸುವೆನು."

"ಮಾಲಿನಿ" ತನ್ನ ಕಣ್ಣುಗಳನ್ನು ಒರಸಿಕೊಳ್ಳುತ್ತ ಅಮಾತ್ಯನಂದಿನಿಯು:—"ನನ್ನ ತಂದೆಯು-ನನ್ನನ್ನು ರಕ್ಷಿಸಿ, ಪೋಷಿಸಿದ ಜನಕನು-ನನ್ನನ್ನು ಒಂದು ಮುದಿಹದ್ದಿನ ಕೊರಳಿಗೆ ಕಟ್ಟಲು ಪ್ರಯತ್ನಿಸುತ್ತಿರುವನು ಈ ವಿಪತ್ತಿನಿಂದ ನಾನು ಪಾರಾಗುವ ಬಗೆ ಹೇಗೆ? ನಾನು ಯಾವನ ಬಿಂಬವನ್ನು ನನ್ನ ಹೃದಯದೇಗುಲದಲ್ಲಿ ಪ್ರತಿಷ್ಠಾಪಿಸಿರುವೆನೋ ಅವನ್ನು ನೀನು ಬಲ್ಲೆಯಷ್ಟೆ? ಆತನನ್ನು ನಾನು ನನ್ನ ಜೀವಿತೇಶ್ವರನನ್ನಾಗಿ ಸಂಕಲ್ಪಿಸಿರುವೆನು. ಪ್ರಾಣತ್ಯಾಗವನ್ನು ಮಾಡುವೆನಲ್ಲದೆ, ಅನ್ಯ ಪುರುಷರ ಕರಗಳನ್ನು ಹಿಡಿದು ಸತೀತ್ವಶೂನ್ಯಳಾಗಲಾರೆನು."

"ತಂಗೀ, ನಾನು ನಿನ್ನ ಗಂಡಾಂತರವನ್ನು ಕಂಡು ಪರಿತಪಿಸುತ್ತೇನೆ. ಹೃದಯವನ್ನು ತೆರೆದು ಎಲ್ಲವನ್ನೂ ಬಿಚ್ಚಿ ನಿನ್ನ ತಂದೆಯವರೊಡನೆ ಹೇಳಿದರೆ, ನಿನ್ನ ಅಭ್ಯುದಯಕಾಂಕ್ಷಿಗಳಾದ ಅವರು ತಮ್ಮ ನಿರ್ಧರವನ್ನು ವ್ಯತ್ಯಸಗೊಳಿಸಲಾರರೇ?"

"ಅಕ್ಕಾ, ಅವರು ತಮ್ಮ ಸ್ವಾರ್ಥಸಾಧನೆಗಾಗಿ ನನ್ನನ್ನು ಬಲಿನೀಡಲು ಸಂಕಲ್ಪಿಸಿದ್ದಾರೆ. ನಾನೆಷ್ಟು ದೈನ್ಯದಿಂದ ಬೇಡಿಕೊಂಡರೂ, ಅಣ್ಣನೊಡನೆ ಎಷ್ಟು ವಾದಿಸಿದರೂ ಪ್ರಯೋಜನವಾಗಲಿಲ್ಲ. ಇದಲ್ಲದೆ ಕುಳಿಂದವಂಶದ ಚಿತ್ರಭಾನುವನ್ನು ನನ್ನ ಹೃದಯೇಶ್ವರನನ್ನಾಗಿ ಸ್ವೀಕರಿಸುವೆನೆಂದರಿತರೆ...."

ಇಷ್ಟು ಹೇಳಿ ಅಮಾತ್ಯನಂದಿನಿಯು ತನ್ನ ಮಾತುಗಳನ್ನು ಅರ್ಧದಲ್ಲಿಯೇ ನಿಲ್ಲಿಸಿದಳು. ಅದೇಕೆಂಬುದು ಮಾಲಿನಿಗೆ ತಿಳಿಯಲಿಲ್ಲ. ಅವಳು

ಹೇಳಿದಳು:—"ಅಮಾತ್ಯನಂದಿನಿ, ಏಕೆ ನಿನ್ನ ಮಾತುಗಳನ್ನು ಅರ್ಧದಲ್ಲಿಯೇ ನಿಲ್ಲಿಸಿದೆ?"

"ಕುಳಿಂದ ಪ್ರಾಂತ್ಯದ ಭಾವೀ ಮಾಂಡಲಿಕನು ನನ್ನ ತಂದೆಯವರ ಶತ್ರು ವಾಗಿದ್ದಾನೆ. ತಾವು ಯಾವನನ್ನು ವಧಿಸುವುದಕ್ಕಾಗಿ ಚಿಂತಿಸುತ್ತಿರುವರೋ ನಾನು ಅವನನ್ನು ಮನಸಾ ವರಿಸಿರುವೆನೆಂಬುದನ್ನು ತಂದೆಯು ತಿಳಿದರೆ,—"

"ಆದುದರಿಂದಲ್ಲವೇ ಕುಳಿಂದ ರಾಜಪುತ್ರನಿಗೆ ನೀನು ನನ್ನಿಂದ ಕಾಗದ ವನ್ನು ಬರೆಯಿಸಿದುದು? ಆಗ ನನಗೆ ಕಾರಣವು ಹೊಳೆಯಲಿಲ್ಲ; ಈ ರೀತಿಯು ವಿಚಿತ್ರಕಾಗದದ ಉದ್ದೇಶವೇನೆಂದು ಆಶ್ಚರ್ಯಪಟ್ಟೆನು ಮಾತ್ರ. ಆ ಧೀರನಲ್ಲಿ ಶತ್ರುತೆಗೆ ಕಾರಣವು ಯಾವದು?"

"ನಾನು ಅರಿತವಳಲ್ಲ; ತಂದೆಯವರು ಅಣ್ಣನಿಗೆ ಬರೆದಿದ್ದ ಒಂದು ಕಾಗ ದದ ಮೂಲಕ ತಿಳಿದುಕೊಂಡೆನು. ಮಾಲಿನಿ, ಈ ವಿಪತ್ತಿನಿಂದ ನಿವಾರಣೆ ಯನ್ನು ಹೊಂದುವುದು ಹೇಗೆ?"

"ಇದು ಬಿಕ್ಕಟ್ಟಾದ ಪ್ರಸಂಗವೇ ಸರಿ; ಕುಳಿಂದದ ಭಾವೀ ಮಾಂಡ ಲಿಕನಿಗೆ ನೀನೇಕೆ ಓಲೆ ಬರೆದು ಕಳುಹಿಸಬಾರದು?"

"ಅದನ್ನು ಹೇಗೆ ಕಳುಹಲಿ? ನನ್ನ ಆರಾಧನೆಯನ್ನು ಅವನು ಸ್ವೀಕರಿ ಸುವನೆ?"

"ಒಂದು ವೇಳೆ ಅವನಿಗೆ ನಿನ್ನಲ್ಲಿ ಅನುರಾಗವಿಲ್ಲದಿದ್ದರೂ, ವಿಪತ್ತಿನಲ್ಲಿ ಬಿದ್ದಿರುವ ಒಬ್ಬಳು ಹೆಂಗುಸನ್ನು ರಕ್ಷಿಸುವುದು ತನ್ನ ಕರ್ತವ್ಯವೆಂದು ವಿಚಾ ರಿಸಿ, ಅವನು ಸಹಾಯವನ್ನು ನೀಡಲಾರನೆ? ಅಷ್ಟು ಉದಾರ ಹೃದಯವು ಆ ರಾಜಕುಮಾರನಿಗೆ ಇಲ್ಲವೆಂದು ಭಾವಿಸುತ್ತಿರುವೆಯಾ?"

"ಯಾರೊಡನೆ ಕಳುಹಲಿ! ನನಗೆ ನಂಬಿಕೆಯಿರುವವರು ಯಾರೂ ಇಲ್ಲ ವಲ್ಲಾ!"

"ಅದನ್ನು ಕುರಿತು ಚಿಂತಿಸಬೇಡ; ನೀನು ಒಂದು ಪತ್ರವನ್ನು ಬರೆ ದಿಡು; ಹತಾಶೆಯನ್ನು ಹೊಂದುವುದರಿಂದ ಯಾವ ಪ್ರಯೋಜನವೂ ಆಗ ಲಾರದು."

ಮಾಲಿನಿಯ ನಿರ್ದೇಶದಂತೆ ವಿಷಯೆಯು ಒಂದು ಓಲೆಯನ್ನು ತೆಗೆದು ಕೊಂಡು ಬರೆಯಲುಪಕ್ರಮಿಸಿದಳು; ಆದರೆ ಅವಳ ಉದ್ಯಮವು ಸಫಲವಾಗ ಲಿಲ್ಲ. ಒಬ್ಬ ಪುರುಷನಿಗೆ ಅವಳು ಓಲೆ ಬರೆದುದು ಇದೇ ಪ್ರಥಮ ಬಾರಿ ಯಾಗಿದ್ದಿತು. ಎಷ್ಟು ಪ್ರಯತ್ನಿಸಿದರೂ ಒಂದು ಶಬ್ದವನ್ನು ಸಹ ಬರೆಯಲು ಅವಳು ಸಮರ್ಥಳಾಗಲಿಲ್ಲ ಅವಳ ಬೆರಳುಗಳು ನಡುಗಿದುವು!

"ಅಮಾತ್ಯನಂದಿನಿ, ಓಲೆಯನ್ನು ಬರೆದೆಯಾ?" ಎಂದಳು ಮಾಲಿನಿ.

"ಇಲ್ಲ; ಮಾಲಿನಿ, ನನ್ನ ಬೆರಳುಗಳು ಕಂಪಿಸುತ್ತಲಿವೆ"

"ಛೂ! ಒಂದು ಪ್ರಣಯ ಲೇಖವನ್ನು ಸಹಾ ಬರೆಯಲು ಸಾಮರ್ಥ್ಯ ವಿಲ್ಲದೆ ಹೋದ ನೀನು ಚಂದ್ರಹಾಸನ ಹೃದಯವನ್ನು ಗೆಲ್ಲಲು ಹೇಗೆ ಶಕ್ತ ಳಾಗುವೆ?" ಎಂದು ಅಮಾತ್ಯನಂದಿನಿಯ ಕಪೋಲದ ಮೇಲೆ ಮೃದುವಾದ ತಾಡನವನ್ನು ನೀಡುತ್ತಾ ಮಾಲಿನಿಯು ಪ್ರಶ್ನಿಸಿದಳು.

ಅಮಾತ್ಯನಂದಿನಿಯು ಮೌನವನ್ನವಲಂಬಿಸಿದಳು. ಲಜ್ಜೆಯಿಂದ ಮೊಗವು ನಸುಗೆಂಪು ಬಣ್ಣವನ್ನು ತಾಳಿತು. ಮಾಲಿನಿಯು ವಿಷಯೆಯ ಕರದಿಂದ ಓಲೆಯನ್ನು ಕಸಿದುಕೊಂಡು:—"ನಿನಗೆ ಪತ್ರಬರೆಯಲು ತಿಳಿಯ ದಿದ್ದರೆ ನಾನು ಕಲಿಸಿಕೊಡುವೆನು" ಎಂದಳು.

ಮಾಲಿನಿಯು ಓಲೆಯನ್ನು ತೆಗೆದುಕೊಂಡು ಪತ್ರವನ್ನು ಬರೆಯ ಲಾರಂಭಿಸಿದಳು; ಈ ಪ್ರಯತ್ನವು ಎಷ್ಟರ ಮಟ್ಟಿಗೆ ಫಲಕಾರಿಯಾಗುವು ದೆಂಬುದನ್ನು ಅಮಾತ್ಯನಂದಿನಿಯು ಬಲ್ಲವಳಲ್ಲ. ನೀರಿನಲ್ಲಿ ಮುಳುಗು ವವನು ಕೈಗೆ ಸಿಕ್ಕಿದ ತೃಣವನ್ನು ಸಹ ಭದ್ರವಾಗಿ ಹಿಡಿಯುತ್ತಾನೆ. ಅದ ರಂತೆ ಆಗಿತ್ತು ವಿಷಯಾಕುಮಾರಿಯ ಸ್ಥಿತಿಯು! ಅವಳು ನಿರಾಶೆಯನ್ನು ಹೊಂದಿದ್ದಳು; ಈ ಯತ್ನವು ಭಗ್ನಮನೋರಥವೆಂದು ಆವಳು ಬಗೆದಿದ್ದಳು. ಈ ಪರಿಸ್ಥಿತಿಯಲ್ಲಿ ಮಾಲಿನಿಯ ಸಲಹೆಯು ಅಪಾರವಾದ ಆಶೆಯನ್ನು ಅವಳ ಹೃದಯದಲ್ಲಿ ಸಂಜಾತವಾಗುವಂತೆ ಮಾಡಿತು; ಅದು ಸ್ವಾಭಾವಿಕವಾದುದು. ಹೊಂಡದಲ್ಲಿ ಬಿದ್ದಿರುವ ಮನುಷ್ಯನು ತಾನು ಬಿದ್ದಿರುವ ಹಳ್ಳದಿಂದ ಮೇಲ ಕ್ಕೇಳಲು ಎಷ್ಟು ಕ್ಷುಲ್ಲಕವಾದ ಉಪಾಯಗಳು ಹೊಳೆದರೂ ಅವುಗಳನ್ನು ಅತ್ಯಂತ ಮಹತ್ತಾಗಿ ಎಣಿಸುವದು ಅವನ ಸ್ವಭಾವವಾಗಿದೆ.

ಕಾಗದವನ್ನು ಬರೆದು ಮಾಲಿನಿಯು ವಿಷಯಕುಮಾರಿಯ ಕೈಯಲ್ಲಿ ಕೊಟ್ಟಳು. ಅದು ಈ ಪ್ರಕಾರವಾಗಿದ್ದಿತು:

"ಕುಳಿಂದ ಕುಲಚಿತ್ರಭಾನು!

ಲಲನಾ ಸಹಜವಾದ ಲಜ್ಜೆಯು ಈ ಪತ್ರವನ್ನು ಬರೆಯಲು ನನ್ನನ್ನು ಸಮ್ಮತಿಸುವದಿಲ್ಲ; ಆದರೆ ನಿನ್ನನ್ನು ಶರಣುಹೊಂದುವುದರಿಂದ ಮಾತ್ರವಲ್ಲದೆ ಬೇರೆ ಮಾರ್ಗಗಳಿಂದ ನನ್ನ ಸಂಕಟಗಳು ನಿವಾರಣೆಯಾಗಲಾರವು ಎಂಬ ನಂಬಿಕೆಯಿರುವದರಿಂದ, ನಾನು ಆ ಲಜ್ಜೆಯನ್ನು ತೊರೆದು ಈ ಪತ್ರವನ್ನು ಉಲ್ಲೇಖಿಸಲು ಉದ್ಯುಕ್ತಳಾದೆನು.

ಅಂದು ನೀನು ಈ ಗೃಹಕ್ಕೆ ಬಂದಾಗ, ನಿನ್ನ ದರ್ಶನವನ್ನು ಪಡೆದ

ನಾನು ನಿನ್ನನ್ನು ನನ್ನ ಹೃದಯದೇಗಲುದ ಈಶ್ವರನನ್ನಾಗಿ ಸಂಕಲ್ಪಿಸಿರುವೆನು. ನಿರಂತರವೂ ನನ್ನ ಎದೆಯಲ್ಲಿ ನಿನ್ನ ಪಾವನದ ರೂಪವನ್ನು ಪೂಜಿಸುತ್ತಿರುವೆನು ನಿನ್ನ ಚರಣತಲಗಳಲ್ಲಿ ಈ ಪಾಮರಳ ದೇಹವನ್ನು ಮನಸಾ ನಿವೇದಿಸಿರುವೆನು. ಈ ದೀನಳ ಕರವನ್ನು ಹಿಡಿದು ರಕ್ಷಿಸಬೇಕೆಂಬುದೇ ನನ್ನ ಪ್ರಾರ್ಥನೆಯು!

ನನ್ನ ಅಭಿಮತಕ್ಕೆ ವಿರೋಧವಾಗಿ, ನನ್ನ ಜನಕನು ಈ ದಾಸಿಯನ್ನು ಬೇರೊಬ್ಬನಿಗೆ ವಿವಾಹ ಮಾಡಿಕೊಡುವದಕ್ಕೆ ಉದ್ಯುಕ್ತನಾಗಿರುವನು; ಆದರೆ ನಾನು ಮನಸಾ ನಿನ್ನನ್ನು ವರಿಸಿರುವುದರಿಂದ, ಈ ಪ್ರಯತ್ನವು ನನ್ನ ಸತೀತ್ವಕ್ಕೆ ಭಂಗವನ್ನು ತರುವುದು ಅಬಲೆಯಾದ ನಾನು ತಂದೆಯ ನಿರ್ಧಾರದೊಡನೆ ಯಾವ ರೀತಿ ಕಾದಾಡಲಿ? ನನ್ನ ಸತೀತ್ವವನ್ನು ಕಾಯಲು ನಿನ್ನೊಡನೆಯಲ್ಲದೆ ಇನ್ನಾರೊಡನೆ ಪ್ರಾರ್ಥಿಸಲಿ?

ನೀನು ಬಂದು ನನ್ನ ಶೀಲವನ್ನು ಕಾಯಬೇಕು; ಇದೇ ನನ್ನ ಪ್ರಾರ್ಥನೆಯು! ತಮ್ಮ ಚರಣಗಳ ದಾಸಿ, ವಿಷಯಾಕುಮಾರಿ"

"ಅಮಾತ್ಯನಂದಿನಿ, ಪತ್ರ ರಚನೆಯು ಹೇಗಿದೆ? ನಿನ್ನ ಪ್ರಣಯದೇವನಿಗೆ ನಿನ್ನ ಸಂಕಟವನ್ನರುಹಲು ಬರೆದ ಈ ಪತ್ರವು ಮನ ಒಪ್ಪಿತೇ?"

"ಮಾಲಿನೀ, ನೀನು ವಾಗ್ದೇವಿಯ ಅಪರಾವತಾರದಂತಿರುವೆ; ಇಷ್ಟು ಮೋಹಕವಾದ ಬಂಧನವು ಯಾರನ್ನೂ ಅದ್ಭುತ ಪರತಂತ್ರರನ್ನಾಗಿ ಮಾಡುವುದು!"

"ಸಾಕು ನಿನ್ನ ಪ್ರಶಂಸೆ! ಈ ಪತ್ರವು ನಿನಗೆ ಸರಿದೋರುವದೇ? ಇದರಿಂದ ನಿನ್ನ ಜೀವಿತೇಶ್ವರನು ಸಂತೃಪ್ತನಾಗಬಹುದೇ?"

"ಆತನು ನನ್ನ ಯಾಚನೆಯನ್ನು ಸ್ವೀಕರಿಸುವನೆಂಬ ಧೈರ್ಯವು ಕೂಡ ನನಗಿಲ್ಲ; ನಿನ್ನ ಮಾತನ್ನು ನಂಬಿ ಈ ಸಾಹಸ ಕಾರ್ಯದಲ್ಲಿ ಉದ್ಯುಕ್ತಳಾಗಿರುವೆನು."

"ಧೈರ್ಯವನ್ನು ತಾಳು; ಬರುತ್ತಿರುವ ವಿಪತ್ತುಗಳನ್ನು ಎದೆಗೊಟ್ಟು ಸಹಿಸಲು ನಿನಗೆ ತ್ರಾಣವಿಲ್ಲದಿದ್ದರೆ ಜೀವಿತದಲ್ಲಿ ವಿಜಯವು ಸಿಗಲಾರದು"

"ನಿನ್ನ ಮಾತುಗಳನ್ನು ಅವಲಂಬಿಸಿ ಧೈರ್ಯವನ್ನು ತಾಳಲಿಕ್ಕೆ ಪ್ರಯತ್ನಿಸುತ್ತಿರುವೆನು; ನೂರಾರು ಹರದಾರಿಗಳ ದೂರದ ರಣಾಂಗಣದಲ್ಲಿರುವ ಕುಳಿಂದಕುಲ ವಿಭಾವಸುವಿಗೆ ಈ ಪತ್ರವನ್ನು ತಲುಪಿಸುವದು ಹೇಗೆ?"

"ಅದನ್ನು ಕುರಿತು ನೀನು ಚಿಂತಿಸಬೇಡ; ಆ ಭಾರವನ್ನು ನಾನು ವಹಿಸಿರುವೆನು."

"ಮಾಲಿನೀ, ನೀನು ಯುದ್ಧರಂಗಕ್ಕೆ ತೆರಳಬೇಕೆಂದಿರುವೆಯಾ?"

"ಇಲ್ಲ, ನನ್ನ ವಿಶ್ವಸ್ತ ಭೃತ್ಯನಾದ ಹಯಗ್ರೀವನನ್ನು ಕಳುಹಿಸುವೆನು. ನೀನು ನಿನ್ನ ಪ್ರಣಯದೇವನಿಗೆ ಯಾವುದಾದರೂ ಒಂದು ಕಾಣಿಕೆಯನ್ನು ಕಳಹಿಸುವದುಚಿತವಲ್ಲವೇ?"

"ಯಾವುದನ್ನು ಕಳುಹಿಸಲಿ?" ಎಂದು ಲಜ್ಜೆಯಿಂದ ಮುಖವನ್ನು ತುಸು ಕೆಂಪು ಮಾಡಿಕೊಂಡು ಅಮಾತ್ಯನಂದಿನಿಯು ಪ್ರಶ್ನಿಸಿದಳು.

"ನಿನ್ನ ಮಂಜೂಷವನ್ನೇಕೆ ಕಳುಹಿಸಬಾರದು?"

ವಿಷಯಾಕುಮಾರಿಯು ತನ್ನ ಬೆರಳಿನಿಂದ ಉಂಗುರವನ್ನು ತೆಗೆಯಲು ಪ್ರಯತ್ನಿಸಿದಳು. ಅದು ಬಿಗುವಾಗಿದ್ದುದರಿಂದ ತೆಗೆಯಲು ಸಾಧ್ಯವಾಗಲಿಲ್ಲ. ಆಗ ಮಾಲಿನಿಯು ಅಮಾತ್ಯನಂದಿನಿಯ ಬೆರಳಿನಿಂದ ಆ ಅಂಗುಲೀಯವನ್ನು ತೆಗೆಯಲು ಉದ್ಯಮಿಸಿದಳು.

"ಅಮಾತ್ಯನಂದಿನಿ, ನಿನ್ನ ಶರೀರವೇಕೆ ಕಂಪಿಸುತ್ತಿದೆ?"

"ಏಕೋ, ತಿಳಿಯದು."

"ನಿನ್ನ ಜೀವಿತೇಶ್ವರನ ಸುಂದರಾಕಾರವನ್ನು ಧ್ಯಾನಿಸುತ್ತಿರುವದರಿಂದಾಗಿರಬಹುದು."

"ಸಾಕು, ನಿನ್ನ ಉಪಹಾಸ!" ಎಂದು ಅಮಾತ್ಯನಂದಿನಿಯು ತನ್ನ ಉಗುರುಗಳಿಂದ ಮಾಲಿನಿಯ ಕೈಗಳನ್ನು ಚುಚ್ಚುತ್ತ ನುಡಿದಳು.

"ಅಮಾತ್ಯನಂದಿನಿ, ನೀನೇಕೆ ಇಷ್ಟು ಲಜ್ಜೆಯನ್ನು ಹೊಂದಿರುವೆ?" ಎನ್ನುತ್ತ ಮಾಲಿನಿಯು ತನ್ನ ಗೆಳತಿಯ ಬೆರಳಿನಿಂದ ಉಂಗುರವನ್ನು ತೆಗೆದಳು. "ವಿಷಯಾಕುಮಾರಿ! ನೀನು ಇನ್ನು ನಿಶ್ಚಿಂತೆಯಿಂದಿರು; ಈಶ್ವರ ಕಟಾಕ್ಷದಿಂದ ಕಾರ್ಯವು ಸಫಲವಾಗುವದೆಂದು ನಂಬು!"

"ಮಾಲಿನಿ, ನಿನ್ನ ಮಾತುಗಳಲ್ಲಿ ಭರವಸೆಯನ್ನಿಡುತ್ತೇನೆ."

ಮಾಲಿನಿಯು ತನ್ನ ಗೆಳತಿಯ ಮಂಜೂಷವನ್ನು ತೆಗೆದುಕೊಂಡು ತನ್ನ ನಿಕೇತನಕ್ಕೆ ಗಮಿಸಿದಳು. ಈ ಪ್ರಯತ್ನವು ಎಷ್ಟರಮಟ್ಟಿಗೆ ವಿಜಯವಾಗಬಹುದೆಂದು ಅವಳು ಮನಸ್ಸಿನಲ್ಲಿಯೇ ಆಲೋಚಿಸುತ್ತಿದ್ದಳು. ಅಮಾತ್ಯನಂದಿನಿಯ ಪರಿಚಯವು ಸಹ ಇಲ್ಲದ ಚಂದ್ರಹಾಸನಿಗೆ ಈ ರೀತಿಯ ಒಂದು ಓಲೆಯನ್ನು ಬರೆದು ಕಳುಹಿಸುವುದು ಅತ್ಯಂತ ಸಾಹಸವಾದ ಕೆಲಸವೆಂಬುದು ಆಕೆಗೆ ತಿಳಿದಿದ್ದಿತು; ಆದರೆ ಅಂಥ ಸಾಹಸ ಕಾರ್ಯಗಳಲ್ಲಿ ಉದ್ಯುಕ್ತಳಾಗದೆ, ವಿಪತ್ತಿನಿಂದ ಪಾರಾಗಲು ಬೇರೊಂದು ಉಪಾಯವಿಲ್ಲವೆಂಬುದನ್ನು ಅವಳು ಅರಿತಿದ್ದಳು. ಮಾಲಿನಿಯು ಹೃತ್ಪೂರ್ವಕವಾಗಿ

ವಿಷಯಾಕುಮಾರಿಯನ್ನು ಪ್ರೀತಿಸುತ್ತಿದ್ದಳು. ಅಮಾತ್ಯನಂದಿನಿಯ ಶೋಕ ತಾಪಗಳು ತನ್ನವಾಗಿರುತ್ತವೆ, ಎಂದು ಅವಳು ಬಗೆದಿದ್ದಳು. ಈ ರೀತಿಯ ಹೃದಯದಲ್ಲಿ ಮಾಲಿನಿಯು ಸಚಿವಕುಮಾರಿಯನ್ನು ಬಂದೊದಗಿದ ವಿಪತ್ತಿನಿಂದ ರಕ್ಷಿಸಲು ಬದ್ಧಕಂಕಣವನ್ನು ಧರಿಸಿದುದರಲ್ಲಿ ಆತಿಶಯವೇನೂ ಇಲ್ಲ.

ಮಾಲಿನಿಯು ತನ್ನ ಸದನಕ್ಕೆ ಬಂದಳು. ತಾನು ನಿರ್ಧರಿಸಿದ ಕೆಲಸವನ್ನು ಅತ್ಯಂತ ವೇಗದಲ್ಲಿ ನೆರವೇರಿಸುವದಕ್ಕಾಗಿ ಅವಳು ತನ್ನ ವಿಶ್ವಸ್ತ ಭೃತ್ಯನನ್ನು "ಹಯಗ್ರೀವಾ!" ಎಂದು ಸಂಬೋಧಿಸಿದಳು.

"ಏನು ತಾಯಿ?" ಎಂದು ವಂದಿಸಿ, ಆ ಸೇವಕನು ಅವಳ ಮುಂದೆ ಬಂದು ನಿಂತನು.

"ನೀನೀಗಲೇ ರಣಾಂಗಣಕ್ಕೆ ತೆರಳಬೇಕಾಗಿದೆ!"

"ಸಮರಭೂಮಿಗೊ?" ಎಂದು ಕೌತುಕವನ್ನು ಬೀರುತ್ತಾ ಹೇಳಿದನು ಹಯಗ್ರೀವನು

"ಹೌದು; ಸ್ವಾಮಿಯವರಿಗೆ ಒಂದು ಪತ್ರ ತಲುಪಿಸಬೇಕಾಗಿದೆ!"

"ಅದೇನು ಅಷ್ಟು ಮಹತ್ತರವಾದುದೇ ತಾಯಿ?'

"ಅದನ್ನು ನೀನು ತಿಳಿಯಬೇಕಾದ ಆವಶ್ಯವಿಲ್ಲ; ನಾನು ಹೇಳಿದ ಕೆಲಸವನ್ನಷ್ಟು ನೆರವೇರಿಸಬೇಕು."

"ತಮ್ಮ ಮಾತುಗಳನ್ನು ಮೀರಿ ನಡೆಯುವವನು ನಾನಲ್ಲ."

"ಇಗೋ, ಈ ಎರಡು ಪತ್ರಗಳು; ಒಂದು ಉಂಗುರವೂ ಇದೆ ಅದನ್ನು ಕುಳಿಂದದ ಭಾವೀ ಮಾಂಡಲಿಕರಿಗೆ ತಲುಪಿಸಬೇಕು ಪ್ರಯಾಣಕ್ಕೆ ಆವಶ್ಯವಿರುವ ಹಣವನ್ನು ತೆಗೆದುಕೋ.'

"ಅಪ್ಪಣೆ ತಾಯಿ," ಎಂದು ಹೇಳಿ ಆ ಓಲೆಗಳನ್ನೂ, ಉಂಗುರವನ್ನೂ, ಮಾಲಿನಿಯು ಕೊಟ್ಟ ಹಣವನ್ನೂ ತೆಗೆದುಕೊಂಡು ಹಯಗ್ರೀವನು ತನಗೆ ಲಭಿಸಿದ ಅಜ್ಞೆಯನ್ನು ನೆರವೇರಿಸುವದಕ್ಕಾಗಿ ತೆರಳಿದನು.

೦ ೦ ೦ ೦

ಇತ್ತ ಶಶಾಂಕಶೇಖರ ಮಹಾಶಯನು ತನ್ನ ಮನಸ್ಸಿನಲ್ಲಿಯೇ ಮಂಡಿಗೆಯನ್ನು ತಿನ್ನುತ್ತಲಿದ್ದನು. ಅಮಾತ್ಯನಂದಿನಿಯು ಸೌಂದರ್ಯಶಾಲಿನಿಯು ಎಂಬುದನ್ನು ಅವನು ಕೇಳಿದ್ದನು. ಅಂಥ ಒಬ್ಬ ಲಲನೆಯು ತನಗೆ ಗೃಹಿಣಿಯಾಗಿ ಲಭಿಸುವಾಗ, ಹನ್ನೆರಡು ಲಕ್ಷ ಹೊನ್ನುಗಳನ್ನು ವ್ಯಯಗೊಳಿಸಿದುದರಲ್ಲಿ ನಷ್ಟವೇನೂ ಇಲ್ಲವೆಂದು ಅವನು ತನ್ನ ಮನಸ್ಸಿನಲ್ಲಿಯೇ ಸಂತೃಪ್ತಿಪಟ್ಟುಕೊಂಡನು. ತನ್ನನ್ನು ಪಿಶಾಚಸ್ವರೂಪನೆಂದು ಜನರು ಪರಿಹಾಸ ಮಾಡು

ವರು. ನಾನು ಅಮಾತ್ಯನಂದಿನಿಯುನ್ನು ವಿವಾಹವಾದ ನಂತರ ನಿಂತು ಹೋ-ಗುವುದೆಂದು ಅವನು ಬಗೆದನು. ತನ್ನ ಶೂನ್ಯವಾಗಿದ್ದ ಗೃಹವು ಅಮಾತ್ಯ ನಂದಿನಿಯ ಆಗಮನಾನಂತರ ಪೂರ್ಣತೆಯನ್ನು ಹೊಂದುವುದೆಂದು ಆ ವ್ಯಾಪಾರಿಯು ವಿಚಾರಿಸಿದನು.

ಶಂಶಾಂಕಶೇಖರನೊಡನೆ ವಿಷಯಾಕುಮಾರಿಯು ವಿವಾಹವು ಚೈತ್ರ ಮಾಸದಲ್ಲಿ ಆಗಬೇಕೆಂಬುದಾಗಿ ನಿರ್ಧರಿಸಲ್ಪಟ್ಟಿತ್ತು. ದುಷ್ಟಬುದ್ಧಿಯು ತನ್ನ ಮಗಳ ಪರಿಣಯವನ್ನು ಅತ್ಯಂತ ವೈಭವದಲ್ಲಿ ನೆರವೇರಿಸಬೇಕೆಂದು ನಿರ್ಧರಿಸಿದನು. ಅಮಾತ್ಯನ ಗೃಹವನ್ನು ಅತ್ಯಂತ ಸೊಗಸಾಗಿ ಶೃಂಗರಿಸುವ ಉದ್ಯಮಗಳು ಸಾಗುತ್ತಲಿದ್ದುವು. ಅಮಾತ್ಯನು ಸುಪ್ರಸಿದ್ಧ ವ್ಯಕ್ತಿಯಾದುದರಿಂದ ಆಮಂತ್ರಣ ಪತ್ರಗಳು ದೇಶವಿದೇಶಗಳಲ್ಲಿರುವ ಎಲ್ಲ ಪ್ರಮುಖರಿಗೂ ಕಳುಹಲ್ಪಟ್ಟವು.

ಚೈತ್ರಮಾಸವು ಬಂದಿತು ನಿಶ್ಚಿತ ದಿವಸಕ್ಕೆ ಎರಡು ದಿವಸಗಳ ಮುಂಚೆಯೇ ಶಶಾಂಕಶೇಖರ ಮಹಾಶಯನು ತನ್ನ ಪರಿವಾರ ಸಮೇತನಾಗಿ ಕುಳಿಂದದಿಂದ ರಾಜಧಾನಿಗೆ ಬಂದನು. ಅಮಾತ್ಯನು ಆ ಕುಬೇರನನ್ನು ಉಚಿತ ರೀತಿಯಲ್ಲಿ ಸತ್ಕರಿಸಿ ಉಪಚರಿಸಿದನು; ವೈಭವಪೂರ್ಣವಾದ ರೀತಿಯಲ್ಲಿ ಸುಸ್ವಾಗತವನ್ನು ನೀಡಿದನು.

ಅಮಾತ್ಯಪತ್ನಿಯು ತನ್ನ ಭಾವೀ ಜಾಮಾತೃವಿನ ವದನಮಂಡಲವನ್ನು ನೋಡಿದಳು. ಆ ರೂಪರಾಶಿಯನ್ನು ಕಂಡೊಡನೆಯೇ ಅವಳ ಎದೆಯೊಡೆದು ನೀರಾಗಿ ಹೋಯಿತು! ತನ್ನ ಮಗಳನ್ನು ಆ ಬೇತಾಳ ಸ್ವರೂಪನಿಗೆ ಅರ್ಪಿಸಲು ಅವಳ ಮಾತೃಹೃದಯವು ಒಪ್ಪಲಿಲ್ಲ. ಆ ಕೋಟ್ಯಾಧೀಶ್ವರನು ರೂಪಸಂಪನ್ನನಲ್ಲವೆಂಬುದನ್ನು ಅವಳು ಕೇಳಿ ತಿಳಿದಿದ್ದಳು; ಆದರೆ ಬೀಭ-ತ್ಸಾಕಾರದ ಪ್ರಾಣಿಯುವನೆಂಬುದು ಅವಳಿಗೆ ತಿಳಿದಿರಲಿಲ್ಲ ಆನೆಯ ಸೊಂಡಿಲಿನ ಹಾಗಿರುವ ಮೂಗು, ಹಂದಿಯ ಕೋರೆದಾಡೆಗಳಂತಿರುವ ದಂತಪಙ್ತಿಗಳು, ಜೋಲು ಬಿದ್ದಿರುವ ತುಟಿಗಳು, ತಲೆಯ ಬುರುಡೆಯೊಳಗೆ ಅಡಗಿಕೊಂಡಿರುವ ಚಿಕ್ಕ ನೇತ್ರಗಳು ಇವುಗಳೆಲ್ಲ ಆ ಹೆಂಗುಸಿನ ಹೃದಯದಲ್ಲಿ ಶೋಕವು ಉದ್ಭವಿಸುವಂತೆ ಮಾಡಿದುವು. ಅವಳು ಈ ಹಂದಿಯ ಕೊರಳೊಳಗೆ ತನ್ನ ಮಗಳು ಹಾರವನ್ನು ಹಾಕಬೇಕೆ? ಎಂದು ವಿಲಪಿಸಿದಳು.

ಮಾಲಿನಿಯ ಮುಖಾಂತರ ಶಶಾಂಕ ಮಹಾಶಯನ ಸೌಂದರ್ಯವನ್ನು ವಿಷಯಾಕುಮಾರಿಯು ತಿಳಿಯದೆ ಇರಲಿಲ್ಲ. ಈ ಭಯಂಕರ ರೂಪಿಯ ಮೇಲೆ ಅವಳಿಗೆ ಮಹತ್ತಾದ ಜಿಗುಪ್ಸೆಯು ಉದ್ಭವಿಸಿತು. ಈ ಸಂಕಟದಿಂದ

ಪಾರಾಗುವ ಬಗೆ ಹೇಗೆ? ಎಂಬುದನ್ನರಿಯದೆ ಶೋಕಿಸಿದಳು. ತನ್ನ ಗೆಳತಿಯ ಅವಸ್ಥೆಯನ್ನು ಕಂಡು ಮಾಲಿನಿಯೂ ಶೋಕಿಸದೆ ಇರಲಿಲ್ಲ.

"ಮಾಲಿನಿ, ಆ ಪತ್ರಕ್ಕೆ ಯಾವ ಪ್ರತ್ಯುತ್ತರವೂ ಲಭಿಸಲಿಲ್ಲವಲ್ಲ!" ಎಂದು ನಿರಾಶಾಭರಿತಳಾದ ಅಮಾತ್ಯನಂದಿನಿಯು ನುಡಿದಳು.

"ವಿಷಯಾ, ನಿರಾಶೆಯನ್ನು ಹೊಂದಬೇಡ. ನಿನಗೆ ಈ ವಿಪತ್ತಿನಿಂದ ಪಾರಾಗಲು ದಾರಿಯಿದ್ದೇ ಇದೆ."

"ಯಾವ ದಾರಿ?"

"ನೀನು ಶೋಕವನ್ನು ತ್ಯಜಿಸಿ ಹರ್ಷವನ್ನು ತಾಳು."

'ಈ ಮಹಾಭಾರವನ್ನು ಹೊತ್ತಿರಲು ಅದು ಹೇಗೆ ಸಾಧ್ಯವಾಗುವುದು.'

"ತಲೆಯ ಮೇಲೆ ಭಾರವೇ ಇಲ್ಲವೆಂದು ವಿಚಾರಿಸು!"

"ಅದು ಸಾಧ್ಯವೇ?"

"ಅದು ಸಾಧ್ಯವಿಲ್ಲದಿದ್ದರೆ ಬೇರೆ ದಾರಿಯಿಲ್ಲ. ನೀನು ಹರ್ಷವನ್ನು ತಾಳು! ಈ ವಿವಾಹಕ್ಕೆ ಒಪ್ಪಿರುವೆನೆಂಬುದನ್ನು ಸೂಚಿಸು!"

"ಪಾಪದ ದಾರಿಯನ್ನು ಹಿಡಿಯಲು ಹೇಳುತ್ತಿರುವೆಯಾ?"

"ಅದು ಬೇಡ; ಈ ವಿವಾಹಕ್ಕೆ ಒಪ್ಪಿದವಳ ಹಾಗೆ ನಟಿಸು!"

"ಅದರಿಂದ ಯಾವ ಗುಣವು?"

ಮಾಲಿನಿಯು ಅಮಾತ್ಯನಂದಿನಿಯ ಕಿವಿಗಳಲ್ಲಿ ಏನನ್ನೋ ಉಸುರಿದಳು. ವಿಷಯಾಕುಮಾರಿಯ ಮುಖವು ಪ್ರಫುಲ್ಲಿತವಾಯಿತು ಅವಳು ಹೇಳಿದಳು: "ಆದರೆ ಎಲ್ಲಿ ಹೋಗಲಿ?"

"ವಿಶಾಲವಾದ ಜಗತ್ತೇ ನಿನ್ನ ಕಣ್ಣುಗಳ ಮುಂದೆ ಇರುವಾಗ, ಎಲ್ಲಿಗೆ ಎಂಬುದನ್ನೇಕೆ ಚಿಂತಿಸುವದು?"

"ನಾನೇನು ಮಾಡಬೇಕೆಂಬುದನ್ನು ಹೇಳು!"

"ನೀನು ಈ ವಿವಾಹಕ್ಕೆ ಒಪ್ಪಿರುವೆಯೆಂಬುದನ್ನು ಅಮಾತ್ಯರಿಗೆ ಸೂಚಿಸು. ಇದುವರೆಗೆ ತೋರಿಸಿದ ಹಟಮಾರಿತನಕ್ಕೆ ಕ್ಷಮೆಯನ್ನು ಬೇಡು. ಯಾವ ಸಂಶಯವೂ ನಿನ್ನ ಮೇಲೆ ಬೀಳದಂತೆ ಜಾಗರೂಕಳಾಗಿರು."

"ನಾನೆಲ್ಲಿಗೆ ತೆರಳುತ್ತಿರುವೆನು? ಏನು ಮಾಡುತ್ತಿರುವೆನು? ಎಂಬವುಗಳನ್ನು ತಿಳಿಯಲು ತಂದೆಯವರು ಈಗಾಗಲೇ ಕೆಲವು ಮಂದಿ ದಾಸಿಯರನ್ನು ಚಾರಣಿಗಳನ್ನಾಗಿ ಮಾಡಿರುವರು ಅವರೆಲ್ಲರೂ ನನ್ನನ್ನು ಬಹು ಜಾಗ್ರತೆಯಿಂದ ನೋಡುತ್ತಿರುವರು. ಅವರ ಕಣ್ಣುಗಳಿಂದ ತಪ್ಪಿಸಿಕೊಂಡು ಹೊರಬೀಳುವದು ಹೇಗೆ?"

"ನಾನು ಆವುಗಳನ್ನೆಲ್ಲ ನಿವಾರಿಸಿ ದಾರಿಯನ್ನು ಮಾಡುವೆನು. ನೀನು ನಾನು ಹೇಳಿದಂತೆ ವರ್ತಿಸಿದರೆ ಸಾಕು."

"ಮಾಲಿನಿ, ಗೆಳತಿ" ಎಂದು ಅಮಾತ್ಯನಂದಿನಿಯು ಸ್ನೇಹಪರವಶಳಾಗಿ ತನ್ನ ಗೆಳತಿಯನ್ನು ಅಪ್ಪಿಕೊಂಡು: "ಎಲ್ಲವೂ ನಿನ್ನ ಮೇಲೆಯೇ ವಹಿಸಿರುವೆನು; ನನ್ನನ್ನು ಕೊಲ್ಲುವ ಮತ್ತು ಕಾಯುವ ಕೆಲಸವು ನಿನ್ನದು!"

"ಅಮಾತ್ಯನಂದಿನಿ! ಬಾಲ್ಯಕಾಲದಿಂದಿರುವ ಗೆಳತಿಯನ್ನು ನಂಬು" ಎಂದು ಆತ್ಮವಿಶ್ವಾಸಭರಿತಳಾಗಿ ಮಾಲಿನಿಯು ನುಡಿದಳು.

ಈ ಸಂದರ್ಭದಲ್ಲಿ ಯಾರೋ ಬರುತ್ತಿರುವ ಸಪ್ಪಳವು ಕೇಳಿಸಿತು. ಯಾರೆಂಬುದನ್ನು ತಿಳಿಯಲು ಮಾಲಿನಿಯು ಹೊರಗೆ ಹೋದಳು. ಬರುತ್ತಿದ್ದವಳು ವಿಷಯಾಕುಮಾರಿಯ ಜನನಿಯಾಗಿದ್ದಳು. ಅವಳನ್ನು ನೋಡಿದ ನಂತರ ಮಾಲಿನಿಯು ವಿಷಯಾಕುಮಾರಿಯ ಕೋಣೆಯೊಳಗೆ ಬಂದು ಅಮಾತ್ಯನಂದಿನಿಯೊಡನೆ ಹೇಳಿದಳು: "ನಿನ್ನ ನಾಟಕವನ್ನು ಚೆನ್ನಾಗಿ ಅಭಿನಯಿಸಬೇಕು; ತಿಳಿಯಿತೆ?"

"ಆದಷ್ಟು ಪ್ರಯತ್ನಿಸುವೆನು" ಹೀಗೆ ಹೇಳಿ ಅಮಾತ್ಯನಂದಿನಿಯು ಹರ್ಷಭಾವವನ್ನು ತಾಳಲು ಪ್ರಯತ್ನಿಸಿದಳು.

ತಾಯಿಯು ಒಳಗೆ ಬಂದಳು; ವಿಷಯಾಕುಮಾರಿಯನ್ನು ಕಂಡೊಡನೆಯೇ ತನ್ನಲ್ಲಿ ತುಳುಕುತ್ತಲಿರುವ ಶೋಕವ ಸಹಿಸಲಾರದೆ ಅವಳು: "ಅಯ್ಯೊ! ನಿನ್ನನ್ನು ಈ ಕಣ್ಣುಗಳಿಂದ ಹೇಗೆ ನೋಡಲಿ!" ಎಂದು ರೋದಿಸಲು ಪ್ರಾರಂಭಿಸಿದಳು.

"ಏಕಮ್ಮಾ! ಅಳುತ್ತಿಯೇ?" ಎಂದಳು ಮಗಳು.

"ಅಯ್ಯೋ! ಆ ಮುದಿಹದ್ದಿನ, ಪಿಶಾಚಿ ಸ್ವರೂಪಿಯ ಕೊರಳಿಗೆ ನಿನ್ನನ್ನು ಜೋತು ಹಾಕುವ ದೃಶ್ಯವನ್ನು ಈ ಕಣ್ಣುಗಳಿಂದ ಹೇಗೆ ವೀಕ್ಷಿಸಲಿ?"

"ಅಮ್ಮಾ! ಅದಕ್ಕಾಗಿ ಶೋಕಿಸಬೇಡ; ತಂದೆಯವರ ವಚನವನ್ನು ಪಾಲಿಸಲು ನಾನು ನಿರ್ಧರಿಸಿರುವೆನು."

"ಏನು? ನೀನು ಆ ಪಿಶಾಚಿಸ್ವರೂಪಿಯನ್ನು ವರಿಸಲು ಒಪ್ಪಿರುವೆಯಾ?"

"ತಂದೆಯವರ ನಿರ್ಧಾರದಂತೆ ಕೋಟ್ಯಾಧೀಶನ ಮಡದಿಯಾಗುವವನು."

"ವಿಷಯಾ! ವಿಷಯಾ!"

"ಏಕಮ್ಮಾ, ಈ ಪರಿ ರೋದಿಸುತ್ತಿರುವೆ?"

"ಹುಚ್ಚು ಹಿಡಿದಿದೆ ನಿನಗೆ! ನಿನ್ನ ತಂದೆಯವರಂತೆ ನೀನೂ ಹಣದ ಹುಚ್ಚಿನಿಂದ ಬಾಳುವೆಯನ್ನು ಕೆಡಿಸಲು ಬಯಸುತ್ತಿರುವೆಯಾ?"

"ತಾಯ್ತಂದೆಗಳ ಮಾತನ್ನು ಪಾಲಿಸುವದು ನನ್ನ ಕರ್ತವ್ಯವೆಂದು ಭಾವಿಸಿರುವೆನು. ಈ ಸಂಬಂಧವು ನನಗೆ ಶೋಕಕಾರಕವಾದರೂ ಸರಿ; ಒಮ್ಮನಸ್ಸಿನಿಂದ ತಂದೆಯವರ ನುಡಿಯನ್ನು ಪಾಲಿಸುವೆನು."

ಈ ವಚನಗಳನ್ನು ಶ್ರಾವಿಸಿ ಅಮಾತ್ಯಪತ್ನಿಯು ಮಾತಾಡಲಿಲ್ಲ. ಅವಳು ಆಶ್ಚರ್ಯಪರವಶಳಾದಳು. ನಿನ್ನೆಯ ವರೆಗೆ ತಾನು ತೀವ್ರವಾಗಿ ವಿರೋಧಿಸುತ್ತಲಿದ್ದ ವಿವಾಹಕ್ಕೆ ಇಂದು ವಿಷಯಾಕುಮಾರಿಯು ಒಪ್ಪಿರುವುದನ್ನು ಕಂಡು ಅಮಾತ್ಯಪತ್ನಿಗೆ ಬಹಳ ಸೋಜಿಗವು ತೋರಿತು.

"ನಿನ್ನೇದಿನದ ವರೆಗೆ ಪ್ರತಿಭಟಿಸುತ್ತಲಿದ್ದ ಕೆಲಸಕ್ಕೆ ಇಂದೇಕೆ ನೀನು ಒಪ್ಪಿರುವೆ?" ಎಂದು ಸಚಿವ ಪತ್ನಿಯು ಪ್ರಶ್ನಿಸಿದಳು.

"ನನ್ನ ತಪ್ಪು ನನಗೆ ಹೊಳೆದಿತು."

ತಾಯಿಯು ಸಂಕಟದಲ್ಲಿ "ನಿನ್ನ ಬುದ್ಧಿಯು ಕೆಟ್ಟುಹೋಯಿತೆ?"

ಇಷ್ಟರಲ್ಲಿ ದುಷ್ಟಬುದ್ಧಿಯು ಅಲ್ಲಿಗೆ ಬಂದನು. ತಾನು ಎಷ್ಟು ದಕ್ಷತೆಯನ್ನು ವಹಿಸಿದರೂ ವಿಷಯಾಕುಮಾರಿಯು ಚಂಡಿತನವನ್ನು ಹಿಡಿದರೆ ಕಾರ್ಯವು ಯಶಸ್ವಿಯಾಗದೆಂಬುದನ್ನು ಅವನು ತಿಳಿದಿದ್ದನು. ಯಾವುದಾದರೂ ಒಂದು ರೀತಿಯಿಂದ ತನ್ನ ಮಗಳು ಶಶಾಂಕನ ಮಡದಿಯಾಗಿರುವಂತೆ ಒಡಂಬಡಿಸುವುದುಚಿತವೆಂದು ಅವನು ಆಲೋಚಿಸಿದನು. ಮನೆಯಲ್ಲಿ ಎಲ್ಲ ದಾಸಿಯರೊಡನೆ ವಿಷಯಾಕುಮಾರಿಯ ಮೇಲೆ ತಮ್ಮ ದೃಷ್ಟಿಯನ್ನಿಟ್ಟು ಅವಳ ವರ್ತನೆಗಳನ್ನು ತನಗರುಹಬೇಕೆಂದು ಆಜ್ಞಾಪಿಸಿದ್ದನು; ಆದರೆ ಅವನಿಗೆ ಇದರಿಂದ ತೃಪ್ತಿ ಬರಲಿಲ್ಲ ಅವಳು ಯಾವುದಾದರೂ ಭಯಂಕರ ಕೃತ್ಯಗಳಲ್ಲಿ ಉದ್ಯುಕ್ತಳಾದರೆ, ಅವುಗಳನ್ನು ನಿವಾರಿಸುವದು ಅವಶ್ಯಕವೆಂದು ಅವನು ಗ್ರಹಿಸಿದ್ದನು. ಕೊನೆಯ ಸಾರೆ ವಿನಯದಿಂದ ಮಗಳಿಗೆ ಉಪದೇಶಗಳನ್ನು ನೀಡಿ, ಒಡಂಬಡಿಸುವದಕ್ಕಾಗಿ ಅಮಾತ್ಯನು ಮಗಳ ಕೋಣೆಗೆ ಬಂದನು. ಅಮಾತ್ಯನಂದಿನಿಯು ತನ್ನ ತಂದೆಯ ಚರಣಗಳಲ್ಲಿ ನಮಿಸಿದಳು.

"ವಿಷಯಾ!" ಎಂದು ಪ್ರೇಮಪುರಸ್ಸರ ಸ್ವರದಲ್ಲಿ ಅಂದನು ಅಮಾತ್ಯ.

"ಅಪ್ಪಾ! ನಾನು ಗೈದ ಸಕಲ ಅಪರಾಧಗಳನ್ನೂ ಕ್ಷಮಿಸಬೇಕಾಗಿ ಪ್ರಾರ್ಥನೆಯು!"

"ಮಗೂ, ನೀನು ನನ್ನ ನುಡಿಗಳಿಗೆ ಮನ್ನಣೆಯನ್ನು ನೀಡು."

"ಅಪ್ಪಾ, ತಮ್ಮ ವಾಕ್ಯಗಳನ್ನು ಶಿರಸಾವಹಿಸಲು ನಾನು ಸನ್ನದ್ಧಳಾಗಿರುವೆನು."

ಮಗಳ ವಾಕ್ಯವನ್ನು ಕೇಳಿ ದುಷ್ಟಬುದ್ಧಿಯು ಹರ್ಷಭರಿತನಾದನು.

ಮಗಳ ಹೃದಯದಲ್ಲಿ ಇಷ್ಟು ಮಹತ್ತಾದ ಪರಿವರ್ತನೆಯು ಆದುದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. "ಮಗೂ, ನಿನ್ನ ಸಕಲ ತಪ್ಪುಗಳನ್ನೂ ಕ್ಷಮಿಸಿರುವೆನು" ಎಂದನು ಅಮಾತ್ಯನು: "ನೀನು ಕೋಟ್ಯಾಧೀಶನನ್ನು ವರಿಸತಕ್ಕದ್ದು."

"ನಿಶ್ಚಯವಾಗಿಯೂ ಅಪ್ಪಾ, ನಾನು ನನ್ನ ತಪ್ಪುಗಳನ್ನು ತಿಳಿದುಕೊಂಡೆನು; ತಮ್ಮ ನುಡಿಗಳನ್ನು ನೆರವೇರಿಸುವೆನು"

"ಮಗು, ನಾನು ಹರ್ಷಿತನಾದೆನು; ಈಗಲಾದರೂ ನಿನಗೆ ಬುದ್ಧಿಯು ತೋರಿತಲ್ಲ!"

"ತಂದೆಯೇ, ಇದುವರೆಗೆ ತಿಳಿಯದೆ ಹಟಮಾರಿಯಾಗಿದ್ದೆನು. ತಂದೆಯ ನುಡಿಗಳಿಗೆ ಮನ್ನಣೆಯನ್ನು ನೀಡುವದು ಮಕ್ಕಳ ಕರ್ತವ್ಯವಾಗಿದೆ, ಎಂಬುದನ್ನು ಇದುವರೆಗೆ ನಾನು ತಿಳಿದಿರಲಿಲ್ಲ."

ದುಷ್ಟಬುದ್ಧಿಯು ತನ್ನ ಮಗಳ ಮಾತುಗಳಲ್ಲಿ ನಂಬಿಕೆಯನ್ನಿಟ್ಟು ತನ್ನ ನಿರ್ಧಾರವು ವಿಜಯಪ್ರದವಾಗುವುದೆಂದು ನಂಬಿ ಹಿಂದಿರುಗಿದನು. ಅಮಾತ್ಯಪತ್ನಿಯು ಕಣ್ಣೀರು ಸುರಿಸುತ್ತ ಏನು ಮಾತಾಡಬೇಕೆಂಬುದನ್ನು ತಿಳಿಯದೆ ತನ್ನ ವಸತಿಗೆ ಹಿಂದಿರುಗಿದಳು.

"ಅಮಾತ್ಯನಂದಿನಿ" ಎಂದಳು ನಗುತ್ತ ಮಾಲಿನಿಯು: "ನೀನು ಈ ನಾಟಕವನ್ನು ಚೆನ್ನಾಗಿಯೇ ಅಭಿನಯಿಸಿದೆ"

"ಮಾಲಿನಿ, ನಾನೇನು ಮಾಡಬೇಕಿನ್ನು?"

"ಅದನ್ನು ಅನಂತರ ಉಸುರುವೆನು."

ದುಷ್ಟಬುದ್ಧಿಯು ಶಶಾಂಕಶೇಖರನ ಬಳಿಗೆ ತೆರಳಿದನು. ಅವನು ತನ್ನ ಭಯಂಕರವಾದ ಸ್ವರದಲ್ಲಿ:—"ಏನು ಅಮಾತ್ಯರೆ! ಇಷ್ಟೆಲ್ಲ ಮಾಡಿದ ನಂತರ ನನ್ನನ್ನು ನಿರಾಶನನ್ನಾಗಿ ಮಾಡಬಾರದು."

"ಎಲ್ಲಾದರೂ ಉಂಟೇ? ನನ್ನ ಕುಮಾರಿಯಾದರೂ ನನ್ನ ತಪ್ಪುಗಳನ್ನು ತಿಳಿದುಕೊಂಡು, ತನ್ನ ಹಟಮಾರಿತನವನ್ನು ತ್ಯಜಿಸಿ, ತಮ್ಮ ಗೃಹಿಣೀ ಪದವನ್ನು ಸ್ವೀಕರಿಸಲು ಆಗ್ರಹಭರಿತಳಾಗಿರುವಳು."

"ನೋಡಿ! ಅಮಾತ್ಯರೇ, ನನ್ನ ಊಹೆಯು ಎಷ್ಟು ವಾಸ್ತವವಾಗಿ ಪರಿಣಮಿಸಿತು? ನನ್ನ ಯಥಾರ್ಥ ಗುಣಗಳನ್ನು ತಮ್ಮ ಕುಮಾರಿಯು ತಿಳಿದರೆ, ತನ್ನ ಹಟಮಾರಿತನವನ್ನು ಬಿಡುವಳೆಂಬುದನ್ನು ನಾನು ಮೊದಲೇ ಗ್ರಹಿಸಿದ್ದೆನು. ರೂಪವಲ್ಲ ಮುಖ್ಯವು; ಅಮಾತ್ಯರೆ, ದಾಂಪತ್ಯಜೀವನದ ಶ್ರೇಯಸ್ಸಿಗೆ ಗುಣವು ಕಾರಣವಾಗಿದೆ."

"ಅದರಲ್ಲಿ ಸಂದೇಹವಿಲ್ಲ; ತಮ್ಮಂಥ ಗುಣನಿಧಿಗಳು ಕುಂತಳದಲ್ಲಿ ಬೇರೆ ಇರಲಾರರು ತಮ್ಮ ಅಮೋಘವಾದ ಕೀರ್ತಿಯನ್ನು ಶ್ರಾವಿಸಲು, ನನ್ನ ಮಗಳು ತನ್ನ ಹಟಮಾರಿತನವನ್ನು ತ್ಯಜಿಸಿ, ಸಹರ್ಷ ತಮ್ಮ ಪತ್ನೀ ಪದವನ್ನು ಸ್ವೀಕರಿಸಲು ಮುಂದೆ ಬಂದಿರುವಳು"

"ಅದೇ ಬೇಕಾದುದು; ಚಪಲತೆಯುಳ್ಳ ಹುಡುಗಿಯರಂತೆ ಅವಳೂ ಸ್ವೇಚ್ಛಾಚಾರಿಣಿಯೆಂದು ನಾನು ನೆನೆದಿದ್ದೆನು. ಹಾಗಲ್ಲ. ಎಷ್ಟಾದರೂ ತಮ್ಮ ಪುತ್ರಿಯಲ್ಲವೇ? ಆ ಗುಣವು ತಿಲಾಂಶವಷ್ಟಾದರೂ ಅವಳಲ್ಲಿ ಪ್ರಕಾಶಿಸದಿರುವುದೇ!"

ಶಶಾಂಕಶೇಖರನ ಹರ್ಷಕ್ಕೆ ಪಾರವೇ ಇಲ್ಲ; ಅಮಾತ್ಯನಂದಿನಿಯು ತನ್ನನ್ನು ಸ್ವೀಕರಿಸಲು ಒಡಂಬಟ್ಟಿರುವಳೆಂಬ ವಾರ್ತೆಯನ್ನು ಅರಿತಮೇಲಂತೂ, ವಿಷಯಾಕುಮಾರಿಯೊಡನೆ ತಾನಾವ ರೀತಿಯಲ್ಲಿ ಸುಖಿಸುವೆನೆಂಬ ಗಾಳಿಯ ಗೋಪುರಗಳನ್ನು ತನ್ನ ಮನಸ್ಸೆಂಬ ನಭೋಮಂಡಲದಲ್ಲಿ ರಚಿಸುತ್ತಾ ಆ ಕೋಟ್ಯಾಧೀಶ್ವರನು ಹಗಲುಗನಸುಗಳನ್ನು ಕಾಣಲಾರಂಭಿಸಿದನು ವಿಷಯಾ ಕುಮಾರಿಯ ಸೌಂದರ್ಯವನ್ನು ಧ್ಯಾನಿಸುತ್ತಾ, ತನ್ನ ಮನಸ್ಸಿನಲ್ಲಿ ಮೂಡಿರುವ ವಿಷಯ ವಿಕಾರಗಳನ್ನು ಹೆಚ್ಚಿಸ ತೊಡಗಿದನು. ರಾತ್ರಿ ನಿದ್ರೆಯಲ್ಲಿಯೂ ವಿಷಯಾದೇವಿಯ ಸ್ವಪ್ನವನ್ನಲ್ಲದೆ ಬೇರೆ ಯಾವುದನ್ನೂ ಅವನು ಕಾಣುತ್ತಿರಲಿಲ್ಲ.

೧೧

ವಿವಾಹ ದಿನವು ಬಂದಿತು; ಮುಹೂರ್ತವು ಸಂಪ್ರಾಪ್ತವಾಯಿತು. ಪುರೋಹಿತರು "ಸುಲಗ್ನಾ ಸಾವಧಾನ, ಸುಮುಹೂರ್ತಾ ಸಾವಧಾನ!" ಎಂದು ಗಟ್ಟಿಯಾಗಿ ವೇದಮಂತ್ರಗಳನ್ನು ಉಚ್ಚರಿಸುತ್ತಲಿದ್ದರು. ಬಂಧು-ಬಳಗದವರು ಸುಂದರವಾದ ಒಡವೆ-ವಸ್ತ್ರಗಳನ್ನು ಧರಿಸಿ ವಿವಾಹ ಮಂಟಪದಲ್ಲಿ ನೆರೆದಿದ್ದರು. ಅಮಾತ್ಯವರ್ಯನ ಗೆಳೆಯರು, ಮಿತ್ರರು, ರಾಜ್ಯದ ಪ್ರಧಾನ ಅಧಿಕಾರಿಗಳು ಮೊದಲಾದವರೆಲ್ಲರೂ ವಧೂವರರನ್ನು ಆಶೀರ್ವದಿಸಲು ವಿವಾಹಮಂಟಪದಲ್ಲಿ ಸನ್ನಿಹಿತರಾಗಿದ್ದರು. ವಾದ್ಯಗಾರರು ಸುಸ್ವರದಲ್ಲಿ ವಾದ್ಯಗಳನ್ನು ಬಾಜಿಸುತ್ತಾ, ಪ್ರೇಕ್ಷಕರ ಮನಸ್ಸುಗಳಿಗೆ ಆಹ್ಲಾದವನ್ನು ಉಂಟು ಮಾಡುತ್ತಲಿದ್ದರು. ಬಂದಿದ್ದ ಜನರು ವಿವಿಧ ವಿನೋದಗಳಲ್ಲಿ ಕಾಲವನ್ನು ಕಳೆಯುತ್ತಲಿದ್ದರು ರಾಜಕಾರಣ, ಲಾಟರ ಆಕ್ರಮಣ, ರಾಜನಂದಿನಿಯು ಚಂದ್ರಹಾಸನನ್ನು ವರಿಸುವಳು ಎಂಬಿತ್ಯಾದಿ ಸಂಗತಿಗಳು ಅಲ್ಲಿ ನೆರೆದ ಜನರ ಸಂಭಾಷಣಾ ವಿಷಯಗಳಾಗಿದ್ದುವು.

ಈ ಸಂದರ್ಭದಲ್ಲಿ ವಿವಾಹಮಂಟಪದೊಳಗೆ ೧೭-೧೮ರ ವರ್ಷ ಪ್ರಾಯದ

ತರುಣನೊಬ್ಬನು ಪ್ರವೇಶಿಸಿದನು. ಅವನು ಅಲ್ಲಿ ಸ್ವಲ್ಪ ಹೊತ್ತು ಸಂಚರಿಸಿ ಅನಂತರ ತಾನೊಬ್ಬ ಚಿರಪರಿಚಿತನಂತೆ ನಟಿಸುತ್ತ, ಅಮಾತ್ಯಸದನದ ಮಹಡಿಯನ್ನೇರಿದನು. ಹತ್ತು ನಿಮಿಷಗಳು ಕಳೆದ ನಂತರ ಅವನು ಮಹಡಿಯಿಂದ ಇಳಿದು ಬಂದು, ಸ್ವಲ್ಪ ಸಮಯದವರೆಗೆ ಅಲ್ಲಿಲ್ಲ ತಿರುಗಾಡಿ, ನಂತರ ವಿವಾಹ ಮಂಟಪವನ್ನು ಪರಿತ್ಯಜಿಸಿ ಹೊರಟು ಹೋದನು. ಮನೆಯವರೆಲ್ಲ ಅವನು ಆಮಂತ್ರಿತನಾದ ಒಬ್ಬ ಅತಿಥಿಯೆಂದು ವಿಚಾರಿಸಿದುದರಿಂದ ಅವನು ಯಾರೆಂಬುದನ್ನೂ, ಎಲ್ಲಿಗೆ ತೆರಳಿದನೆಂಬುದನ್ನೂ ತಿಳಿಯಲು ಪ್ರಯತ್ನಿಸಲಿಲ್ಲ.

ಮುಹೂರ್ತವು ಬಂದಿತು. ಪುರೋಹಿತರು ಗಟ್ಟಿಯಾಗಿ ಮಂತ್ರವನ್ನು ಉಚ್ಚರಿಸುತ್ತ, ವಧುವನ್ನು ಕರೆದುಕೊಂಡು ಬರಲು ಸಮಯವಾಯಿತೆಂದು ನುಡಿದರು ಮದನಕುಮಾರನು ವಧುವನ್ನು ಕರೆದುಕೊಂಡು ಬರುವದಕ್ಕಾಗಿ ಮಹಡಿಯನ್ನು ಹತ್ತಿದನು. ಅಲ್ಲಿ ಹೋಗಿ ಅವನು ನೋಡಿದನು; ಆದರೆ ತನ್ನ ಕೋಣೆಯಲ್ಲಿ ಅಮಾತ್ಯನಂದಿನಿಯಿರಲಿಲ್ಲ ಅವಳಿಗೆ ಧರಿಸಲಿರುವ ಹೊಸ ಸೀರೆ, ಕುಪ್ಪಸ, ರತ್ನಾಭರಣಗಳು ಮೊದಲಾದವುಗಳೆಲ್ಲ ಅವಳ ಕೋಣೆಯಲ್ಲಿಯೇ ಬಿದ್ದಿದ್ದವು ಅವಳು ಹೊರಗೆಲ್ಲಿಯೋ ತೆರಳಿರಬಹುದೆಂದು ಬಗೆದು 'ವಿಷಯಾ, ವಿಷಯಾ' ಎಂದು ಮದನನು ನಾಲ್ಕೆಂಟು ಬಾರಿ ಅವಳನು ಕೂಗಿದನು; ಆದರೆ ಪ್ರತ್ಯುತ್ತರವಾಗಿ ಯಾವ ಶಬ್ದವೂ ಕೇಳಬರಲಿಲ್ಲ ವಿಷಯಾಕುಮಾರಿಯ ಕಂಠಸ್ವರವು ವಾಯುವಿನಲ್ಲಿ ಸಂಚರಿಸಿ ಅವನ ಬಳಿಗೆ ಬರಲಿಲ್ಲ ಅವನು ಚಕಿತನಾದನು! ವಿಷಯಾಕುಮಾರಿಯು ಎತ್ತ ತೆರಳಿದಳೆಂದು ತನ್ನೊಳಗೆ ತಾನೇ ಕೇಳಿಕೊಂಡನು ಮಹಡಿಯಲ್ಲೆಲ್ಲಿಯೂ ವಿಷಯಾಕುಮಾರಿಯು ಕಂಡು ಬರಲಿಲ್ಲ ಅವನ ಹೃದಯದಲ್ಲಿ ದಿಗಿಲು ಹುಟ್ಟಿತು ಈ ವಿವಾಹಕ್ಕೆ ಹೇಸಿ, ವಿಷಯೆಯು ಆತ್ಮಹತ್ಯೆಯಲ್ಲಿ ಉದ್ಯುಕ್ತಳಾಗಿರಬಹುದೇ? ಎಂಬಿತ್ಯಾದಿಯಾಗಿ ಮದನನು ವಿಚಾರಿಸಿದನು. ಅವನು ಅಟ್ಟದಿಂದ ಇಳಿದು ವಿವಾಹಮಂಟಪಕ್ಕೆ ತೆರಳಿದನು. ಅವನ ಚಿಂತಾಮಗ್ನವಾದ ಮುಖಮಂಡಲವನ್ನು ವೀಕ್ಷಿಸಿ, ಅಲ್ಲಿ ನೆರೆದಿರುವ ಜನರು ಕೇಳಿದರು: "ವಧುವೆಲ್ಲಿ? ಮುಹೂರ್ತವಾಯಿತಲ್ಲ!"

ತನ್ನ ಎರಡೂ ಕೈಗಳನ್ನು ಮೇಲಕ್ಕೆತ್ತಿ, ನಿರಾಶಾಸೂಚಕ ಧ್ವನಿಯಲ್ಲಿ ಮದನನು:—"ವಧುವಿಲ್ಲ!" ಎಂದನು.

"ಎಲ್ಲಿ? ಏನಾದಳು? ಎತ್ತ ಹೋದಳು?" ಎಂಬ ನೂರಾರು ಪ್ರಶ್ನೆಗಳು ಜನರ ಬಾಯಿಂದ ಹೊರಬಿದ್ದು ನಭದಲ್ಲಿ ವ್ಯಾಪಿಸಿದುವು.

"ನಾನು ಊಹಿಸಿದಂತೆಯೇ ಆಯಿತು. ಅವಳ ಇಷ್ಟಕ್ಕೆ ವಿಪರೀತ ವಾಗಿ ಮುದಿಹದ್ದಿನ ಕೊರಳಿಗೆ ನೇತು ಹಾಕಲು ಪ್ರಯತ್ನಿಸಿದರೆ, ಅವಳು ಹೇಗೆ ಸುಮ್ಮನಿದ್ದಾಳು? ತನ್ನಂತರಂಗದ ದುಃಖವನ್ನು ಸಹಿಸಲಾರದೆ, ಬಾವಿ ಯಲ್ಲಿ ಬಿದ್ದಿರಬಹುದು!" ಎಂದು ತಿರಸ್ಕಾರ ಮತ್ತು ಶೋಕ ಪರಿಪೂರ್ಣವಾದ ಸ್ವರದಲ್ಲಿ ಅಮಾತ್ಯಪತ್ನಿಯು ಅಂದಳು.

ವಿವಾಹಮಂಟಪದಲ್ಲಿ ತನ್ನ ಆಸನದಿಂದ ಎದ್ದು ವರನು:—"ಅಮಾ ತ್ಯರೇ, ತಮ್ಮ ಮುಂದೆಯೇ ತಮ್ಮ ಪತ್ನಿಯು ನನ್ನನ್ನು ಮುದಿಹದ್ದು! ಎಂಬು ದಾಗಿ ಅವಮಾನಿಸುತ್ತಿರುವಳು ನೀವು ನನ್ನನ್ನು ನಾಚಿಕೆಗೇಡಿಗೆ ಒಳ ಮಾಡಲು ಇಷ್ಟೆಲ್ಲ ಸಂಭ್ರಮಗಳನ್ನು ನಡೆಸಿದಿರಾ?"

"ನನ್ನ ಮಗಳನ್ನು ಕೊಲ್ಲಲು ಬಂದ ಯಮನು ನೀನು!" ಎಂದು ತನ್ನ ಮಗಳನ್ನು ಮನಸ್ಸಿನಲ್ಲಿಯೇ ನೆನೆಯುತ್ತ, ದುಃಖಮಿಶ್ರಿತವಾದ ಶೋಕದೊಡನೆ ಗರ್ಜಿಸಿದಳು ಅಮಾತ್ಯಪತ್ನಿಯು

"ನಿಲ್ಲು, ಮುಚ್ಚು ಬಾಯಿ! ಶಶಾಂಕಶೇಖರ ಮಹಾಶಯರು ಎಷ್ಟು ಘನವಂತರಿರುವರೆಂಬುದನ್ನು ನೀನು ಬಲ್ಲೆಯಾ? ಅವರನ್ನು ಅವಮಾನಿಸ ಕೂಡದು ನಾನು ವಿಷಯೆಯ ಕೋಣೆಗೆ ಹೋಗಿ ನೋಡಿಕೊಂಡು ಬರು ವೆನು." ಎನ್ನುತ್ತ, ಅಮಾತ್ಯನು ಮಹಡಿಯನ್ನೇರಿದನು.

ಅಮಾತ್ಯನು ಮಹಡಿಗೇರಿದುದೇ ತಡ; ಅಲ್ಲಿ ನೆರೆದಿದ್ದ ತರುಣರು, ಹುಡುಗಿಯರು, ಬಾಲಕರು ಮೊದಲಾದವರೆಲ್ಲರೂ ವಿವಾಹಮಂಟಪವನ್ನು ಸಿಂಗರಿಸಲುಪಯೋಗಿಸಿದ್ದ ಮಾವಿನೆಲೆಯ ತೋರಣಗಳು, ಹೂ ಗೊಂಚಲ ಗಳು ಮೊದಲಾದವುಗಳನ್ನು ಕಿತ್ತು, ಶಶಾಂಕಶೇಖರನ ಮೋರೆಯ ಮೇಲೆ ಎಸೆಯಲಾರಂಭಿಸಿದರು. ಕೆಲವು ಮಂದಿ ತುಂಟ ಹುಡುಗಿಯರು ಪಾತ್ರೆಗಳಲ್ಲಿ ಅರಿಸಿನದ ನೀರನ್ನು ತುಂಬಿ ತಂದು ಕೋಟ್ಯಾಧಿಶನಿಗೆ ಅಭಿಷೇಕವನ್ನು ಮಾಡಿ ದರು ಕೆಲವು ಮಂದಿ ಧೀರರು ತೆಂಗಿನ ಕಾಯಿಗಳನ್ನು ಕರಗಳಲ್ಲಿ ಹಿಡಿದು ಶಶಾಂಕಶೇಖರನ ಶಿರಕ್ಕೆ ಗುರಿಯಿಟ್ಟು ಪ್ರಯೋಗಿಸಿದರು. ಕೆಲವರು ಮುಂದೆ ಬಂದು ವ್ಯಾಪಾರಿಯ ಉದ್ದವಾದ ಮೂಗನ್ನು ಎಳೆದು, ಇನ್ನಷ್ಟು ಉದ್ದ ಮಾಡಲು ಪ್ರಯತ್ನಿಸದೆ ಇರಲಿಲ್ಲ

"ನಾನೇನು ಮಾಡಿದೆನು?" ಎಂದು ಅಳುತ್ತಾ ಪ್ರಶ್ನಿಸಿದನು ಶಶಾಂ ಕನು "ನನ್ನನ್ನೇಕೆ ಈ ರೀತಿ ಹಿಂಸಿಸುತ್ತಿರುವಿರಿ?"

"ಮುಂಡೆಯ ಮಗನೇ! ಒಬ್ಬ ಹುಡುಗಿಯ ಜೀವಹಾನಿಗೆ ಕಾರಣನಾದ ನಿನಗೆ ನಾವು ತಕ್ಕ ಪ್ರಾಯಶ್ಚಿತ್ತವನ್ನು ಮಾಡದೆ ಇರುವವರಲ್ಲ. ಅಮಾ

ತ್ಯನು ನನ್ನನ್ನು ಸೆರೆಮನೆಯಲ್ಲಿ ಹಾಕಿದರೂ ಚಿಂತೆಯಿಲ್ಲ. ನಿನ್ನ ರುಂಡವನ್ನು ಹಾರಿಸದೇ ಇರಲಾರೆನು" ಎಂದು ಜನಸಂದಣಿಯ ಮಧ್ಯದಿಂದ ಒಬ್ಬ ಪುಂಡನು. ಎಸೆದ ತೆಂಗಿನಕಾಯಿಯು ಬಂದು ಶಶಾಂಕಶೇಖರನ ನುಣ್ಣಗಿರುವ ಶಿರಸ್ಸನ್ನು ಪ್ರೇಮಪೂರ್ವಕವಾಗಿ ಚುಂಬಿಸಿತು.

"ನಾನು ಯಾರ ಜೀವಹಾನಿಯನ್ನೂ ಮಾಡಿಲ್ಲ!" ಎಂದು ರೋದಿಸಿದನು ವ್ಯಾಪಾರಿಯು: "ಮದುವೆಗಾಗಿ ಬಂದ ವರನನ್ನು ಈ ರೀತಿ ಅವಮಾನಿಸುವುದುಚಿತವೇ?"

"ವರ ಮಹಾರಾಜರೆ, ನಿಮಗೆ ನಾವಿಂದು ಬೇರೊಂದು ಮದುವೆಯನ್ನೇ ಮಾಡಿ ಬಿಡುವೆವು!" ಎಂದನು ಒಬ್ಬ ಕುಚೋದ್ಯಗಾರ.

ಶಶಾಂಕಶೇಖರನಿಗೆ ಅಲ್ಲಿ ನಿಲ್ಲಲು ಸಾಧ್ಯವಾಗಲಿಲ್ಲ. ಚಿಕ್ಕಮಕ್ಕಳ ಹಾಗೆ ಅಳುತ್ತ "ಅಮಾತ್ಯರೇ, ಅಮಾತ್ಯರೆ!" ಎಂದು ಒದರುತ್ತಾ ಮಹಡಿಯನ್ನೇರಲು ಯತ್ನಿಸಿದನು ಅವನು.

ಗಾಬರಿಯಿಂದ ಬರುತ್ತಿರುವ ಶಶಾಂಕನನ್ನು ಕಂಡು ದುಷ್ಟಬುದ್ಧಿಯು: "ಏಕೆ ಮಹಾಶಯರೆ! ಇಷ್ಟು ಅಂಜಿಕೊಂಡಿದ್ದೀರಿ?"

"ಅಮಾತ್ಯರೇ! ನೀವು ಹೆಣ್ಣನ್ನು ಕೊಡದಿದ್ದರೆ ಬೇಡ; ನನ್ನ ಜೀವ ಉಳಿಸಿದರೆ ಸಾಕು!"

"ನಿನಗೆ ಹೆಣ್ಣು ಬೇಕೇ? ಹೆಣ್ಣು! ಮುದಿ ಗೂಬೆ! ತಕ್ಕ ಪ್ರಾಯಶ್ಚಿತ್ತವನ್ನು ನಾವಿಂದು ಮಾಡುವೆವು" ಎಂದು ಮುಂಟಪದಲ್ಲಿ ತುಂಟರು ಒದರುತ್ತಿರುವ ಶಬ್ದವು ಕೇಳಿ ಬಂದಿತು.

"ಅಮಾತ್ಯರೆ, ಅವರು ನನ್ನನ್ನು ಕೊಲ್ಲುತ್ತಾರೆ! ರಕ್ಷಿಸಿರಿ. ನೀವು ಹಣಕೊಡದಿದ್ದರೆ ಬೇಡ; ಹೆಣ್ಣೂ ಬೇಡ. ಜೀವ ಉಳಿಸಿರಿ ನಾನು ಬದುಕುವಂತೆ ಮಾಡಿರಿ!"

"ವಣಿಕಮಹಾಶಯರೆ! ಭಯಪಡಬೇಡಿ; ಈ ಕೋಣೆಯಲ್ಲಿ ನೆಮ್ಮದಿಯಿಂದ ಕುಳಿತುಕೊಳ್ಳಿರಿ!"

ಶಶಾಂಕಮಹಾಶಯನು ಅಲ್ಪ ಮನಃಶಾಂತಿಯನ್ನು ಹೊಂದಿ ಒಂದು ಕೋಣೆಯೊಳಗೆ ಕುಳಿತುಕೊಂಡನು. ದುಷ್ಟಬುದ್ಧಿಯು ಮನೆಯಲ್ಲೆಲ್ಲ ವಿಷಯಾಕುಮಾರಿಯನ್ನು ಹುಡುಕಿದನು; ಆದರೆ ಅವಳು ಎಲ್ಲಿಯೂ ಸಿಗಲಿಲ್ಲ. ಅಮಾತ್ಯನಿಗೆ ಅವಳ ಶಯನಗಾರದಲ್ಲಿ ಒಂದು ಓಲೆಯು ಗೋಚರವಾಯಿತು. ದುಷ್ಟಬುದ್ಧಿಯು ವಿಸ್ಮಯಭರಿತನಾಗಿ ಅದನ್ನು ತೆಗೆದು ಓದಿ ನೋಡಿದನು. ಅದರಲ್ಲಿರುವ ಸಂಗತಿಯು ಈ ಪ್ರಕಾರವಾಗಿದ್ದಿತು:

"ಪೂಜ್ಯಪಿತನ ಚರಣಾರವಿಂದಗಳಿಗೆ—

ನಾನೊಬ್ಬನನ್ನು ಮನಸಾ ವರಿಸಿರುವೆನು. ಈಗ ತಾವು ನಡೆಯಿಸಲು ಪ್ರಯತ್ನಿಸುತ್ತಿರುವ ವಿವಾಹವು ನನ್ನ ಶೀಲಕ್ಕೆ ಭಂಗ ತರುವದಿರುವದರಿಂದ, ತಾವು ತಿಳಿಯದಂತೆ ಗೃಹವನ್ನು ಪರಿತ್ಯಜಿಸಿರುವೆನು. ನನ್ನನ್ನು ಶೋಧಿಸಲು ಯತ್ನಿಸಬೇಡಿರಿ ನನ್ನ ಮನದ ಅಭೀಷ್ಟವು ನೆರವೇರಿದ ನಂತರ ನಾನಾಗಿಯೇ ಬಂದು ತಮ್ಮನ್ನು ಕಾಣುವೆನು.

ತಮ್ಮ ಮಗಳು"

ಈ ಓಲೆಯನ್ನು ನೋಡಿ ಅವನು ಆಶ್ಚರ್ಯಪರತಂತ್ರನಾದನು. ಈ ಸಂಭವವು ಹೇಗಾದಿತೆಂದು ಆತನು ವಿಚಾರಿಸಿದ್ದರಿಂದ, ವಿಷಯಾ ಕುಮಾರಿಯನ್ನು ನೋಡಿಕೊಳ್ಳುವ ಸಲುವಾಗಿ ಒಂದೆರಡು ಜನ ದಾಸಿಯರನ್ನು ಅವನು ಸಂಶಯಿಸಿದನು. ಆ ದಾಸಿಯರಿಗೂ ಅಮಾತ್ಯನಿಗೂ ತಿಳಿಯದಂತೆ ಅವಳು ಮನೆಯನ್ನು ತ್ಯಜಿಸಿ ಹೋದ ವರ್ತನೆಯು ಅಮಾತ್ಯನಿಗಿಂತಲೂ ಅವಳು ಬುದ್ಧಿಶಾಲಿನಿಯೆಂಬುದನ್ನು ವ್ಯಕ್ತಗೊಳಿಸುತ್ತಲಿದ್ದಿತು.

ಅಮಾತ್ಯನ ಹೃದಯದಲ್ಲಿ ವಿಷಯಾದೇವಿಯ ಈ ಕೃತ್ಯವು ಅಲ್ಪವಾದ ಸಂತೋಷವನ್ನುಂಟುಮಾಡಿತು; ಆದರೆ ಮುದಿಹದ್ದಿನ ಬಾಯಿಯಿಂದ ಅವಳು ರಕ್ಷಣೆಯನ್ನು ಹೊಂದಿದಳಲ್ಲಾ ಎಂಬುದೇ ಜನನಿಗಿರುವ ಸಂತೃಪ್ತಿ

ಶತಾನಂದನು ಕ್ರೋಧಾವೇಶನಾಗಿ ಅಮಾತ್ಯನನ್ನು ದೂಷಿಸಿದನು. ಇದುವರೆಗೆ ತಾನು ನಿರ್ಮಿಸುತ್ತಿದ್ದ ಗಾಳಿಯ ಗೋಪುರವೆಂಬುದು ಅವನಿಗೆ ಈಗ ಗೋಚರಿಸಿತು. ಕಾರ್ಯ ಪತ್ರಿ ಸಂಭ್ರಮಗಳಿಂದ ಕೂಡಿದ ವಿವಾಹ ಮಂಟಪವು ಶೋಕದ ಹಾಗು ಗೊಂದಲದ ಕೇಳಿರಂಗವಾಗಿ ಪರಿಣಮಿಸಿತು.

---

## ನಾಗರಾಜನು ರಾಜಧಾನಿಗೆ ಹಿಂದಿರುಗಿ ಬರುವನು.

ಕಾಂಚಳ ದೇಶದ ಗಡಿನಾಡು. ಎರಡೂ ಭಾಗಗಳ ದಂಡಾಳುಗಳು ಬೇರೆ ಬೇರೆಯಾಗಿ ತಮ್ಮ ತಮ್ಮ ಪಾಳಯಗಳನ್ನು ಬಿಟ್ಟಿರುತ್ತಾರೆ. ಈಗಿನ ಕಾಲದವರಂತೆ ಸಿಕ್ಕಿದಲ್ಲಿ ಶತ್ರುಗಳನ್ನು ಹೊಡೆದು ಯಮಲೋಕಕ್ಕೆ ಕಳುಹಿಸುವ ಹವ್ಯಾಸವು ಆ ಕಾಲದ ಯೋಧರಿಗಿರಲಿಲ್ಲ. ನಿರಾಯುಧನಾದ ಶತ್ರುವನ್ನು ಕೊಲ್ಲುವದು ರಣಶಾಸ್ತ್ರಕ್ಕೆ ನಿಷಿದ್ಧವೆಂತಲೂ ಅಧರ್ಮವೆಂತಲೂ ಆ ಕಾಲದ ಜನರು ತಿಳಿದಿದ್ದರು. ಸಮಬಲನೂ ಆಯುಧಧಾರಿಯೂ ಆದ ಶತ್ರುವನ್ನು ಎದುರಿಸುವದೇ ಪೌರುಷವೆಂದು ಆ ಕಾಲದ ಜನರು ತಿಳಿದಿದ್ದ

ಸ್ಪಾನಿಷ ಜನರು ದಕ್ಷಿಣ ಅಮೇರಿಕದ ಪೇರು ಜನಾಂಗವನ್ನು ಗೆದ್ದಾಗ, ಅವರು ಅಲ್ಲಿನ ನಿವಾಸಿಗಳಾದ ಇಂಕಾಸ್ ಜನರೊಡನೆ ಕಾಣಿಸಿದ ಕ್ರೂರತೆಗೂ ಅತ್ಯಾಚಾರಗಳಿಗೂ ಮೇರೆಯಿಲ್ಲವು. ಪುರಾತನ ಕಾಲದಲ್ಲಿ ಇಂಗ್ಲಂಡನ್ನು ಆಕ್ರಮಿಸಿದ ಸಾಕ್ಸನ್, ಡೇನಿಷ ಮೊದಲಾದ ಜನರು ಇಂಗ್ಲಂಡನ್ನು ಯಾವ ರೀತಿ ಸುಲಿದರೆಂಬುದು ಸರ್ವರಿಗೂ ವಿದಿತವಾದ ಸಂಗತಿಯಾದುದರಿಂದ ಅದನ್ನು ಇಲ್ಲಿ ಮತ್ತೆ ಹೇಳಬೇಕಾದುದಿಲ್ಲ. ಆಂಗ್ಲಭೂಮಿಯ ಸುಪ್ರಸಿದ್ಧ ನಾವಿಕನಾದ ಹೋವರ್ಡನು ನಿಗ್ರೋ ಜನಾಂಗದೊಡನೆ ಯಾವ ರೀತಿ ವರ್ತಿಸಿದನೆಂಬುದನ್ನು ಓದುವಾಗ ನಮಗೆ ರೋಮಾಂಚನವಾಗುತ್ತದೆ! ಅಷ್ಟೇ ಏಕೆ? ಈ ಇಪ್ಪತ್ತನೆಯ ಶತಮಾನದಲ್ಲಿ ಸಹ ಸುಲಿಗೆ ಮತ್ತು ಅತ್ಯಾಚಾರಗಳು ನಡೆಯುತ್ತಲೇ ಇವೆ; ಆದರೆ ಈ ರೀತಿಯ ಅತ್ಯಾಚಾರಗಳನ್ನು ನಿರೋಧಿಸಿ, ಪರಾಜಿತರಾದವರೂ ಮನುಷ್ಯರು; ಅವರ ಸಂಪತ್ತನ್ನು ಸುಲಿಯುವದು ಅನ್ಯಾಯವು; ಅವರ ವಿಚಾರಗಳಿಗೆ ಮನ್ನಣೆಯನ್ನು ನೀಡಬೇಕು, ಎಂಬಿತ್ಯಾದಿ ತತ್ವಗಳನ್ನು ಭದ್ರವಾಗಿ ಹಿಡಿದು ಅದರಂತೆ ವರ್ತಿಸಿದವರು ವಿಶ್ವದ ಇತಿಹಾಸದಲ್ಲಿ ಪ್ರಾಚೀನ ಭಾರತೀಯ ರಾಜ್ಯತಂತ್ರಜ್ಞರು ಮಾತ್ರವಾಗಿದ್ದಾರೆ! ಆ ಕಾಲದಲ್ಲಿ ಪ್ರಜೆಗಳಿಗೆ ಹಿಂಸೆಯಾಗದಂತೆ ಯೋಧರು ಬಹು ಜಾಗ್ರತೆಯನ್ನು ತೆಗೆದುಕೊಳ್ಳುತ್ತಲಿದ್ದರು. ಅದರ ಮೂಲಕ ಯಾರು ಬೇಕಾದರೂ ನಿಶ್ಚಿಂತೆಯಿಂದ ರಣರಂಗದಲ್ಲಿ ಸಂಚರಿಸಬಹುದಿತ್ತು. ಜನರು ದೂರದಲ್ಲಿ ನಿಂತು ಯುದ್ಧವನ್ನು ನೋಡಬಹುದಿತ್ತು.

ಈ ರೀತಿಯಲ್ಲಿಯೇ ಕುಂತಳ ಮತ್ತು ಲಾಟ ಸೈನ್ಯಗಳ ನಡುವೆ ಸಮರವು ನಡೆದಿತು. ಶತ್ರುಗಳು ಹಗಲುಹೊತ್ತು ಭಯಂಕರವಾಗಿ ಒಬ್ಬರನ್ನೊಬ್ಬರು ಕೊಲ್ಲುವುದಕ್ಕಾಗಿ ಕಾದಾಡುತ್ತಲಿರುವರು. ಒಬ್ಬನ ನೆತ್ತರವನ್ನು ಹೀರಲು ಇನ್ನೊಬ್ಬ ಯೋಧನು ಪ್ರಯತ್ನಿಸುತ್ತಲಿರುವನು; ಆದರೆ ಸಂಧ್ಯೆಯಾದರೆ ಆ ಹಗೆತನವಿಲ್ಲ. ಯುದ್ಧವನ್ನು ನಿಲ್ಲಿಸುವದಕ್ಕಾಗಿ ಕಹಳೆಯ ಸಪ್ಪಳವು ಕೇಳಿ ಬಂದರೆ ಯೋಧರು ತಮ್ಮ ತಮ್ಮ ಕುದುರೆಗಳಿಂದಿಳಿದು, ಶತ್ರುತೆಯನ್ನು ಮರೆತು ಗೆಳೆಯರಾಗುವರು; ಸ್ನೇಹದಿಂದ ಪರಸ್ಪರ ಮಾತಾಡುವರು. ಒಬ್ಬರ ಗಾಯಗಳನ್ನು ಇನ್ನೊಬ್ಬರಿಗೆ ತೋರಿಸಿ, ಅವುಗಳಿಂದ ಹರಿಯುತ್ತಿರುವ ರಕ್ತಸ್ರಾವವನ್ನು ನಿಲ್ಲಿಸಲು ಪರಸ್ಪರರು ಸಹಾಯವನ್ನು ಮಾಡುವರು ನಮಗೆ ಈ ಸಂಗತಿಯು ಆಶ್ಚರ್ಯಕರವಾಗಿ ತೋರಬಹುದು; ಆದರೆ ಆ ಕಾಲದ ಜನರು ತಮ್ಮ ಕರ್ತವ್ಯಗಳನ್ನು ಚೆನ್ನಾಗಿ ಅರಿತು, ಅದರಂತೆ ವರ್ತಿಸುತ್ತಲಿದ್ದರು. ಆದರ್ಶ ಸಾಧನೆಯಾಗಿದ್ದಿತು ಅವರ ಗುರಿಯು! ಸ್ವಾರ್ಥ

ಸಾಧನೆಯಾಗಿಗಲಿಲ್ಲ. ತಮ್ಮ ನಾಯಕನ ನಿರ್ದೇಶದಂತೆ ಹಗಲುಹೊತ್ತು ಎಗುರ ಸೈನ್ಯದವರೊಂದಿಗೆ ಅವರು ಘೋರವಾಗಿ ಹೋರಾಡುತ್ತಲಿದ್ದರು. ಯುದ್ಧದ ಸಮಯವು ಕಳೆದರೆ, ಹಗೆತನವನ್ನು ಮರೆತು ಸ್ನೇಹಪುರಸ್ಸರವಾಗಿ ಅವರು ವರ್ತಿಸುವರು. ಎಷ್ಟು ದಿವ್ಯವಾದ ಆದರ್ಶವು ಅಂದಿನ ಭಾರತೀಯರದು!

ಸಂಧ್ಯಾಸಮಯ! ಭಾಸ್ಕರನು ತನ್ನ ದೈನಂದಿನ ಪ್ರವಾಸವನ್ನು ಸಮಾಪ್ತಿಗೊಳಿಸಲು ಉದ್ಯುಕ್ತನಾಗಿರುವನನ್ನು ಕಂಡು, ಭಯಂಕರ ನಗರಿತ್ರಿಯನ್ನು ನಿಲ್ಲಿಸುವವರಿಗಾಗಿ ಎರಡೂ ಪಕ್ಷಗಳ ಸೈನ್ಯದಲ್ಲಿಯೂ ಭೇರಿಗಳ ನಿನಾದಗಳು ನಭೋಮಂಡಲವನ್ನು ಆವರಿಸಿದುವು. ಪರಸ್ಪರರನ್ನು ವಧಿಸಲು ಯತ್ನಿಸುತ್ತಿರುವ ಭಟರು ತಮ್ಮ ಕುದುರೆಗಳಿಂದಿಳಿದು ರಿಪುಭಟರ ಸಮೀಪಕ್ಕೆ ತೆರಳಿ ಹೀಗೆ ಹೇಳಿದರು:—"ಗೆಳೆಯಾ! ಈ ರಾತ್ರಿಯು ನಿನಗೆ ಸುಖಪ್ರದವಾಗಲಿ!" ಶತ್ರುಸೈನ್ಯದ ಭಟನಾದರೂ ಅಗೇ ಶಾಂತಸ್ವರದಲ್ಲಿ:—"ಸ್ನೇಹಿತಾ, ಕತ್ತಿಯಿಂದ ನಿನಗೆ ಭಯಂಕರ ಗಾಯಗಳಾಗಿರುತ್ತವೆ! ನನ್ನ ಪಾಳೆಯಕ್ಕೆ ಬಂದರೆ ಚಲೋ ಮಲಾಮನ್ನು ಕೊಡುವೆನು" ಎಂದನು. ಇದುವರೆಗೆ ಯಾರನ್ನು ಕೊಲ್ಲುವುದಕ್ಕಾಗಿ ನಿರಂತರ ಪ್ರಯತ್ನಿಸುತ್ತಲಿದ್ದನೋ, ಅವನ ಹೆಗಲಲ್ಲಿ ತೋಳನ್ನು ಹಾಕಿಕೊಂಡು ಸ್ನೇಹಪುರಸ್ಸರ ಮಾತಾಡುತ್ತ ಆ ಭಟನು ತನ್ನ ಪಾಳಯಕ್ಕೆ ತೆರಳಿ ತನ್ನ ಮಿತ್ರನಿಗೆ ಒಂದು ಮುಲಾಮು ಕೊಟ್ಟನು.

ಸಮರಾಂಗಣವನ್ನು ಪರಿತ್ಯಜಿಸಿ, ದಂಡಾಳುಗಳು ತಮ್ಮ ತಮ್ಮ ಪಾಳಯಗಳಿಗೆ ತೆರಳುತ್ತಿರಲು, ಕುಳಿಂದಸೈನ್ಯದ ದಂಡನಾಯಕನು ತನ್ನ ಧವಳ ವರ್ಣದ ಹಯವನ್ನು ಯುದ್ಧರಂಗದಿಂದ ಹಿಂದಿರುಗಿಸಿದನು ಅವನು ಹಿಂದಿರುಗುವಾಗ ಕುಂತಳದ ಸೈನಿಕರು ಅವನನ್ನು ಭಕ್ತಿಯಿಂದ ವಂದಿಸುತ್ತಲಿದ್ದರು. ಇದಕ್ಕೆ ಕಾರಣವು ಅಂದಿನ ಅವನ ಅದ್ವಿತೀಯ ಕಲಿತನವಾಗಿದ್ದಿತು. ಆ ದಿವಸ ಚಂದ್ರಹಾಸನಿಲ್ಲದಿದ್ದರೆ, ಕುಂತಳಸೈನ್ಯದವರು ಚೆಟರಿ ದಿಕ್ಪಾಲಾಗುತ್ತಿದ್ದರು. ಆ ಸಂದರ್ಭದಲ್ಲಿ ಚಂದ್ರಹಾಸನ ಅಸಾಮಾನ್ಯ ಧೈರ್ಯವಾಗಿದ್ದಿತು ಕುಂತಳಸೈನ್ಯವು ಹೊಸಹುರುಪನ್ನು ತಾಳಿ ಮುಂದೆ ಬರುವಂತೆ ಪ್ರೇರೇಪಿಸಿದುದು! ಆದರೆ ಅದು ಪ್ರಕೃತ ಕತೆಗೆ ಸಂಬಂಧಿಸಿದಲ್ಲದುದರಿಂದ ಅದನ್ನು ವಿವರಿಸಲು ನಾನು ಉದ್ಯುಕ್ತನಾಗುವದಿಲ್ಲ.

ಚಂದ್ರಹಾಸನು ತನ್ನ ಪಾಳಯಕ್ಕೆ ಹಿಂದಿರುಗಲು ಕುಂತಳಸೇನಾವಿಭಾಗದಿಂದ ಒಬ್ಬ ತರುಣನು ಬಂದು:-"ಕುಳಿಂದದ ಭಾವೀ ಮಾಂಡಲಿಕರೇ, ತಾವಿಂದು ಆ ಧೈರ್ಯವನ್ನು ಪ್ರದರ್ಶಿಸದಿದ್ದರೆ, ನಮ್ಮ ದಂಡು ಹಿಂಜರಿದು

ಸೋಲುತ್ತಿತ್ತು. ತಮ್ಮ ಪರಾಕ್ರಮವು ಕುಂತಳದ ಕೀರ್ತಿಯನ್ನುಳಿಸಿತು!' ಎಂದು ನುಡಿದನು

"ಭುವನವಿಕ್ರಮರೇ, ಅಷ್ಟು ಹೊಗಳಬೇಡಿ! ಸೈನಿಕರನ್ನು ಹುರಿದುಂಬಿಸಿ ಶತ್ರುಗಳ ಮೇಲೆ ಅವರು ನುಗ್ಗುವಂತೆ ಪ್ರೇರೇಪಿಸಲು ಹಲವು ಸಾರೆ ಸೇನಾಪತಿಗಳಿಂದು ಹೇಳಿಸಿಕೊಳ್ಳುವ ನಾವೇ ವ್ಯೂಹಮುಖದಲ್ಲಿ ನುಗ್ಗಿ, ಅವರಿಗೆ ದಾರಿಯನ್ನು ತೋರಿಸಬೇಕಾಗುತ್ತದೆ"

"ಹೌದು! ಸೇನಾಪತಿಗಳೆಂಬ ಅಭಿಮಾನಕ್ಕಿಂತಲೂ ಸಾಮಾನ್ಯ ಸೈನಿಕನ ಹಾಗೆ ಹೋರಾಡಬೇಕು!"

"ಅದು ಸರಿ. ಭುವನವಿಕ್ರಮರೆ! ನೂರುಪಾಲು ಮೇಲು! ಒಂದು ಸೇನೆಯ ಸೋಲು-ಗೆಲುವುಗಳು ಸೇನಾಪತಿಯನ್ನು ಅವಲಂಬಿಸಿರುತ್ತವೆ ಪ್ರತಿನಿಮಿಷದಲ್ಲಿಯೂ ಸೂಕ್ಷ್ಮದೃಷ್ಟಿಯಿಂದ ಸಮರದ ಗತಿಯನ್ನು ವೀಕ್ಷಿಸಿ, ಸೈನಿಕರಿಗೆ ನಿರ್ದೇಶಗಳನ್ನು ನೀಡುತ್ತಿರಬೇಕು"

"ಹೌದು ಇಂದಿನ ಪ್ರಯತ್ನವು ಅರ್ಧ ವಿಜಯವನ್ನು ಸಂಪಾದಿಸಿದಂತೆಯೇ! ಲಾಟರ ಪ್ರಧಾನಸೇನಾವಿಭಾಗವಿಂದು ಚೂರ್ಣೀಕೃತವಾಗಿ ಹೋಗಿದೆ"

"ಆದರೂ ನಾವು ಶಿಥಿಲತೆಯನ್ನು ತೋರಿಸಬಾರದು; ನಾಳೆಯ ಕದನವನ್ನು ಇಂದಿಗಿಂತಲೂ ಭಯಂಕರವಾಗಿ ಮುಂದುವರಿಸಬೇಕು."

"ಹೌದು; ಈ ದಿನ ನನ್ನ ಗೂಡಾರದಲ್ಲಿ ಚಿಕ್ಕದೊಂದು ಔತನವಿದೆ; ತಾವು ಅದಕ್ಕೆ ಬರಬೇಕೆಂಬುದೇ ನನ್ನ ಬಿನ್ನಹ!"

"ಅದೇನು ಅಷ್ಟು ವಿಶೇಷವು? ಯುದ್ಧರಂಗದಲ್ಲಿಯೂ ಔತನವೇ?"

"ಹೆಚ್ಚಿನದೇನೂ ಅಲ್ಲ; ನನ್ನ ಮಡದಿಯ ಜನ್ಮನಕ್ಷತ್ರ ನಾನಿಂದು ಕಾದುತ್ತಿದ್ದರೂ, ಆ ಶುಭ ದಿನವನ್ನು ಉಲ್ಲಾಸದಲ್ಲಿ ವಿನಿಯೋಗಿಸಬೇಕೆಂದಿರುವುದು ಸ್ವಾಭಾವಿಕವಲ್ಲವೇ? ತಾವು ವಿವಾಹಿತರಲ್ಲದುದರಿಂದ ಇದರ ಮಹತ್ವವನ್ನು ತಾವು ತಿಳಿದಿರಲಿಕ್ಕಿಲ್ಲ"

"ನಾನು ತಿಳಿಯದಿದ್ದರೂ, ತಮ್ಮ ಪತ್ನಿಯ ಜನ್ಮ ದಿನವು ಒಂದು ವಿಶೇಷ ದಿನವಾಗಿದೆ ಎಂದು ಬಗೆಯುತ್ತೇನೆ"

"ಕದನವಾದುದರಿಂದ ವಿಶೇಷ ಆಡಂಬರದಲ್ಲಿ ಆಚರಿಸಲು ನಿವೃತ್ತಿಯಿಲ್ಲ; ತಮ್ಮಂಥ ನಾಲ್ಕು ಮಂದಿ ಗೆಳೆಯರನ್ನು ಸತ್ಕರಿಸಬೇಕೆಂದಿರುವೆನು. ಹಾಗೆಯೇ ಪಂಡಿತರಿಗೆ ಸ್ವಲ್ಪ ಮಿಠಾಯಿಯನ್ನೂ ಹಂಚಬೇಕೆಂದಿರುವೆನು. ತಾವು ಬರಬೇಕು; ತಿಳಿಯಿತೇ?"

"ಹಾಗೆಯೇ ಆಗಲಿ!"

“ತಮ್ಮ ಗೆಳೆಯರನ್ನು ಕರೆದುಕೊಂಡು ಬರಬೇಕು. ಏಕೆ ಮಾಂಡಲಿಕರೆ? ಅವರು ತಮ್ಮ ಮುಖವನ್ನು ರಣಾಂಗಣಕ್ಕೆ ತೋರಿಸಲಿಲ್ಲವಲ್ಲ!” ಎಂದನು ಭುವನವಿಕ್ರಮನು ವಿಸ್ಮಯಭರಿತನಾಗಿ.

“ಅವರ ಕರವು ಶಸ್ತ್ರವನ್ನು ಹಿಡಿಯತಕ್ಕದಲ್ಲ. ರಕ್ತದ ನದಿಯನ್ನು ನೋಡಿ ಸಹಿಸುವ ಮನಸ್ಸಲ್ಲ ಅವರದು!”

“ಹಾಗಾದರೆ ಅವರು ಏಕೆ ಕಾಳಗಕ್ಕೆ ಬಂದರು?”

“ನನ್ನ ನಿರ್ಬಂಧಕ್ಕೆ. ಅವರು ಎಷ್ಟು ರಣಭೀರುಗಳಾಗಿರುವರೋ, ಅಷ್ಟೇ ಚಾಣಾಕ್ಷರೂ ಬುದ್ಧಿಶಾಲಿಗಳೂ ಇರುವರು. ನಿಜವಾಗಿ ಹೇಳುವದಾದರೆ, ಒಂದು ದೇಶದ ಅಮಾತ್ಯರಾಗುವ ಯೋಗ್ಯತೆಯು ಅವರಿಗಿದೆ!”

“ಅಮಾತ್ಯನಂದನನಿಗಿಂತಲೂ ಬುದ್ಧಿಶಾಲಿಗಳೆ?”

“ಸಂಶಯವಿಲ್ಲ; ಕೆಲವು ದಿನಗಳಲ್ಲಿಯೇ ಯಾರ ಶ್ರೈಷ್ಠ್ಯವೆಂದು ನಿರ್ಧರಿಸುವ ಕಾಲವು ಪ್ರಾಪ್ತವಾಗಬಹುದು.”

“ಅದೇನು, ಆ ರೀತಿ ಊಹಿಸುತ್ತಿರುವಿರಿ?”

“ಏನೂ ಇಲ್ಲ; ಈ ಇಬ್ಬರು ತಂತ್ರಶಾಲಿಗಳ ಒಂದು ಬೌದ್ಧಿಕ ಕದನವು ನಡೆದರೆ, ಅದು ನೋಡಲು ಸೊಗಸಾಗಿರಬಹುದು. ಇದನ್ನು ವಿಚಾರಿಸಿ ನುಡಿದೆನಷ್ಟೆ!”

“ಈ ರಾತ್ರಿ ನನ್ನ ಗೂಡಾರಕ್ಕೆ ಬರಬೇಕು ತಿಳಿಯಿತೇ?”

“ನಿಶ್ಚಯವಾಗಿಯೂ.”

ತನ್ನ ಗೆಳೆಯನನ್ನು ಬೀಳ್ಕೊಂಡು ಚಂದ್ರಹಾಸನು ತನ್ನ ಗೂಡಾರಕ್ಕೆ ತೆರಳಿದನು. ಅವನು ಅಲ್ಲಿ ನೋಡಲು, ನಾಗರಾಜನು ಒಂದು ಹಾಸಿಗೆಯಮೇಲೆ ಮಲಗಿ ವಾಲ್ಮೀಕಿ ರಾಮಾಯಣವನ್ನು ಪಠಿಸುತ್ತಲಿದ್ದನು. ಅವನ ಅಗಲವಾದ ಮುಖಭಾವವು ಅತ್ಯಂತ ಪ್ರಶಾಂತವಾಗಿದ್ದಿತು. ಭಯಂಕರವಾದ ಯುದ್ಧರಂಗದಲ್ಲಿ ತಾನು ವಾಸಿಸುವದರಿಂದ, ಸ್ವಾಭಾವಿಕವಾಗಿ ಉಂಟಾಗುವ ಕಠೋರತೆಯಾಗಲೀ, ಕೋಪ-ದ್ವೇಷಗಳಾಗಲೀ ಅವನಲ್ಲಿರಲಿಲ್ಲ. ತನ್ನ ಮಂದಿರದಲ್ಲಿ ಕುಳಿತು ಕಾಲಹರಣಕ್ಕಾಗಿ ಗ್ರಂಥ ಪಾರಾಯಣದಲ್ಲಿ ನಿರತನಾದ ಗೃಹಸ್ಥನ ಮುಖದಲ್ಲಿ ಹೊಳೆಯುತ್ತಿರುವ ಉದಾಸೀನತೆಯು ನಾಗರಾಜನಲ್ಲಿ ತುಂಬಿದ್ದಿತು.

ಚಂದ್ರಹಾಸನು ತನ್ನ ದಿನದ ಪರಿಶ್ರಮದಿಂದ ಅತ್ಯಂತ ಬಳಲಿದವನಾಗಿದ್ದುದರಿಂದ ‘ಉಸ್ಸೆ’ಂದು ಹೇಳುತ್ತ ತನ್ನ ಹಾಸಿಗೆಯ ಮೇಲೆ ಹೋಗಿ ಬಿದ್ದನು. ತನ್ನ ಸ್ವಾಮಿಯು ಬಂದುದನ್ನು ಕಂಡು, ಒಬ್ಬ ಭೃತ್ಯನು ಬಂದು

ಚಂದ್ರಹಾಸನ ಕರದಲ್ಲಿದ್ದ ಖಡ್ಗ, ಭಲ್ಲೆ ಮೊದಲಾದ ಆಯುಧಗಳನ್ನು ತೆಗೆದುಕೊಂಡನು. ಗೂಡಾರದ ಮಧ್ಯದಲ್ಲಿ ಒಂದು ಹಣತೆಯು ಉರಿಯುತ್ತಿದ್ದಿತು. ಗೂಡಾರದ ಒಂದು ಮೂಲೆಯಲ್ಲಿ ಕೆಲವು ಪುಸ್ತಕಗಳಿದ್ದರೆ, ಇನ್ನೊಂದು ಮೂಲೆಯಲ್ಲಿ ಈಟಿ, ಭಲ್ಲೆ, ಖಡ್ಗ ಮೊದಲಾದ ಆಯುಧಗಳು ಬಿದ್ದಿದ್ದುವು ಇನ್ನೊಂದು ಮೂಲೆಯಲ್ಲಿ ನೆತ್ತರಿನ ಕಲೆಗಳಿಂದ ತುಂಬಿದ ವಸ್ತ್ರಗಳು ನೋಡುವವರ ಮನಸ್ಸುಗಳನ್ನು ತಲ್ಲಣಗೊಳಿಸುತ್ತಲಿದ್ದುವು.

ಚಂದ್ರಹಾಸನು ಬಂದಿರುವುದನ್ನು ಕಂಡು ನಾಗರಾಜನು ಓದುತ್ತಿರುವ ಪುಸ್ತಕವನ್ನು ಒಂದು ಬದಿಗಿರಿಸಿ, ಮಲಗಿದಲ್ಲಿಂದ ಎದ್ದು ಕುಳಿತು:—"ಈ ಭಯಂಕರ ಸ್ಮಶಾನದಲ್ಲಿ ನಾವು ಇನ್ನೆಷ್ಟು ದಿನ ಜೀವಿಸಬೇಕು? ಇಲ್ಲಿನ ವಿಸ್ತ್ರಮಾನಗಳು ನನ್ನನ್ನು ಕೊಲ್ಲುತ್ತಲಿರುವವು. ಈ ನೇತ್ರಗಳಿಂದ ಈ ನರವಧೆಯನ್ನು ನೋಡಲಾಗುವದಿಲ್ಲ!"

ಒಂದು ಮಂದಹಾಸದೊಡನೆ ಚಂದ್ರಹಾಸನು: "ವಿಜಯವು ನಮ್ಮ ಕರಗತವಾಗುವ ವರೆಗೆ!"

"ಎಷ್ಟು ಭಯಂಕರ! ಒಬ್ಬ ಮನುಷ್ಯನು ತನ್ನ ಸಹೋದರ ಮಾನವನ ನೆತ್ತರಿನಲ್ಲಿ ಸ್ನಾನ ಮಾಡುತ್ತಿರುವದು ಎಷು ಹೃದಯಭೇದಕವು? ಈ ಜನರಿಗೆ ಯಾರಿಗೂ ಹೃದಯಗಳಿಲ್ಲವೆ? ಪ್ರತಿದಿನವೂ ತಮ್ಮ ಕರಗಳಿಂದ ನರಹತ್ಯೆಯನ್ನು ಮಾಡುತ್ತಿರುವರಲ್ಲ!"

"ಆ ದಿನ ಕರ್ಮಯೋಗದ ಮಹತ್ವವನ್ನು ಕುರಿತು ದೀರ್ಘವಾದ ಉಪದೇಶಗಳನ್ನು ನೀಡಿದ ನೀನು, ಈಗ ನೆತ್ತರಿನ ಕಾಲುವೆಯನ್ನು ಕಂಡು ಅಳುತುವುದೇಕೆ? ನಮ್ಮ ಧಮನಿಗಳಲ್ಲಿರುವ ನೆತ್ತರನ್ನು ಹರಿಸದಿದ್ದರೆ, ಕುಂತಳ ಸಿಂಹಾಸನವು ಹೇಗೆ ನೆಲೆನಿಲ್ಲುವದು?"

"ನಾನು ಕರ್ಮಯೋಗದ ದಾರಿಯನ್ನು ಅರಿತಿರುವೆನು; ಆದರೆ ನರಹತ್ಯೆಯು ಎಂದಿಗೂ ಕರ್ಮಯೋಗದ ದಾರಿಯಾಗಲಾರದು. ಅದು ನರಕಕ್ಕೆ ತೆರಳಲಿರುವ ಹೆಬ್ಬಾಗಿಲು! ತನ್ನ ಎದುರಿಗೆ ಸಿಗುವ ಮಾನವನನ್ನು ವಧಿಸುವುದರಿಂದ ಸಿಗಬಹುದಾದ ವಿಜಯವು ಎಷ್ಟರಮಟ್ಟಿಗೆ ಶಾಶ್ವತವಾದುದು? ರಕ್ತದಿಂದ ವಿರಚಿತವಾದ ಗೋಪುರಗಳು ಇಂದಿಲ್ಲದಿದ್ದರೆ ನಾಳೆಯಾದರೂ ತಮ್ಮ ಶಿರಗಳನ್ನು ಪ್ರತಿಕೂಲ ಶಕ್ತಿಗಳಿಗೆ ಬಾಗಿಸಬೇಕಾಗಿ ಬರುವುದು."

"ಹಾಗಾದರೆ ನಮ್ಮ ನಾಡನ್ನು, ನಮ್ಮ ಜನರನ್ನು ಶತ್ರುಗಳ ಪೀಡನೆಯಿಂದ ರಕ್ಷಿಸುವುದು ಹೇಗೆ?"

“ನಿಮ್ಮ ನಾಡನ್ನು ರಕ್ಷಿಸುವದಕ್ಕೆಂದು ನುಡಿದು, ಮಾನವನು ಅನ್ಯರ ಮೇಲೆ ದಾಳಿಗಳನ್ನು ನಡೆಯಿಸಿ ಅತ್ಯಾಚಾರಗಳಲ್ಲಿ ನಿರತನಾಗುತ್ತಾನೆ.”

“ನಾಗರಾಜ! ಈಗೀಗ ನಿನ್ನ ಮಾತುಗಳೂ ವಿಚಾರಗಳೂ ವಿಚಿತ್ರ ಬಣ್ಣವನ್ನು ತಾಳುತ್ತಲಿವೆ! ಆದರ್ಶ, ನಿಷ್ಕಾಮಕರ್ಮ ಇವುಗಳೆಲ್ಲವೂ ಎತ್ತ ಹೋದವು? ನಿನ್ನ ಸ್ಥಿರವಾದ ಬುದ್ಧಿಯೇಕೆ ಲೋಪವಾಯಿತು?” ಎಂದು ಆಶ್ಚರ್ಯಭರಿತನಾದ ಚಂದ್ರಹಾಸನು ನಾಗರಾಜನ ದೈನ್ಯಭಾವದಿಂದ ಕೂಡಿದ ಮುಖವನ್ನು ವೀಕ್ಷಿಸುತ್ತ ನುಡಿದನು.

“ಗೆಳೆಯಾ, ಚಂದ್ರಹಾಸಾ, ಈ ಭಯಂಕರ ನರಹತ್ಯೆಯನ್ನು ನೋಡಿ ನಾನು ಬೇಸತ್ತಿರುವದರಿಂದ ಎಲ್ಲರೂ ನನ್ನನ್ನು ಒಬ್ಬ ಹೇಡಿಯೆಂಬುದಾಗಿ ವಿಚಾರಿಸುತ್ತಿರಬಹುದು. ಆ ಪ್ರಕಾರ ನೀನೂ ಒಂದು ವೇಳೆ ನೆನೆದಿರಬಹುದು; ಆದರೆ ನಾನು ಮನುಷ್ಯನ ಈ ಸಂಹಾರಪ್ರೇಮವನ್ನು ನೋಡಲಾರೆನು. ತನ್ನ ಶಾರೀರಿಕ ಬಲದಿಂದ ಅನ್ಯರ ಪ್ರಾಣವನ್ನು ಹರಿಸುವುದನ್ನು ನಾನು ಪರಾಕ್ರಮವೆಂದೋ ಶೌರ್ಯವೆಂದೋ ನುಡಿಯುವದಿಲ್ಲ. ಅದನ್ನು ನಾನು ಮನುಷ್ಯನ ರಾಕ್ಷಸಸ್ವಭಾವವೆಂದು ಹೇಳುವೆನು.”

“[illegible] ನಿನ್ನ ತತ್ವಶಾಸ್ತ್ರವನ್ನು ಸುರಲು!” ಎಂದು ಮಂದಹಾಸಗೈದನು ಚಂದ್ರಹಾಸನು: “ನಿನ್ನ ಅಭಿಪ್ರಾಯದಂತೆ ನಾವೆಲ್ಲರೂ ರಾಕ್ಷಸರು, ಮಿತ್ರ! ಜನಪಾಲನೆ, ಸಿಂಹಾಸನದ ರಕ್ಷಣೆ ಇವುಗಳು ಮಹದಪರಾಧಗಳಲ್ಲವೆ!

“[illegible] ಸಿದ್ಧಾಂತದ ಹೆಗ್ಗುರುತು! ನಾನೊಂದು ಸಂಗತಿಯನ್ನು [illegible] ಅದರ ತಾತ್ಪರ್ಯವನ್ನು [illegible]ವಾಗಿ ತಿಳಿದುಕೊಳ್ಳುವ [illegible] ತಿಳಿಗೇಡಿತನವಾಗಿದೆ!”

“ಹಾಗಾದರೆ, ನಿನ್ನ ಸಿದ್ಧಾಂತವು ಯಾವುದು?”

“ಕರ್ಮಯೋಗವೆಂದರೆ ಏನೆಂಬುದು ಕೂಡ ಈ ಜನರಿಗೆ ತಿಳಿಯದು. ಮನುಷ್ಯನ ಕೊರಳನ್ನು ಕತ್ತರಿಸುವದು ಸಹ ಕರ್ಮಸಾಧನೆಯೆಂದು ನೆನೆಯುತ್ತಾರೆ! ನಿಷ್ಕಾಮಕರ್ಮವು ಎಂದಿಗೂ ಇನ್ನೊಬ್ಬನಿಗೆ ಪೀಡನೆಯಾಗದು. ಸ್ವಾರ್ಥೋದ್ದೇಶವಿಲ್ಲದ ಕರ್ಮಾನುಷ್ಠಾನದಿಂದ ಅನ್ಯರಿಗೆ ಕೇಡುಕು ಆಗಲಾರದು. ಅದು ಸರ್ವರಿಗೂ ಹಿತವನ್ನು ತೋರುವ ಮಾರ್ಗವಾಗಿದೆ. ಜನರು ಈ ತತ್ವವನ್ನು ಮನನ ಮಾಡಿದ್ದರೆ ಈ ಹತ್ಯಾಕಾಂಡಕ್ಕೆ ಅವಕಾಶವಿರಲಿಲ್ಲ.”

“ಬೇಷ್! ಒಂದು ಸಿದ್ಧಾಂತಕ್ಕಿಂತಲೂ ಇನ್ನೊಂದು ವಿಚಿತ್ರವು!

ಉತ್ಕೃಷ್ಟವಾದ ಧ್ಯೇಯಗಳನ್ನು ತನ್ನ ಮುಂದಿಟ್ಟುಕೊಂಡು ಲೋಕದ ಜನತೆಯು ಪ್ರಯತ್ನಿಸುತ್ತಿದೆಯೆಂದು ನೀನು ಬಗೆದಿರುವೆಯಾ?"

"ಇಲ್ಲ; ಆದುದರಿಂದಲೇ ಮನುಷ್ಯನು ಇಂಥ ಭಯಂಕರ ವಿಪತ್ತುಗಳನ್ನು ಆಗಾಗ ಅನುಭವಿಸಬೇಕಾಗಿ ಬರುತ್ತಿರುವದು. ಒಬ್ಬನು ಗೈದ ಪಾಪದ ಫಲವನ್ನು ಮೂರು ಮಂದಿ ಉಣ್ಣಬೇಕಾಗಿ ಬರುತ್ತದೆ. ನಾನು ಹೇಳುತ್ತಿರುವ ಕರ್ಮಯೋಗವನ್ನು ಮಾನವರೆಲ್ಲರೂ ಅರಿತು ಅದನ್ನು ಅನುಷ್ಠಾನ ರೂಪಕ್ಕೆ ಕೊಂಡು ಬಂದರೆ-ಈಗ ಸಂಭವಿಸುತ್ತಿರುವ ಸಕಲ ಗಂಡಾಂತರಗಳ ಮೂಲವು 'ತಾನು' 'ತನಗಾಗಿ' ಎಂಬುದಾಗಿದೆ. ಈ 'ತಾನು' ಸ್ವರೂಪವು ಕರ್ಮಯೋಗದಲ್ಲಿ ಇಲ್ಲದಿರುವುದರಿಂದ-ಗಂಡಾಂತರಗಳಿಗೆ ಅವಕಾಶವಿಲ್ಲ. ಮನುಷ್ಯನು ಮಾಡುತ್ತಿರುವದೆಲ್ಲವೂ ಈಶ್ವರಾರಾಧನೆಯ ರೂಪವು! ಎಲ್ಲವೂ ಆ ವಿಶ್ವವ್ಯಾಪಿಯ ಸಂತೃಪ್ತಿಗಾಗಿ!"

"ಹೀಗಿರುವ ಒಂದು ಮನೋಭಾವನೆಯನ್ನು ಜನತೆಯು ಕೈಗೊಳ್ಳುವುದೆಂದು ಬಗೆಯುವದು ಹೇಗೆ? ತನ್ನ ಸುಖವನ್ನು ಹೆಚ್ಚಿಸುವುದಕ್ಕಾಗಿ ಮನುಷ್ಯನು ಉದ್ಯಮಿಸುತ್ತಾನೆ! ಪ್ರತಿಯೊಬ್ಬನೂ ಪ್ರಯತ್ನಿಸುತ್ತಿರುವುದು ತನ್ನ ಮಡದಿಮಕ್ಕಳು, ತನ್ನ ಕುಟುಂಬದ ಸುಖವನ್ನು ಆಗ್ರಹಿಸಿಯಾಗಿರುತ್ತದೆ! ಅದು ಮನುಷ್ಯನ ಸ್ವಾಭಾವಿಕವಾದ ಗುಣವು. ಹೀಗಿರಲು, ನಿನ್ನ ಸಿದ್ಧಾಂತವನ್ನು ಅಸಾಧ್ಯಮನಃಶಕ್ತಿಯುಳ್ಳ ಯೋಗಿಗಳಲ್ಲದೆ ಇತರರು ಸ್ವೀಕರಿಸುವುದು ಕಷ್ಟವು! ಎಲ್ಲರೂ ಯೋಗಿಗಳಾಗುವದು ಅಸಾಧ್ಯಕೆಲಸವಾಗಿದೆ!"

"ಅಸಾಧ್ಯವೆಂಬುದು ಬಲಹೀನರ ವೇದ ಮಂತ್ರವು. ಸಕಲ ಚೈತನ್ಯಗಳೂ ಮನುಷ್ಯನಲ್ಲಿ ಅಡಗಿವೆ! ಅವುಗಳನ್ನು ಶೋಧಿಸಿ ಹೊರಗೆ ಬೆಳಕಿಗೆ ತರಬೇಕಾಗಿದೆ ಮಾತ್ರ. ಒಬ್ಬ ಮನುಷ್ಯನು ಹೆಂಡವನ್ನು ಕುಡಿದು ಹುಚ್ಚನಂತೆ ವರ್ತಿಸಿದರೆ, ಅದು ಅವನ ಸ್ವಾಭಾವಿಕ ಗುಣವಾಗಿದೆ ಎಂದು ನಿರೂಪಿಸುವದು ಅವಿವೇಕವು! ಲೋಕದ ಜನರು "ತಾನು-ಪರರು" ಎಂಬ ಹೆಂಡವನ್ನು ಕುಡಿದು, ಆ ಬುದ್ಧಿವಿನಾಶಕ ವಸ್ತುವಿನ ಶಕ್ತಿಯಿಂದ ಭಯಂಕರ ಕೃತ್ಯಗಳನ್ನು ಎಸಗಿದರೆ, ಅವು ಅವನ ಸ್ವಾಭಾವಿಕ ಗುಣಗಳೆಂದು ನಿರ್ಧರಿಸುವದು ಹಾಸ್ಯಾಸ್ಪದವಾದ ಸಂಗತಿಯು! ಮಾನವನ ಬದುಕಿನ ಗುರಿಯು ಸುಖವಲ್ಲ! ತಾನು ಸುಖಪಡುವದಕ್ಕಾಗಿ ಜೀವಿಸುತ್ತೇನೆ, ಎಂದು ಅವನು ಭ್ರಮಿಸುತ್ತಿರುವದರಿಂದಲೇ ಮೇಲಿಂದ ಮೇಲೆ ಅವನಿಗೆ ವಿಪತ್ತುಗಳು ಬಂದೊದಗುತ್ತಿರುವವು! ಲೋಕದಲ್ಲಿ ಸುಖ-ದುಃಖಗಳೆಂಬುವು ಒಂದು ವಸ್ತುವಿನ ಎರಡು ರೂಪಗಳಾಗಿರುತ್ತವೆ; ಹಗಲು-ರಾತ್ರಿಗಳಿದ್ದ ಹಾಗೆ. ಹಗಲು ಕಳೆದರೆ ರಾತ್ರಿ

ಬರುವದು ಹೇಗೆ ಸ್ವಾಭಾವಿಕವೋ, ಹಾಗೆಯೇ ಸುಖದ ಅನಂತರ ದುಃಖ ಸಂಪ್ರಾಪ್ತವಾಗುವದು. ಇದನ್ನು ನಿವಾರಿಸಲು ಅಸಾಧ್ಯವು. ಸುಖವನ್ನು ಬಯಸುತ್ತಿರುವ ಮನುಷ್ಯನ ಎದೆಯನ್ನು ದುಃಖವು ತಾನು ಆಮಂತ್ರಿತ ವಾಗದಿದ್ದರೂ ತಾನಾಗಿಯೇ ಬಂದು ಪೀಡಿಸುವದು. ಆದುದರಿಂದ ಮಾನ ವನು ಈ ದುಃಖದಿಂದ ವಿಮುಕ್ತನಾಗಬೇಕಾದರೆ, ಸುಖದಲ್ಲಿ ತನಗಿರುವ ಹಂಬಲವನ್ನು ತ್ಯಜಿಸಬೇಕಾಗಿದೆ. ಗೆಲುವನ್ನು ಬಯಸುತ್ತಿರುವ ಜೀವಿಯು ಸೋಲಿನ ದುಃಖವನ್ನು ಅನುಭವಿಸಬೇಕಾಗಿ ಬರುತ್ತದೆ. ಇದರ ನಿವಾ ರಣೆಯು ಗೆಲುವನ್ನು ಅಗ್ರಹಿಸದೆ, ಕೇವಲ ಪ್ರಯತ್ನಕ್ಕೆ ಬೇಕಾಗಿ ಉದ್ಯಮಿ ಸುವುದಾಗಿದೆ.''

ನಾಗರಾಜನ ಈ ಸಿದ್ಧಾಂತದಲ್ಲಿ ಎಷ್ಟರಮಟ್ಟಿಗೆ ವಾಸ್ತವಾಂಶವು ಇದೆ ಯೆಂದು ಹೇಳಲು ಬರುವಂತಿಲ್ಲ. ನಮ್ಮ ಬಾಳಿನ ದೈನಂದಿನ ಸಂಭವ ಗಳನ್ನು ಕುರಿತು ಪರ್ಯಾಲೋಚಿಸಿದರೆ, ಅವನ ವಾದದಲ್ಲಿ ಕೆಲವು ಮಟ್ಟಿಗೆ ವಾಸ್ತವಾಂಶವಿದೆ ಎಂಬುದು ಹೊಳೆಯುತ್ತಿದೆ. ಸುಖವನ್ನು ಬಯಸಿ ನಾವು ಪ್ರಯತ್ನಿಸುತ್ತಿರುವಾಗ, ಆ ಪ್ರಯತ್ನಗಳು ವಿಫಲವಾಗಿ ಹೋದರೆ, ನಾವು ದುಃಖಿಸಬೇಕಾಗಿ ಬರುವದು ಸ್ವಾಭಾವಿಕವಾಗಿದೆ. ಸುಖದ ಬಯಕೆಯನ್ನು ತ್ಯಜಿಸಿ ನಾವು ಪ್ರಯತ್ನಿಸಿದರೆ ಮಾತ್ರ ದುಃಖದ ಸಂಕಟವನ್ನು ಅನುಭವಿಸ ಬೇಕಾಗಿ ಬರುವುದಿಲ್ಲವೆಂದು ನನ್ನ ಊಹನೆಯು!

ಗೆಳೆಯರಿಬ್ಬರೂ ಈ ರೀತಿ ವಾದ-ವಿವಾದಗಳಲ್ಲಿ ನಿರತರಾಗಿರಲು ಭೃತ್ಯ ನೊಬ್ಬನು ಹೊರಗಿನಿಂದ ಬಂದನು. ಚಂದ್ರಹಾಸನು ಅವನನ್ನು ಕುರಿತು: ''ಯಾರಯ್ಯಾ ನೀನು?'' ಎಂದು ಪ್ರಶ್ನಿಸಿದನು.

''ಭುವನವಿಕ್ರಮ ಪ್ರಭುಗಳ ದಾಸನು; ತಮ್ಮ ಆಗಮನವನ್ನು ಅವರು ನಿರೀಕ್ಷಿಸುತ್ತಲಿರುವರು ತಾವು ದಯಮಾಡಿಸಬೇಕು.''

''ಈಗಲೇ ಬರುವೆನೆಂದು ಹೇಳು.''

''ಹಾಗೆಯೇ ಆಗಲಿ ಮಹಾಪ್ರಭು.''

ಭೃತ್ಯನು ಹೊರಟು ಹೋದನು. ಚಂದ್ರಹಾಸನು ತನ್ನ ಹಾಸಿಗೆ ಯನ್ನು ಬಿಟ್ಟೇಳುತ್ತ ನಾಗರಾಜನೊಡನೆ ಹೇಳಿದನು:—''ನಿನ್ನ ಸಿದ್ಧಾಂತ ಗಳನ್ನು ಸಾಕುಮಾಡು. ಒಂದು ಔತಸಕ್ಕೆ ಹೊರಡಲಿಕ್ಕೆ ಬೇಕು ನೋಡು!''

''ಯಾವ ಔತನವು ಅದು?''

''ಈ ದಿನ ಭುವನವಿಕ್ರಮರ ಮಡದಿಯ ಜನ್ಮ ನಕ್ಷತ್ರವಿರುವದಂತೆ!''

''ನನ್ನನ್ನೂ ಆಮಂತ್ರಿಸಿರುವರೇ?''

"ಹೌದು. ಏನಯ್ಯಾ, ಅಷ್ಟು ಸಂಕೋಚ?"

"ಅವರೆಲ್ಲರೂ ನಾನೊಬ್ಬ ಭೀರುವೆಂಬುದಾಗಿ ಬಗೆದಿದ್ದಾರೆ. ನನ್ನನ್ನು ನೋಡಿದೊಡನೆಯೇ ಪರಿಹಾಸಕ್ಕೆ ಪ್ರಾರಂಭಿಸುತ್ತಾರೆ."

"ಅದಕ್ಕೇನಯ್ಯಾ ಇಷ್ಟು ಭಯ? ನನ್ನೊಡನೆ ಬಾ!"

"ನಾನು ಬರಬೇಕೆಂಬುದೇ ನಿನ್ನ ಅಭಿಮತವಾಗಿದ್ದರೆ ಬರುವೆನು."

ಚಂದ್ರಹಾಸನು ನೆತ್ತರಿನಿಂದ ನೆನೆದುಹೋಗಿದ್ದ ತನ್ನ ಪೋಷಾಕುಗಳನ್ನು ತ್ಯಜಿಸಿದನು. ಅವನು ಹೊಸದಾದ ಶುಭ್ರ ವಸ್ತ್ರಗಳಿಂದ ತನ್ನ ಶರೀರವನ್ನು ಆಚ್ಛಾದಿಸಿಕೊಂಡು ನಂತರ ಹೊರಟನು; ನಾಗರಾಜನೂ ಅವನನ್ನು ಹಿಂಬಾಲಿಸಿದನು.

ಭಯಂಕರವಾದ ರಣರಂಗದಲ್ಲಿನ ಆ ಇರುಳಿನಲ್ಲಿ ಕೆಲವು ಶೃಗಾಲಗಳು ಕೂಗುತ್ತಿರುವ ಸಪ್ಪಳಗಳಲ್ಲದೆ, ಬೇರೆ ಯಾವುದೂ ಅಲ್ಲಿನ ಶಾಂತಿಯ ವಾತಾವರಣವನ್ನು ಭಂಗಪಡಿಸುತ್ತಿರಲಿಲ್ಲ. ಚಂದ್ರಹಾಸನು ಪೌರುಷವನ್ನವಲಂಬಿಸಿ ಮುಂದೆ ನಡೆಯುತ್ತಲಿದ್ದನು. ಹಿಂದೆ ತನ್ನ ವಿಚಾರಗಳಲ್ಲಿ ಮುಳುಗಿದ ನಾಗರಾಜನು ತನ್ನ ಅಡಿಗಳನ್ನು ಇಡುತ್ತಿದ್ದನು. ಎದುರಿಗೆ ನಿಂತಿರುವ ಭಯಂಕರವಾದ ರಣರಂಗವು ನೆನಪಿಗೆ ಬರಲು, ಅವನು ರೋಮಾಂಚನವನ್ನು ಹೊಂದುತ್ತಲಿದ್ದನು. ಅವನು ಈ ನರಹತ್ಯೆಯಿಲ್ಲದೆ ಮಾನವನಿಗೆ ಜೀವಿಸಲು ಸಾಧ್ಯವಿಲ್ಲವೇ? ಎಂದು ತನ್ನೊಳಗೆ ತಾನೇ ನುಡಿದುಕೊಂಡನು.

ಅವರು ಭುವನವಿಕ್ರಮನ ಗುಡಾರಕ್ಕೆ ತಲುಪಿದರು. ಸೇನಾಪತಿಯು ಆದರದಿಂದ ಉಚಿತ ರೀತಿಯಲ್ಲಿ ಅವರನ್ನು ಸತ್ಕರಿಸಿದನು. ಭುವನವಿಕ್ರಮನ ಗೂಡಾರದಲ್ಲಿ ಕುಂತಳ ಸೇನೆಯ ಪ್ರಮುಖರೆಲ್ಲರೂ ನೆರೆದಿದ್ದರು. ಕೆಲವು ತಾಸುಗಳ ಹಿಂದೆ ತಾವು ಮಾಡುತ್ತಿದ್ದ ಭಯಂಕರ ನರಹತ್ಯೆಯನ್ನು ಕ[illegible] ಆಲೋಚಿಸದೆ, ಎಲ್ಲರೂ ಹರ್ಷದಿಂದ ಅಲ್ಲಿ ನಗುಮೊಗವನ್ನು ತೋರಿಸುತ್ತಿದ್ದರು. ಈ ವರ್ತನೆಯನ್ನು ಕಂಡು ನಾಗರಾಜನ ಎದೆಯು ಅಳುಕಿತು. ಎಂಥ ದೃಢಮನಸ್ಕನಾದ ಯೋಧನಾದರೂ, ತಾನು ರಣಾಂಗಣದಲ್ಲಿ ಗೆಯ್ಯುತ್ತಿರುವ ರಾಕ್ಷಸೀಕೃತ್ಯದ ಪರಿಜ್ಞಾನದಿಂದ ಅವನ ಎದೆಯು ಕಂಪಿಸದಿರದೆಂದು ನಾಗರಾಜನು ಬಗೆದಿದ್ದನು; ಆದರೆ ಭುವನವಿಕ್ರಮನ ಗೂಡಾರದಲ್ಲಿ ಕಂಡ ಹರ್ಷವು ಅವನ ಬುದ್ಧಿಯನ್ನು ದಂಗುಪಡಿಸಿತು. ಚಂಡಾಟವನ್ನಾಡಿ ಮನೆಗಳಿಗೆ ಬರುತ್ತಿರುವ ಬಾಲಕರ ವದನಮಂಡಲಗಳಲ್ಲಿ ರಾಜಿಸುತ್ತಿರುವ ಆಮೋದವು ಈ ಭಟರ ಮುಖಗಳಲ್ಲಿ ಹೊಳೆಯುತ್ತಿತ್ತು. ನಾಗರಾಜನು ತನ್ನೊಳಗೆ ಮನುಷ್ಯನಿಗೆ ಹೃದಯವಿಲ್ಲವೇ ಎಂದು ನುಡಿದುಕೊಂಡನು.

"ಬನ್ನಿರಿ, ಕುಳಿಂದರಾಜಕುಮಾರರೆ!" ಎಂದು ಭುವನವಿಕ್ರಮನು ಆದರಿಸಿದನು. "ಬನ್ನಿರಿ, ನಾಗರಾಜಶರ್ಮರೆ. ನಿಮ್ಮನ್ನು ಕಾಣದೆ ಬಹಳ ದಿನಗಳಾದುವಲ್ಲ? ನೀವಂತೂ ಯುದ್ಧಭೂಮಿಗೆ ಬರುವುದೇ ಇಲ್ಲ!"

"ಕರದಲ್ಲಿ ಖಡ್ಗವನ್ನು ಹಿಡಿಯಲು ವಿಧಾತನು ನನ್ನ ಲಲಾಟಪಟ್ಟದಲ್ಲಿ ಉಲ್ಲೇಖಿಸಲಿಲ್ಲ ಸಮರವೆಂದರೆ, ನನ್ನ ಜೀವರಸವು ಬತ್ತುವ ಹಾಗಾಗುತ್ತದೆ" ಎಂಬ ಉಚ್ಚಾರಣೋಕ್ತವಾಣಿಯಲ್ಲಿ ನಾಗರಾಜನು: "ರಾಜಕುಮಾರನ ಸಂಬಂಧದಿಂದ ರಣಾಂಗಣಕ್ಕೆ ಬಂದೆನಷ್ಟೆ!"

"ನೀವು ನನ್ನ ಆತಿಥ್ಯವನ್ನು ಸ್ವೀಕರಿಸಲು ಪ್ರಸಂಗ ಮಾಡಿರುವುದರಿಂದ ಬಹಳ ಸಂತೋಷವಾಗಿದೆ ನನಗೆ."

ಚಂದ್ರಹಾಸನು ಆಗಮಿಸಿದ ವಾರ್ತೆಯನ್ನು ಕೇಳಿ ಗೂಡಾರದ ಇನ್ನೊಂದು ಮೂಲೆಯಲ್ಲಿ ಪಗಡೆಯನ್ನಾಡುತ್ತ ಕುಳಿತಿದ್ದ ಮಾರ್ತಂಡವರ್ಮನು ತನ್ನ ಆಟವನ್ನು ಬಿಟ್ಟು ಚಂದ್ರಹಾಸನಿದ್ದಲ್ಲಿಗೆ ಬಂದನು ಅವನು ಚಂದ್ರಹಾಸನ ಬೆನ್ನು ತಟ್ಟುತ್ತ: "ರಾಜಕುಮಾರ, ನಿನ್ನ ಶೌರ್ಯವು ನಿನ್ನ ತಂದೆಯವರದಕ್ಕಿಂತಲೂ ಮಿಗಿಲಾಗಿದೆ ನಿನ್ನ ಪ್ರಾಯಕ್ಕಿಂತಲೂ ಹೆಚ್ಚಾದ ಧೈರ್ಯವು ನಿನ್ನಲ್ಲಿ ಕಂಗೊಳಿಸುತ್ತಿದೆ. ಇಂದು ನೀನು ಕುಂತಳ ಸೇನೆಯನ್ನು ಹುರಿದುಂಬಿಸಿ ಮುಂದೆ ಸಾಗುವಂತೆ ಮಾಡಿದ ಆ ಕೃತ್ಯವು ನನ್ನನ್ನು ಬೆರಳು ಕಚ್ಚುವಂತೆ ಮಾಡಿತು."

"ಪ್ರಧಾನ ದಂಡನಾಯಕರ ಅಭಿನಂದನೆಗೆ ನಾನು ಕೃತಜ್ಞನಾಗಿದ್ದೇನೆ!"

ಮಾರ್ತಂಡವರ್ಮನು ಒಬ್ಬ ಯೋಧನನ್ನು ಮುಕ್ತಕಂಠವಾಗಿ ಹೊಗಳುವುದೆಂದರೆ, ಅದು ಸಾಧಾರಣದ ಮಾತಲ್ಲ ಅವನ ಹಾಗೆ ರಣಕೌಶಲ್ಯದಲ್ಲಿ ಪಾಂಡಿತ್ಯವನ್ನು ಸಂಪಾದಿಸಿದ ಸೇನಾಪತಿಯು ಕುಂತಳದಲ್ಲಿ ಬೇರೊಬ್ಬನಿರಲಿಲ್ಲ ಅವನ ಪ್ರಶಂಸೆಯು ಲಭಿಸಿದರೆ ತಾವು ರಣಕಲೆಯಲ್ಲಿ ಪಿದಗ್ಧರಾದೆವೆಂದು ವಿಚಾರಿಸಿ, ಎಷ್ಟೋ ಮಂದಿ ಯೋಧರು ರಣರಂಗದಲ್ಲಿ ಅದ್ವಿತೀಯ ಸಾಹಸವನ್ನು ತೋರಿಸುತ್ತಿದ್ದರು; ಆದರೆ ಅವರು ಮಾರ್ತಂಡವರ್ಮನ ಪ್ರಶಂಸೆಗೆ ಪಾತ್ರೀಭವಿಸುವದು ದುರ್ಲಭವಾಗಿದ್ದಿತು. ಇಂಥ ಒಬ್ಬ ರಣಶಾಸ್ತ್ರಜ್ಞನು ಚಂದ್ರಹಾಸನನ್ನು ಹೊಗಳಿರುವಾಗ, ಅವನು ಎಷ್ಟು ಪರಾಕ್ರಮಿಯಾಗಿದ್ದನೆಂಬುದನ್ನು ವಾಚಕರೇ ಊಹಿಸುವದು ಮೇಲು!

ಮಾರ್ತಂಡವರ್ಮನು:—"ಬಾರಯ್ಯಾ ಚಂದ್ರಹಾಸಾ!" ಎಂದು ಕೈ ಹಿಡಿದೆಳೆದು ಪಗಡೆಯಾಡುವಲ್ಲಿಗೆ ಕರೆದೊಯ್ದನು ಅಲ್ಲಿ ನೆರೆದಿದ್ದ ಜನರು ಚಂದ್ರಹಾಸನನ್ನು ಕಾಣಲು, ಕುಳಿಂದದ ಭಾವೀ ಮಾಂಡಲಿಕನಿಗೆ ಮರ್ಯಾದೆ

ಯನ್ನು ಸೂಚಿಸುವದಕ್ಕಾಗಿ ಎದ್ದು ನಿಂತರು. ಮಾರ್ತಂಡವರ್ಮನು ಚಂದ್ರಹಾಸನನ್ನು ತನ್ನ ಪಕ್ಕದಲ್ಲಿಯೇ ಕುಳ್ಳಿರಿಸಿಕೊಂಡು ಆಟವಾಡಲು ಪ್ರಾರಂಭಿಸಿದನು. ಚಂದ್ರಹಾಸನು ಆ ವಿನೋದವನ್ನು ನೋಡುತ್ತಿದ್ದನು.

ಭುವನವಿಕ್ರಮನು ಬಂದ ಅತಿಥಿಗಳನ್ನು ಸತ್ಕರಿಸುತ್ತಲೂ ವಿನೋದದ ಮಾತುಗಳಿಂದ ಜನರನ್ನು ಸಂತೃಪ್ತಿಗೊಳಿಸುತ್ತಲೂ ಇದ್ದನು. ಇಷ್ಟರಲ್ಲಿ ಒಬ್ಬ ಭೃತ್ಯನು ಬಂದು ರಾಜಧಾನಿಯಿಂದ ಒಬ್ಬ ದೂತನು ಯಾವುದೋ ಒಂದು ಸಂದೇಶವನ್ನು ವಹಿಸಿಕೊಂಡು ಬಂದಿರುವುದಾಗಿ ಭುವನವಿಕ್ರಮನೊಡನೆ ನುಡಿದನು. "ಒಳಗೆ ಬರಹೇಳು" ಎಂದು ಭುವನವಿಕ್ರಮನ ಆಜ್ಞೆಯು ಹೊರಟಿತು ಇನ್ನೊಂದು ನಿಮಿಷದಲ್ಲಿಯೇ ಭೃತ್ಯನು ಆ ದೂತನೊಡನೆ ಗೂಡಾರದೊಳಗೆ ಪ್ರವೇಶಿಸಿದನು. ರಾಜಧಾನಿಯಿಂದ ಬಂದ ದೂತನು ಭುವನವಿಕ್ರಮನಿಗೆ ತನ್ನ ಪ್ರಣಾಮಗಳನ್ನು ಅರ್ಪಿಸಿದನು.

ಭುವನವಿಕ್ರಮನು ಆಶ್ಚರ್ಯಚಕಿತನಾಗಿ:—"ಹಯಗ್ರೀವಾ, ಏನು ಕಾರಣ ಬಂದೆ? ಅಂತಹ ಮಹತ್ಸಂದರ್ಭವೇನು?"

ಶಿರವನ್ನು ಬಾಗಿಸಿ ಎರಡು ಓಲೆಗಳನ್ನೂ ಉಂಗುರವನ್ನೂ ಭುವನವಿಕ್ರಮನ ಕರಗಳಿಗೆ ನೀಡಿದ ನಂತರ ಹಯಗ್ರೀವನು: "ತಾಯಿಯವರು ಈ ಓಲೆ-ಉಂಗುರಗಳನ್ನು ಮಹಾಪ್ರಭುಗಳಿಗೆ ತಲುಪಿಸಲು ಆಜ್ಞೆ ನೀಡಿದರು."

ಭುವನವಿಕ್ರಮನು ಓಲೆಯನ್ನು ತೆಗೆದು ಓದಿದನು. ಅದರಲ್ಲಿ ಈ ಪರಿಯಲ್ಲಿ ಬರೆದಿದ್ದಿತು:

"ಜೀವಿತೇಶ್ವರಾ, ತಮ್ಮ ಚರಣಾರವಿಂದಗಳನ್ನು ನೆನೆಯುತ್ತ ನಾನಿಲ್ಲಿ ದಿನಗಳನ್ನು ಕಳೆಯುತ್ತಿರುವೆನು. ಜಗದೀಶ್ವರನು ಕಾಳಗದಲ್ಲಿ ತಮಗೆ ಸಕಲ ವಿಜಯಗಳನ್ನೂ ನೀಡಬೇಕೆಂದು ಪ್ರಾರ್ಥಿಸುತ್ತಲಿರುವೆನು. ತಮ್ಮ ದರ್ಶನಕ್ಕಾಗಿ ಆತ್ಮವು ಹಾತೊರೆಯುತ್ತಿರುವದು.

ಇನ್ನೊಂದು ಮಾತು. ನನ್ನ ಗೆಳತಿ ಅಮಾತ್ಯನಂದಿನಿಗೆ ಬೇಕಾಗಿ ನಾನು ಸ್ವಲ್ಪ ಸ್ವಾತಂತ್ರ್ಯವನ್ನು ಕೈಗೊಳ್ಳಬೇಕಾಯಿತು. ಅದು ಅಪರಾಧವಾಗಿದ್ದರೆ, ತಾವು ಕ್ಷಮಿಸಬೇಕಾಗಿ ಪ್ರಾರ್ಥನೆಯು ಅಮಾತ್ಯರು ತಮ್ಮ ಮಗಳನ್ನು ಶಶಾಂಕಶೇಖರನೆಂಬ ವೃದ್ಧ ಕೋಟ್ಯಾಧೀಶ್ವರನಿಗೆ ಕೊಡಬೇಕೆಂದು ನಿರ್ಧರಿಸಿರುವರು; ಆದರೆ ಅದು ಅಮಾತ್ಯನಂದಿನಿಯ ಇಷ್ಟಕ್ಕೆ ವಿಪರೀತವಾಗಿದೆ. ಅವಳು ಕುಳಿಂದಕುಲದ ರಾಜಪುತ್ರರನ್ನು ತನ್ನ ಜೀವಿತೇಶ್ವರನನ್ನಾಗಿ ಸಂಕಲ್ಪಿಸಿರುತ್ತಾಳೆ. ಅವರಿಗೆ ಬೇಕಾಗಿ ಆತ್ಮಬಲಿಯನ್ನು ನೀಡಲೂ ಕೂಡ ಸಿದ್ಧಳಾಗಿರುತ್ತಾಳೆ.

ಅವಳ ಶೋಕವನ್ನು ಕಂಡು ಸಹಿಸಲಾರದೆ ಈ ಪ್ರಯತ್ನವನ್ನು ನಾನು ಕೈಕೊಂಡೆನು. ಅವಳ ವಿವಾಹಸಂಭ್ರಮವನ್ನು ನೆರವೇರಿಸಲಿಕ್ಕೆ ಅಮಾತ್ಯರು ಟೊಂಕವನ್ನು ಕಟ್ಟಿರುವರು. ಈ ಸಂದರ್ಭದಲ್ಲಿ ತನ್ನನ್ನು ರಕ್ಷಿಸುವದಕ್ಕಾಗಿ ಸಹಾಯಶೂನ್ಯೆಯಾದ ಅಮಾತ್ಯನಂದಿನಿಯು ಒಂದು ಓಲೆಯನ್ನೂ ಮಂಜೂಷವನ್ನೂ ಕಳುಹಿಸಿರುವಳು. ಅವುಗಳನ್ನು ಕುಳಿಂದಕುಲರಾಜಪುತ್ರನಿಗೆ ತಲುಪಿಸಬೇಕೆಂದು ಬೇಡಿಕೊಳ್ಳುವೆನು. ರಾಜಕುಮಾರರು ವಿಷಯಾದೇವಿಯ ಕಾರ್ಯದಲ್ಲಿ ಉಪೇಕ್ಷೆಯನ್ನು ಮಾಡಿದರೆ, ಅವಳು ಪ್ರಾಣತ್ಯಾಗವನ್ನು ಮಾಡಿಕೊಳ್ಳಬೇಕಾಗಿ ಬರುವದು. ತಮ್ಮ ಚರಣದಾಸಿ,

ಮಾಲಿನಿ''

ಮಾಲಿನಿಯ ಓಲೆಯನ್ನು ಕಂಡು ಭುವನವಿಕ್ರಮನು ಆದ್ಭುತಪರತಂತ್ರನಾಗಿ ಹೋಗಿ:—''ಅಮಾತ್ಯನಂದಿನಿಯು ಚಂದ್ರಹಾಸನಲ್ಲಿ ಅನುರಕ್ತಳು! ತಂದೆಯ ನಿರ್ಧರದಿಂದ ಮೋಚನೆ ಹೊಂದುವದಕ್ಕಾಗಿ ಚಂದ್ರಹಾಸನಿಗೆ ಓಲೆಯನ್ನು ಕಳುಹಿಸಿರುವಳು! ಆಶ್ಚರ್ಯ! ಆಶ್ಚರ್ಯ!'' ಎಂದು ಹೇಳುತ್ತ ಆವನು ಎರಡು ನಿಮಿಷಗಳವರೆಗೆ ಶಿಲಾಪ್ರತಿಮೆಯಂತೆ ನಿಂತುಕೊಂಡನು.

''ಚಂದ್ರಹಾಸರೇ!'' ಎಂದನು ಭುವನವಿಕ್ರಮನು: ''ತಮ್ಮ ಪ್ರಣಯಿನಿಯಿಂದ ಪತ್ರ ಬಂದಿರುವದು! ತಾವು ಪ್ರೇಮಪಾಶಬದ್ಧರಾಗಿರುವುದನ್ನು ನಮಗೆ ತಿಳಿಸಲಿಲ್ಲವಲ್ಲ!''

''ಯಾರಿಂದ?'' ಎಂದು ಚಂದ್ರಹಾಸನು ತಾನು ಕುಳಿತಿದ್ದ ಆಸನವನ್ನು ತ್ಯಜಿಸಿ ಎದ್ದು ನಿಂತನು. ರಾಜನಂದಿನಿಯಿಂದಲೇ ಓಲೆ ಬಂದಿರಬಹುದೆಂಬ ಸಂಶಯವು ಆತನನ್ನು ಬಾಧಿಸಿತು.

''ತಮ್ಮ ಪ್ರಣಯಿನಿಯ ಪರಿಚಯವು ತಮಗಿಲ್ಲವೇ! ಹೃದಯೇಶ್ವರಿಯನ್ನು ಅರಿಯದವರು! ಪಾಪ! ಇನ್ನು ಸಂಗತಿಯನ್ನು ಮರೆಮಾಜಲು ಯತ್ನಿಸಬೇಡಿ. ಕಾರ್ಯವೆಲ್ಲವೂ ಬಹಿರಂಗವಾಗಿ ಹೋಗಿದೆ.''

''ರಾಜನಂದಿನಿಯಿಂದಲೇ?'' ಎಂದು ಚಂದ್ರಹಾಸನು ನುಡಿಯತಕ್ಕವನಿದ್ದನು; ಆದರೆ ನಾಗರಾಜನು ಸೂಚಿಸಿದ ನೇತ್ರಗಳ ಸಂಜ್ಞೆಯಿಂದ ಅವನು ಮೌನವನ್ನು ಅವಲಂಬಿಸಿದನು.

''ಏಕೆ, ಚಂದ್ರಹಾಸರೆ, ಶಿಲಾಪ್ರತಿಮೆಯಂತೆ ನಿಂತಿರುವಿರಿ? ಬಹುಶಃ ಪ್ರಣಯಿನಿಯ ಓಲೆಯನ್ನು ಓದಲು ತಾವು ತವಕವನ್ನು ಹೊಂದಿರಬಹುದು. ಇಗೊಳ್ಳಿ! ನಾನೇಕೆ ಅಡ್ಡಿಯನ್ನು ಮಾಡಲಿ? ತಾವು ಭಾಗ್ಯಶಾಲಿಗಳು!

ಅಮಾತ್ಯನಂದಿನಿಯಂಥ ಸುಂದರ ಮತ್ತು ಬುದ್ಧಿಶಾಲಿಯಾದ ಯುವತಿಯ ಪ್ರೇಮವನ್ನು ಸಂಪಾದಿಸುವದರಲ್ಲಿ ತಾವು ವಿಜಯಿಗಳಾದುದಕ್ಕೆ ತಮ್ಮನ್ನು ನಾನು ಮನಸಾ ಅಭಿನಂದಿಸುತ್ತೇನೆ.'' ಎಂದು ನುಡಿದು, ಭುವನವಿಕ್ರಮನು ತನ್ನಲ್ಲಿರುವ ಓಲೆಯನ್ನೂ ಉಂಗುರವನ್ನೂ ಚಂದ್ರಹಾಸನಿಗೆ ನೀಡಿದನು.

'ಅಮಾತ್ಯನಂದಿನಿ!' ಎಂದು ಆಶ್ಚರ್ಯಭರಿತನಾಗಿ ಕಂಪಿಸುತ್ತಿರುವ ಹಸ್ತಗಳೊಡನೆ ಚಂದ್ರಹಾಸನು ಭುವನವಿಕ್ರಮನು ನೀಡಿದ ಓಲೆಯನ್ನೂ ಉಂಗುರವನ್ನೂ ಸ್ವೀಕರಿಸಿದನು. ಅವನ ಮನಸ್ಸು ಅದ್ಭುತ ಪರತಂತ್ರವಾಗಿ ಹೋಗಿದ್ದಿತು. ನಾಗರಾಜನು ವಿಜಯನ್ನು ಸಂಪಾದಿಸಿದವನ ಹಾಗೆ ಒಂದು ನೋಟವನ್ನು ಬೀರಿದನು. ಚಂದ್ರಹಾಸನು ಓಲೆಯನ್ನು ಓದಿ ತಿಳಿದು ಕೊಂಡು ಚಿಂತಾಮಗ್ನನಾದನು. ನಾಗರಾಜನು ಅವನ ಹತ್ತಿರ ಬಂದು ''ನಾನು ಊಹಿಸಿದ ಸಂಗತಿಯಷ್ಟೆ!'' ಎಂದು ಪಿಸುಮಾತಿನಲ್ಲಿ ನುಡಿದನು.

''ಹೌದು! ನಾನೇನು ಮಾಡಲಿ?''

''ಗೂಡಾರಕ್ಕೆ ತೆರಳಿದ ನಂತರ ಆಲೋಚಿಸೋಣ.''

ಔತನವು ವಿಜೃಂಭಣೆಯಿಂದಲೇ ನಡೆದಿತು; ಆದರೆ ಚಂದ್ರಹಾಸನಿಗೆ ಮಾತ್ರ ಅದು ಅಷ್ಟು ಸುಖಕರವಾಗಿ ತೋರಲಿಲ್ಲ ಅವನ ಮನಸ್ಸು ಕತ್ತಲೆ ಯಿಂದ ತುಂಬಿಹೋಗಿದ್ದಿತು. ಹೆಚ್ಚಿನ ವಿನೋದದ ಮಾತುಗಳಿಗೆ ಅವನು ಹೋಗದೆ, ತನ್ನ ಭಕ್ಷಣವನ್ನು ತೀರಿಸಿಕೊಂಡು, ಭುವನ ವಿಕ್ರಮನಿಗೆ ತನ್ನ ವಂದನೆಗಳನ್ನರ್ಪಿಸಿ ಹೊರಬಿದ್ದನು ನಾಗರಾಜನೂ ಮೌನದಲ್ಲಿ ಅವನನ್ನು ಹಿಂಬಾಲಿಸಿದನು.

''ಗೆಳೆಯಾ, ನೀನು ಊಹಿಸಿದಂತೆಯೇ ಎಲ್ಲವೂ ಆಯಿತು''

''ಏನದು?''

''ನೀನು ಹೇಳಿದಂತೆ ಅಮಾತ್ಯನಂದಿನಿಯು ನನ್ನಲ್ಲಿ ಅನುರಕ್ತ ಳಾಗಿದ್ದಾಳೆ''

''ಆ ಮೇಲೆ?''

''ನನ್ನ ಅಭಯವನ್ನು ಯಾಚಿಸುತ್ತಿದ್ದಾಳೆ.''

''ಏತಕ್ಕಾಗಿ?''

''ಅಮಾತ್ಯನು ಅವಳನ್ನು ಒಂದು ಮುದಿಹದ್ದಿಗೆ ಕಟ್ಟಲು ನಿರ್ಧರಿ ಸಿರುವನು. ಆ ವಿಪತ್ತಿನಿಂದ ಪಾರಾಗಲು ದಾರಿಯನ್ನು ಕಾಣದೆ, ಅಭಯ ವನ್ನು ಯಾಚಿಸುತ್ತ ತನ್ನ ಅಂಗುಲೀಯವನ್ನು ಕಳುಹಿಸಿರುವಳು.''

''ಆ ಮುದಿಹದ್ದು ಶಶಾಂಕಶೇಖರನಲ್ಲವೆ?''

"ಹೌದು. ಅದನ್ನು ನೀನು ಹೇಗೆ ಅರಿತೆ?"

"ಅಂದೇ ಊಹಿಸಿದ್ದೆನು. ದುಷ್ಟಬುದ್ಧಿಯು ಅಂದು ಅವನಿಂದ ಸಾಲವನ್ನು ಪಡೆದ ಹೊನ್ನುಗಳು ಅಮಾತ್ಯನಂದಿನಿಯ ಬೆಲೆಯಾಗಿವೆ."

"ಅದು ಹೇಗೆ?"

"ನನ್ನ ಬುದ್ಧಿಯಿಂದ. ದುಷ್ಟಬುದ್ಧಿಗೆ ಹೊನ್ನು ಬೇಕು; ಶಶಾಂಕನಿಗೆ ಹೆಣ್ಣು ಬೇಕು. ದುಷ್ಟಬುದ್ಧಿಯು ತನ್ನ ಮಗಳನ್ನು ಬಲಿಯಾಗರ್ಪಿಸಲು ಸನ್ನದ್ಧನಾದನು. ಅಮಾತ್ಯನು ಶಶಾಂಕನಲ್ಲಿಗೆ ಹೋದಾಗಲೇ ನಾನು ಅದನ್ನು ಊಹಿಸಿದೆನು."

"ಈಗ ಮಾಡಬೇಕಾದುದೇನು?"

"ಅಮಾತ್ಯನಂದಿನಿಯ ಕರವನ್ನು ಹಿಡಿಯುವದು."

"ಆದರೆ ರಾಜಕುಮಾರಿ?"

"ರಾಜಕುಮಾರಿಯಿದ್ದರೇನು? ಎರಡು ಪತ್ನಿಯರನ್ನೇಕೆ ಸ್ವೀಕರಿಸಬಾರದು?"

"ಆದರೆ ನನ್ನ ಹೃದಯವನ್ನು ರಾಜನಂದಿನಿಗರ್ಪಿಸಿರುವೆನಲ್ಲ!"

"ಅಮಾತ್ಯನಂದಿನಿಗೆ ನಿನ್ನೆದೆಯಲ್ಲಿ ಸ್ಥಾನವಿಲ್ಲವೇ?"

"ಇಲ್ಲ!"

"ಹಾಗಾದರೆ ನೀನೆಷ್ಟು ಕಠಿಣ ಹೃದಯನು!"

"ಅದೇಕೆ ನಾಗರಾಜ, ನೀನು ಈ ರೀತಿಯಲ್ಲಿ ನುಡಿಯುತ್ತಿರುವೆ?"

"ಅಲ್ಲದಿನ್ನೇನು? ಓರ್ವ ಅಬಲೆಯು ನಿನ್ನಲ್ಲಿ ಅನುರಕ್ತಳಾಗಿ ತನ್ನ ಸರ್ವಸ್ವವನ್ನು ಅರ್ಪಿಸಿ ನಿನ್ನ ಚರಣದಾಸಿಯಾಗಿರಲು ಬಂದಾಗ, ಅವಳಿಗೆ ನಿನ್ನೆದೆಯಲ್ಲಿ ಸ್ಥಾನವಿಲ್ಲವೆಂದು ಹೇಳುವುದು ಭೂಷಣವೇ?"

"ಹಾಗಾದರೆ ಬೀದಿಯಲ್ಲಿ ಹೋಗುವ ಹೆಂಗಸರೆಲ್ಲ ನನ್ನ ಕಡೆಗೆ ತಮ್ಮ ಹುಬ್ಬುಗಳನ್ನು ಹಾರಿಸಿದರೆ, ಅವರೆಲ್ಲರ ಭರ್ತೃಪದವನ್ನು ನಾನು ಸ್ವೀಕರಿಸಬೇಕು, ಎಂದಂತಾಯಿತಲ್ಲವೆ?"

"ಅದೇನೂ ಇಲ್ಲ; ಅಮಾತ್ಯನಂದಿನಿಯು ಆದರ್ಶ ನಾರಿಯು."

"ಅದನ್ನು ನಾನು ಹೇಗೆ ಊಹಿಸಲಿ?"

"ನಿನ್ನ ತಲೆಯೊಳಗೆ ಮಿದುಳಿದ್ದರೆ ಅದನ್ನು ಗ್ರಹಿಸಬಹುದು."

"ಅದು ಹೇಗೆ"

"ಪುನಃ ಅದು ಹೇಗೆಂದು ಪ್ರಶ್ನಿಸುತ್ತಿರುವೆ? ಅಂದು ನಿನಗೆ ವಿಪತ್ತು ಬರುವುದೆಂಬ ಸೂಚನೆಯನ್ನು ಕೊಟ್ಟವಳು ಯಾರೆಂದು ಬಲ್ಲೆಯಾ? ಅವಳೇ

ವಿಷಯಾಕುಮಾರಿಯು! ನಿನ್ನನ್ನು ಸಲುಹಲು ಬದ್ಧಕಂಕಣವನ್ನು ಧರಿಸಿರುವೆನೆಂಬುದಾಗಿ ಸೂಚಿಸಿರುತ್ತಾಳೆ. ಇಷ್ಟೆಲ್ಲ ನಿದರ್ಶನಗಳು ಸಿಲುಕಿಯೂ ಅವಳನ್ನು ಸಾಮಾನ್ಯಳೆಂದು ಬಗೆಯುವದು ಎಷ್ಟು ಹುಚ್ಚುತನವು!"

ಹೀಗೆ ಸಂಭಾಷಿಸುತ್ತ ಅವರು ನಡೆದು ತಮ್ಮ ಗೂಡಾರಕ್ಕೆ ಸೇರಿದರು. ಚಂದ್ರಹಾಸನು ಗೌರವಭಾವವನ್ನವಲಂಬಿಸಿ, ತನ್ನ ಮುಂದಿನ ಉದ್ಯಮವೇನೆಂದು ಚಿಂತಿಸತೊಡಗಿದನು. ಒಂದು ಭಾಗದಲ್ಲಿ ರಾಜನಂದಿನಿಯ ಬಂಧವಿಮೋಚನೆಯ ರೂಪವು ನಿಂತಿತ್ತು. ಇನ್ನೊಂದು ಕಡೆಯಲ್ಲಿ ವಿಷಯಾಕುಮಾರಿಯು ನಿಂತು:—"ನಿನಗಾಗಿ ಸರ್ವಸ್ವವನ್ನೂ ತ್ಯಜಿಸಿರುವೆನು. ನನ್ನನ್ನು ತ್ಯಜಿಸಬೇಡ" ಎಂದು ಅಂಗಲಾಚಿ ಬೇಡುತ್ತಿರುವ ಚಿತ್ರವು ಹೊಳೆಯುತ್ತಿತ್ತು. ಏನನ್ನು ಮಾಡಬೇಕು? ಯಾವ ರೀತಿ ವರ್ತಿಸಬೇಕು? ಎಂಬುದು ತೋಚಲಿಲ್ಲ. ಅವನ ಹಾವಭಾವಗಳನ್ನು ಬಹು ಸೂಕ್ಷ್ಮ ರೀತಿಯಲ್ಲಿ ನಾಗರಾಜನು ನಿರೀಕ್ಷಿಸುತ್ತಲಿದ್ದನು. ಬಹು ಹೊತ್ತು ಇಬ್ಬರೂ ಮೌನವನ್ನು ಅವಲಂಬಿಸಿದ್ದರು.

ಅಂತ್ಯದಲ್ಲಿ ಚಂದ್ರಹಾಸನೇ ಮೌನವನ್ನು ಭಂಜಿಸಿದನು; ಅವನು ನಾಗರಾಜನನ್ನು ನೋಡಿ, "ಗೆಳೆಯ, ನಾನೇನು ಮಾಡಬೇಕೆಂದು ನಿರೀಕ್ಷಿಸುತ್ತಿರುವೆ?" ಎಂದನು.

"ಮಾಡುವುದೇನು? ಎರಡರಲ್ಲಿ ಯಾವುದಾದರೂ ಒಂದನ್ನು ನಿರ್ಧರಿಸುವುದು."

"ಯಾವವು ಆ ಎರಡು ದಾರಿಗಳು?"

"ಒಂದನೆಯದು ನಿನ್ನ ಸಹಾಯವನ್ನು ನಿರೀಕ್ಷಿಸುತ್ತ ಕುಳಿತಿರುವ ಆ ಹೆಂಗುಸಿಗೆ ಸಹಾಯವನ್ನು ನೀಡಿ, ದುಷ್ಟ ಶಶಾಂಕನ ಬಲೆಯಿಂದ ಅವಳನ್ನು ರಕ್ಷಿಸುವುದು. ಅದಲ್ಲದಿದ್ದರೆ ಎರಡನೆಯದು ಮೌನವನ್ನವಲಂಬಿಸಿ, ತನ್ನ ಹೃದಯೇಶ್ವರನಿಗಾಗಿ ಆ ಹೆಂಗುಸು ಭಾವಿಯಲ್ಲಿ ಹಾರಿ ಪ್ರಾಣತ್ಯಾಗವನ್ನು ಮಾಡುವ ದೃಶ್ಯವನ್ನು ಧೀರನ ಹಾಗೆ ನೀನು ನೋಡುತ್ತ ನಿಂತಿರುವದು."

"ಅದೇಕೆ, ಆ ರೀತಿ ನೀನು ನುಡಿಯುತ್ತಿರುವೆ?"

"ನಿನ್ನ ಸಹಾಯವು ಸಕಾಲದಲ್ಲಿ ಲಭಿಸಬೇಕು; ಇಲ್ಲದಿದ್ದರೆ, ಆ ಹೆಣ್ಣಿನ ಕತೆಯು ಸಮಾಪ್ತಿಯಾಗುವದು. ಆ ಹೆಂಗಸನ್ನು ಆತ್ಮಹತ್ಯೆಗೆ ಪ್ರೇರೇಪಿಸಿದ ಮಹಾ ಪಾಪವು ನಿನ್ನ ತಲೆಯ ಮೇಲೆ ಬೀಳುವುದು."

"ಹೌದು; ಅವಳಲ್ಲಿ ನಾನು ಅನುರಕ್ತನಾಗದಿದ್ದರೂ ಅವಳನ್ನು ಆ ವಿವಾಹಬಂಧದಿಂದ ರಕ್ಷಿಸುವದು ನನ್ನ ಕರ್ತವ್ಯವಾಗಿದೆ; ಆದರೆ ಯುದ್ಧ

ಭೂಮಿಯನ್ನು ತ್ಯಜಿಸಿ ಈಗ ತೆರಳಲು ಸಾಧ್ಯವಿಲ್ಲ. ನಾನೀಗ ತೆರಳಿದರೆ, ನಮ್ಮ ಪ್ರಾಂತ್ಯದಿಂದ ಬಂದ ಸೈನಿಕರು ಎದೆಗುಂದುವರು. ಅವರು ಹಿಮ್ಮೆಟ್ಟಿದರೆ, ಕುಂತಳೇಂದ್ರನಿಗೆ ವಿಜಯವು ಲಭಿಸಲಾರದು."

"ಅದು ನಿಜ; ಇಂದು ಹಿಮ್ಮೆಟ್ಟಿದರೆ, ಕುಳಿಂದದ ಶುಭ್ರವಾದ ಕೀರ್ತಿಗೆ ಕಲಂಕ ಬರುವದು" ಎಂದನು ನಾಗರಾಜನು.

"ಆದರೆ ನೀನು ವಿಚಾರಿಸಿದರೆ ಕಾರ್ಯವು ಸಾಧ್ಯವಾಗಬಹುದು."

"ಹೇಗೆ?"

"ನೀನು ರಾಜಧಾನಿಗೆ ತೆರಳತಕ್ಕದ್ದು" ಎಂದನು ವಿಚಾರಮಗ್ನನಾದ ಚಂದ್ರಹಾಸನು: "ನಿನ್ನ ಯುಕ್ತಿ ಮತ್ತು ಚಾತುರ್ಯಗಳನ್ನು ಉಪಯೋಗಿಸಿ, ಅಮಾತ್ಯನಂದಿನಿಯನ್ನು ಆ ಸಂಕಟದಿಂದ ಪಾರು ಮಾಡಿ ಸುರಕ್ಷಿತಳನ್ನಾಗಿ ಮಾಡತಕ್ಕದ್ದು"

"ಆದರೆ ನಿನ್ನ ಕತೆಯೇನು?" ಚಂದ್ರಹಾಸನನ್ನು ಬಿಟ್ಟು ಅಗಲಲು ತನಗಿರುವ ವೈಮನಸ್ಯವನ್ನು ತೋರಿಸುತ್ತ ನಾಗರಾಜನಂದನು.

"ನನ್ನ ಕತೆಯನ್ನು ನಾನು ನೋಡಿಕೊಳ್ಳಬಲ್ಲೆನು. ಅಮಾತ್ಯನಂದಿನಿ ಸಲಹುವ ಭಾರ ನಿನ್ನದು. ನೀನಂದ ಹಾಗೆ ಆ ಹೆಂಗುಸನ್ನು ರಕ್ಷಿಸುಯನ್ನುವುದು ನಮ್ಮ ಕರ್ತವ್ಯವಾಗಿದೆ. ನಾಳೆ ಮುಂಜಾನೆಯೇ ರಾಜಧಾನಿಗೆ ಹೊರಡು. ದೇಹರಕ್ಷಣೆಗೆ ಭಟರ ಆವಶ್ಯಕತೆಯಿದೆಯೇ?"

"ಊಂ ಹೂಂ. ಒಬ್ಬ ಭೃತ್ಯನಿದ್ದರೆ ಸಾಕು. ಈ ಭಟರ ಹಿಂದೆ ನಡೆಯಲು ನನ್ನಿಂದ ಸಾಧ್ಯವಿಲ್ಲ ಅಮಾತ್ಯನಂದಿನಿಗೆ ಒಂದು ಓಲೆಯನ್ನು ಬರೆದಿಡು

"ಹಾಗೆಯೇ ಆಗಲಿ!"

"ನಾನು ನಿದ್ರಿಸುವೆನು; ಓಲೆಯನ್ನು ಬರೆದಿಡು. ಭೃತ್ಯನು ನಾಳೆಯ ದಿನದ ಪ್ರಯಾಣಕ್ಕೆ ಬೇಕಾದ ಸನ್ನಾಹಗಳನ್ನು ಸಿದ್ಧ ಮಾಡಲಿ." ಎಂದು ಹೇಳಿ, ನಾಗರಾಜನು ತನ್ನ ಹಾಸಿಗೆಯಲ್ಲಿ ಮಲಗಿದನು. ಕೆಲವು ನಿಮಿಷಗಳಲ್ಲಿಯೇ ನಿದ್ರಾಂಗನೆಯ ಕೃಪಾಕಟಾಕ್ಷಕ್ಕೆ ಅವನು ಪಾತ್ರೀಭವಿಸಿದನು.

ಚಂದ್ರಹಾಸನು ನಾಗರಾಜನ ಮಾತಿನಂತೆ ಅಮಾತ್ಯನಂದಿನಿಗೆ ಒಂದು ಓಲೆಯನ್ನು ಬರೆಯಲು ಪ್ರಾರಂಭಿಸಿದನು. ಭೃತ್ಯನು ಮರುದಿನದ ಪ್ರಯಾಣಕ್ಕೆ ಆವಶ್ಯವಿರುವ ಸನ್ನಾಹಗಳನ್ನು ಸಿದ್ಧ ಮಾಡಲಾರಂಭಿಸಿದನು.

---

## ಅರಸನು ಸೆರೆಯಲ್ಲಿ.

ಕುಂತಳೇಂದ್ರನು ಇದುವರೆಗೆ ತಾನು ವಿರಕ್ತಿಯನ್ನು ತೋರಿಸುತ್ತಲಿದ್ದ ರಾಜಕಾರಣದಲ್ಲಿ ಶ್ರದ್ಧೆಯನ್ನು ವಹಿಸುತ್ತಿರುವುದನ್ನು ಕಂಡು ದುಷ್ಟಬುದ್ಧಿಯು ಆಶ್ಚರ್ಯಚಕಿತನಾದನು. ಇದಕ್ಕೆ ಕಾರಣವೇನೆಂದು ಅವನು ಹಲವು ಬಗೆಯಿಂದ ಊಹಿಸತೊಡಗಿದನು; ಆದರೆ ಆವ ಕಾರಣಗಳೂ ಅವನಿಗೆ ಹೊಳೆಯಲಿಲ್ಲ. ಕುಂತಳೇಂದ್ರನು ತನ್ನ ದೃಷ್ಟಿಯನ್ನು ರಾಜಕಾರಣದಲ್ಲಿ ವಹಿಸಲಾರಂಭಿಸಲು, ದುಷ್ಟಬುದ್ಧಿಯು ತನ್ನ ಸ್ವೇಚ್ಛಾವರ್ತನೆಗೆ ಒಂದು ಮಿತಿ ಇಡಬೇಕಾಗಿ ಬಂದಿತು. ಇದಲ್ಲದೆ ರಾಜನು ವಿಧಿಸಿದ ಹೊಸ ನಿಯಮದಿಂದ ಅಮಾತ್ಯನಿಗೆ ಹಲವು ಅಸೌಕರ್ಯಗಳು ಒದಗಲಾರಂಭಿಸಿದವು. ಇದುವರೆಗೆ ರಾಜಕೋಶದ ಸರ್ವಾಧಿಕಾರವು ಅಮಾತ್ಯನಿಗಿದ್ದಿತು. ರಾಜನ ಅನುಮತಿಯಿಲ್ಲದೆ ತನಗೆ ಬೇಕಾದಷ್ಟು ದ್ರವ್ಯವನ್ನು ಅಮಾತ್ಯನು ವ್ಯಯಗೊಳಿಸಬಹುದಿತ್ತು. ಕೋಶದ ಆಯವ್ಯಯ ಲೆಕ್ಕಗಳನ್ನು ಪ್ರತಿ ಪಕ್ಷದಲ್ಲಿಯೂ ಅರಸನಿಗೆ ಸಮರ್ಪಿಸಬೇಕಾಗಿರಲಿಲ್ಲ. ಇದರಿಂದ ದುಷ್ಟಬುದ್ಧಿಯು ತನ್ನ ಇಚ್ಛೆಯಂತೆ ದ್ರವ್ಯವನ್ನು ವ್ಯಯಗೊಳಿಸಬಹುದಾಗಿದ್ದಿತಲ್ಲದೆ, ತಾನೇಕೆ ಆ ರೀತಿ ವ್ಯಯಗೊಳಿಸಿದುದು? ಎಂದು ಅರಸನು ಪ್ರಶ್ನಿಸುವನೆಂಬ ಭೀತಿಯೂ ಅವನಿಗಿರಲಿಲ್ಲ.

ದುಷ್ಟಬುದ್ಧಿಗೆ ಸ್ವಲ್ಪ ಧನದ ಆವಶ್ಯಕತೆಯು ಬಂದಿತು. ಎಂದಿನಂತೆ ಆತನು ರಾಜಕೋಶಕ್ಕೆ ತೆರಳಿದನು. ಕೋಶಾಧಿಕಾರಿಯು ಅಮಾತ್ಯರಿಗೆ ಪ್ರಣಾಮಗಳನ್ನು ಗೈದು ಉಚಿತ ಆಸನವನ್ನು ನೀಡಿದನು. ಯೋಗಕ್ಷೇಮದ ಮಾತುಗಳಾದ ನಂತರ ಅಮಾತ್ಯನಂದನು: "ನನಗೆ ಸಾವಿರ ಹೊನ್ನುಗಳು ಆವಶ್ಯವಿವೆ"

"ತಾವು ಮಹಾರಾಜರು ಹೊರಡಿಸಿದ ಹೊಸ ಅಪ್ಪಣೆಯನ್ನು ಅರಿತಿಲ್ಲವೆಂದು ತೋರುತ್ತದೆ." ಎಂದು ನಿರಾಶಾಸೂಚಕ ಸ್ವರದಲ್ಲಿ ಕೋಶಾಧಿಕಾರಿಯು ನುಡಿದನು.

"ಅದೇನು ಕೋಶಾಧಿಕಾರಿಗಳೆ?"

"ನೋಡಿ, ಈ ಅಪ್ಪಣೆಯು ನಿನ್ನೆಯ ದಿನ ಅರಮನೆಯಿಂದ ಬಂದಿತು" ಎನ್ನುತ್ತ ಕೋಶಾಧಿಕಾರಿಯು ರಾಜಮುದ್ರೆಯಿಂದ ಕೂಡಿದ ಒಂದು ಓಲೆಯನ್ನು ಕೊಟ್ಟನು ಅಮಾತ್ಯನಿಗೆ. ಆ ಓಲೆಯಲ್ಲಿ ತನ್ನ ಅನುಮತಿಯಿಲ್ಲದೆ ಧನ ವ್ಯಯಗೊಳಿಸಕೂಡದೆಂದೂ, ರಾಜ್ಯಪಾಲನೆಗಾಗಿ ಧನವು ಆವಶ್ಯ

ವೆನಿಸಿರದೆ ತನ್ನ ಅನುಮತಿಯನ್ನು ಪಡೆದ ನಂತರವೇ ಧನವನ್ನು ವ್ಯಯಗೊಳಿಸಬೇಕೆಂದೂ ಮಹಾರಾಜನು ಸ್ಪಷ್ಟವಾಗಿ ಆಜ್ಞಾಪಿಸಿದ್ದನು.

ಈ ನಿರೂಪವನ್ನು ನೋಡಿದೊಡನೆಯೇ ದುಷ್ಟಬುದ್ಧಿಯ ಮೋರೆಯು ಕಪ್ಪಾಗಿ ಹೋಯಿತು. ತಾನು ದೇಶವನ್ನಾಳುವ ಅಮಾತ್ಯನಾಗಿದ್ದರೂ ಬೊಕ್ಕಸದಿಂದ ಒಂದು ಕಾಸನ್ನಾದರೂ ವ್ಯಯಗೊಳಿಸುವ ಅಧಿಕಾರವು ತನಗಿಲ್ಲವೆಂಬುದು ವ್ಯಕ್ತವಾಗಲು ಬಹಳ ಸಂತಾಪವಾಯಿತು. ತನ್ನನ್ನು ಅವಮಾನಿಸುವದಕ್ಕಾಗಿ ಅರಸನು ಈ ನೀತಿಯನ್ನು ಅವಲಂಬಿಸಿದ್ದನೆಂಬುದು ಅಮಾತ್ಯನಿಗೆ ಹೊಳೆಯದೆ ಇರಲಿಲ್ಲ ಅವನ ಮನಸ್ಸು ಕೋಪಸಂತಪ್ತವಾಯಿತು ಆ ಕೋಪವಡೊಡನೆಯೇ ತನ್ನ ವರ್ತನೆಗಳು ಅರಸನ ಮನಸ್ಸಿನಲ್ಲಿ ಸಂಶಯಗಳು ಸಂಜಾತವಾಗುವಂತೆ ಮಾಡಿದುವೇ? ಎಂಬ ಭೀತಿಯೂ ಉದ್ಭವಿಸಿತು ಕೆಲವು ನಿಮಿಷಗಳ ವರೆಗೆ ತಾನೇನು ಮಾಡಬೇಕೆಂಬುದನ್ನು ತಿಳಿಯದೆ, ಅವನು ವಿಚಾರಮಗ್ನನಾಗಿ ಕುಳಿತುಬಿಟ್ಟನು!

"ಕೋಶಾಧಿಕಾರಿಗಳೆ! ಈ ರೀತಿಯ ನಿರೂಪವನ್ನು ಹೊರಡಿಸುವದಕ್ಕೆ ಕಾರಣವೇನು ಬಲ್ಲಿರಾ?" ಎಂದನು ಅಮಾತ್ಯನು.

"ಅಮಾತ್ಯರೇ, ಅರಮನೆಯಿಂದ ಭಂಡಾರದ ಲೆಖ್ಖಗಳನ್ನು ಪರಿಶೋಧಿಸಲು ರಾಜಗೃಹಕ್ಕೆ ಕಳುಹಿಸಬೇಕೆಂದು ಮಹಾರಾಜರ ನಿರ್ದೇಶವು ಹೊರಟಿತು ತಮ್ಮ ನಿರ್ದೇಶದಂತೆ ವ್ಯಯಗೊಳಿಸಿದ ಹನ್ನೆರಡು ಸಾವಿರ ಹೊನ್ನುಗಳನ್ನು ಕುರಿತು ಮಹಾರಾಜರು ಅಸಂತೃಪ್ತಿಯನ್ನು ಪ್ರದರ್ಶಿಸಿದರು. ಅನಂತರ ಈ ಅಪ್ಪಣೆಯು ಹೊರಟಿದೆ."

"ಇದು ಕೆಲವು ಮಂದಿ ಅಸೂಯ ಕುಕ್ಷಿಗಳ ಉದ್ಯಮವಾಗಿದೆ ಕಳೆದ ಇಪ್ಪತ್ತು ವರ್ಷಗಳಿಂದ ನಾನು ಕುಂತಳದ ಅಭ್ಯುದಯಕ್ಕಾಗಿ ಯಾವ ರೀತಿ ಪ್ರಯತ್ನಿಸುತ್ತಿರುವೆನೆಂಬುದನ್ನು ತಾವು ಬಲ್ಲಿರಷ್ಟೆ? ಹೀಗಿರಲು ರಾಜ್ಯಕಾರ್ಯಕ್ಕಾಗಿ ನಾನು ಹಲವು ಸಾವಿರ ಹೊನ್ನುಗಳನ್ನು ವ್ಯಯಗೊಳಿಸಿದುದರಲ್ಲಿ ಮಹಾರಾಜರು ಸಂದೇಹವನ್ನು ತಾಳುವುದು ಬಹು ಸಂಕಟಕರವು! ಅವರು ನಿಷ್ಕಲಂಕ ಹೃದಯರಾದುದರಿಂದ ಯಾರು ಏನನ್ನು ನುಡಿದರೂ ಅವು ವಾಸ್ತವವೆಂದು ನಂಬುವರು"

"ತಮ್ಮ ಅಕೃತ್ರಿಮವಾದ ರಾಜನಿಷ್ಠೆಯು ಕುಂತಳದ ಒಂದು ಮೂಲೆಯಿಂದ ಇನ್ನೊಂದು ಮೂಲೆಯವರೆಗೆ ವ್ಯಾಪಿಸಿದೆ. ತಮ್ಮಂಥವರ ವರ್ತನೆಗಳಲ್ಲಿ ಸಂದೇಹವನ್ನು ತಾಳುವುದು ಮಹಾರಾಜರಿಗೆ ಉಚಿತವಾದುದಲ್ಲವೆಂದು ನನ್ನ ಅಭಿಪ್ರಾಯವು; ಆದರೆ ನಾವು ಮಹಾರಾಜರ ಉಪ್ಪನ್ನು ತಿನ್ನುತ್ತಿರು

ವಾಗ ಅವರ ಆಜ್ಞೆಯನ್ನು ಪಾಲಿಸದೆ ನಿರ್ವಾಹವಿಲ್ಲವಷ್ಟೆ?"

"ಅದು ಸರಿ; ಅವರ ಅಪ್ಪಣೆಯನ್ನು ಪಾಲಿಸುವದು ನಿಮ್ಮ ಕರ್ತವ್ಯವೇ ಆಗಿದೆ."

ದುಷ್ಟಬುದ್ಧಿಯು ತನ್ನ ಸದನಕ್ಕೆ ಹಿಂದಿರುಗಿದನು. ಅವನ ಮನಸ್ಸು ಬಹಳ ಪ್ರಕ್ಷುಬ್ಧವಾಗಿದ್ದಿತು. ಕೋಶದಿಂದ ಧನವು ಸಿಗದೆ ಇರಲು, ತಾನು ಅಮಾತ್ಯನಾಗಿದ್ದು ಏನು ಫಲವೆಂದೂ ತಾನು ನೆನೆಸಿದಂತೆ ಸರ್ವಾಧಿಕಾರ ಪ್ರಯೋಗಕ್ಕೆ ಸಾಧ್ಯವಿಲ್ಲವೆಂದೂ ಅಮಾತ್ಯನು ತಿಳಿಯಲು, ಆತನಿಗೆ ಬಹಳ ಮಾನಹಾನಿಯಾದಂತೆ ತೋರತೊಡಗಿತು. ಅರಸನು ತನ್ನನ್ನು ಈ ರೀತಿ ಅವಮಾನಿಸಿಬಿಟನಲ್ಲಾ? ಎಂಬ ಕೋಪವು ಅವನನ್ನು ಪೀಡಿಸಿತು. ನಿರಂಕುಶನಾಗಿ ಕುಂಕಳದ ಪ್ರತಿಯೊಂದು ಮೂಲೆಯಲ್ಲಿಯೂ ತನ್ನ ದರ್ಪವನ್ನು ಹರಡಿದ್ದ ಅಮಾತ್ಯನಿಗೆ ರಾಜಕೋಶದಿಂದ ಒಂದು ಕಾಸು ಸಹ ವ್ಯಯಗೊಳಿಸಲು ಅಧಿಕಾರವಿಲ್ಲವೆಂಬ ಅರಸನ ನಿರ್ದೇಶವು ಅವನಿಗೆ ಸಹನಾತೀತವಾಗಿ ತೋರಿತು. ಅವನು ತಾನು ಅರಸನ ಒಬ್ಬ ವಿಶ್ವಸ್ತ ಸೇವಕನೆಂದೂ, ಅರಸನ ನುಡಿಗಳನ್ನು ಅಕ್ಷರಶಃ ಪಾಲಿಸಿ, ರಾಜ್ಯದಲ್ಲಿ ಪ್ರಜಾಪರಿಪಾಲನೆಯೇ ತನ್ನ ಕರ್ತವ್ಯವೆಂದೂ ನೆನೆಸಿದ್ದರೆ, ತಾನು ಈ ರೀತಿ ಅವಮಾನಿತನಾದೆನೆಂದು ತಿಳಿಯಲು ಕಾರಣವಿರಲಿಲ್ಲ; ಆದರೆ ಅಮಾತ್ಯನು ಆ ಮನಃಸ್ಥಿತಿಯ ಮನುಷ್ಯನಾಗಿರಲಿಲ್ಲ. ಅಧಿಕಾರಲಾಲಸೆಯಿಂದ ಹಂಬಲಿಸುತ್ತಿದ್ದ ಅವನ ಎದೆಗೆ ಅರಸನ ಈ ನಿರೂಪವು ಕೊಡಲಿಯ ಪ್ರಹಾರದಂತೆ ಆಯಿತು. ಆ ನಿರೂಪಕ್ಕೆ ಕಾರಣವೇನೆಂದು ಅವನು ಆಲೋಚಿಸಿದನು; ಆದರೆ ಯಾವದೂ ಹೊಳೆಯಲಿಲ್ಲ.

ಇದಲ್ಲದೆ ಅಮಾತ್ಯನ ಪ್ರತಿಯೊಂದು ಪ್ರಯತ್ನಕ್ಕೂ ವಿಘ್ನವು ಸಂಭವಿಸುತ್ತಲಿದ್ದಿತು. ಅದು ಅವನ ಪ್ರಯತ್ನವು ಧರ್ಮವಿರೋಧವಾಗಿದೆ, ಎಂಬುದು ಸೂಚನೆಯಾಗಿರಬಹುದು. ಹಾಗು ಅವನಿಗೆ ಈ ಪರಾಜಯಗಳು ಲಭಿಸಲಿಕ್ಕೆ ಕಾರಣವು! ಆದರೆ ಅವುಗಳನ್ನು ಅವಲೋಕಿಸಿ ತನ್ನ ದಾರಿಯನ್ನು ಸರಿಪಡಿಸಲು ಅವನು ಉದ್ಯುಕ್ತನಾಗಲಿಲ್ಲ. ಅವನಲ್ಲಿದ್ದ ಸ್ವಾರ್ಥತತ್ಪರತೆಯು ಹಲವು ಅಧರ್ಮದ ಕೆಲಸಗಳನ್ನು ಮಾಡಲು ಅವನನ್ನು ಪ್ರೇರಿಸುತ್ತಲಿದ್ದಿತು. ಶಶಾಂಕಶೇಖರನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಡಲು ಅಮಾತ್ಯನು ಪ್ರಯತ್ನಿಸಿದ್ದೂ ಅವನ ಆ ಯತ್ನವನ್ನು ಜಲಮಧ್ಯ ಹೋಮವನ್ನಾಗಿ ಮಾಡಿ ಅಮಾತ್ಯನಂದಿನಿಯು ಮಾಯವಾದದ್ದೂ ಬೀದಿಯ ಮಾತುಗಳಾಗಿದ್ದವು. ಜನರು ದುಷ್ಟಬುದ್ಧಿಯ ಈ ವಿವೇಕಶೂನ್ಯವಾದ ವರ್ತನೆಯನ್ನು ಕುರಿತು ಪರಿಹಾಸವನ್ನು ಮಾಡದೆ ಇರಲಿಲ್ಲ. ಹೆಚ್ಚು ಜಾಣರಾದರೆ ಹಳ್ಳ

ದಲ್ಲಿ ಬೀಳುವರೆಂದು ಜನರು ದುಷ್ಟಬುದ್ಧಿಯ ಕಡೆಗೆ ಬೆರಳು ತೋರಿಸಿ ಆಡಿಕೊಳ್ಳುತ್ತಿದ್ದರು. ಶಶಾಂಕಶೇಖರನು ಕೊಟ್ಟ ಹಣದಿಂದ ಅಮಾತ್ಯನು ಊಹಿಸಿದಂತೆ ಅವನ ಕಾರ್ಯಗಳು ಕೈಗೂಡಲಿಲ್ಲ.

ಈ ಸಂದರ್ಭದಲ್ಲಿ ತನ್ನ ಗೃಹದಲ್ಲಿಯೂ ಶಾಂತಿಯನ್ನು ಅನುಭವಿಸುವ ಭಾಗ್ಯವು ಅಮಾತ್ಯನಿಗೆ ದೊರಕಲಿಲ್ಲ. ಅವನ ಮಡದಿಯು ತನ್ನ ಪುತ್ರಿಯ ವಿಯೋಗದಿಂದ ಶೋಕಕಾತರಳಾಗಿದ್ದಳು. ಯಾವಾಗಲೂ ಕಣ್ಣೀರು ಸುರಿಸುತ್ತ ಅವಳು ದಿನಗಳನ್ನು ಕಳೆಯುತ್ತಲಿದ್ದಳು. ವಿಷಯೆಯ ಅಂತರ್ಧಾನಕ್ಕೆ ತನ್ನ ಪತಿಯೇ ಕಾರಣಭೂತನೆಂದು ಸಕಲ ಅಪರಾಧಗಳನ್ನೂ ಅವನ ಮೇಲೆಯೇ ಅವಳು ಹೊರಿಸಿದಳು. ತನ್ನ ಗೃಹಕ್ಕೆ ಬಂದರೆ ಅವಳ ಬಾಯಿಯಿಂದ ಹೊರಡುವ ತೀಕ್ಷ್ಣವಾದ ಮಾತುಗಳನ್ನು ಅವನು ಕೇಳಿ ಕೇಳಿ ಅನುಭವಿಸಬೇಕಾಗಿ ಬರುತ್ತಿದ್ದಿತು. ಅವುಗಳನ್ನೆಲ್ಲ ಕೇಳಿ ಮೌನದಲ್ಲಿ ಚಿಂತಿಸುವದಲ್ಲದೆ ಬೇರೆ ಯಾವ ದಾರಿಯೂ ಅವನಿಗಿರಲಿಲ್ಲ. ಇಷ್ಟೆಲ್ಲ ಸಂಕಟಗಳನ್ನು ಅನುಭವಿಸಬೇಕಾಗಿ ಬಂದರೂ, ಕುಂತಳ ಸಿಂಹಾಸನದ ಮೇಲೆ ಅವನು ಇಟ್ಟಿದ್ದ ದೃಷ್ಟಿಯನ್ನು ಬಿಡಲಿಲ್ಲ. ಅಧರ್ಮಪರಿಪೂರ್ಣವಾದ ಸ್ವಾಮಿದ್ರೋಹದಿಂದ ವಿಜಯವು ಲಭಿಸಲಾರದು, ಎಂಬ ಸಂಗತಿಯು ಅವನ ಚಾಣಾಕ್ಷ ಮೇಧಸ್ಸಿಗೆ ಹೊಳೆಯಲಿಲ್ಲವು.

ಅವನು ಮನೆಗೆ ಬಂದನು; ಮೌನದಲ್ಲಿ ತನ್ನ ಕಾರ್ಯಾಲೋಚನೆಯ ಕೋಣೆಯಲ್ಲಿ ಕುಳಿತು ಗಾಢವಾಗಿ ಚಿಂತಿಸತೊಡಗಿದನು ಹೀಗೆ ಚಿಂತಾಮಗ್ನನಾಗಿ ಕುಳಿತಿರಲು, ಅವನ ಮಗನಾದ ಮದನಕುಮಾರನು ಬಂದನು. ಮಗನು ತಂದೆಯ ಮುಖದಲ್ಲಿ ಕಾಣುತ್ತಿರುವ ಚಿಂತಾತರಂಗಗಳನ್ನು ಕಂಡು ಆಶ್ಚರ್ಯಪರವಶನಾದನು. ಅವನು ತಂದೆಗೆ ವಂದಿಸಿದ ನಂತರ ನುಡಿದನು: "ಅಪ್ಪಾ, ಏನು, ಬಹಳ ಆಲೋಚನಾಮಗ್ನರಾಗಿರುವಿರಿ!" ಎಂಬುದಾಗಿ.

"ಹೌದು. ಮದನ, ಈಗಲೀಗ ನಮ್ಮ ಯತ್ನಗಳು ಪರಾಜಯವನ್ನು ಹೊಂದುತ್ತಲಿರುವವು. ಅರಸನು ನನ್ನ ಅಧಿಕಾರಗಳನ್ನು ಕಡಿಮೆ ಮಾಡಲು ಯತ್ನಿಸುತ್ತಿರುವನು. ಜನರ ಮಧ್ಯದಲ್ಲಿ ಹರಡಿರುವ ನನ್ನ ಕೀರ್ತಿಯು ಕ್ಷಯಿಸತೊಡಗಿರುವದು."

"ಇವು 'ಅಂತ್ಯ ಪ್ರಯತ್ನಕ್ಕೆ ತಕ್ಕ ಸಮಯವು ಬಂದಿದೆ' ಎಂಬುದನ್ನು ಸೂಚಿಸುತ್ತಲಿರುವವು. ಇನ್ನು ವಿಳಂಬಮಾಡಲಾಗದು."

"ಆದರೆ ಆ ಪ್ರಯತ್ನವಿಲ್ಲದೆ ಸಾಗದೆ? ಎಂಬುದನ್ನು ಕುರಿತು ನಾನು ಆಲೋಚಿಸುತ್ತಿರುವೆನು. ರಾಜಕುಮಾರಿಯನ್ನು ವಶಪಡಿಸಿಕೊಳ್ಳುವುದ

ರಲ್ಲಿ ನೀನು ವಿಫಲನಾದೆ! ಇಲ್ಲದಿದ್ದರೆ ನಮ್ಮ ಪ್ರಯತ್ನಗಳು ಸುಲಭ ಸಾಧ್ಯಗಳಾಗುತ್ತಿದ್ದುವು."

"ಆ ಹಾಳು ಚಂದ್ರಹಾಸನಿಂದ ಆ ಪ್ರಯತ್ನವು ಪರಾಜಯವನ್ನು ಹೊಂದಿತು. ಅವನು ದೊಡ್ಡ ಪ್ರತಿಬಂಧಕವಾಗಿದ್ದಾನೆ. ನಮ್ಮ ದಾರಿಯಲ್ಲಿ ನಿಂತಿರುವ ಆ ಮುಳ್ಳನ್ನು ನಾವು ಬೇಗನೆ ತೆಗೆಯತಕ್ಕದಾಗಿದೆ."

"ಹೌದು. ಆದಷ್ಟು ಬೇಗನೆ ಅವನ ಇಹಲೋಕವಾಸವನ್ನು ಸಮಾಪ್ತಿಗೊಳಿಸತಕ್ಕದ್ದು. ಅದರಂತೆಯೇ ಮಾರ್ತಾಂಡವರ್ಮನೂ ಭುವನವಿಕ್ರಮನೂ ನಮ್ಮ ದಾರಿಯಲ್ಲಿರುವ ಕಂಟಕಗಳಾಗಿರುತ್ತಾರೆ!"

"ಆಶೆಯನ್ನು ತೋರಿಸಿದರೆ, ಅವರು ನಮ್ಮ ದಾರಿಗೆ ಬರಲಾರರೇ?"

"ನನಗೆ ಅವರಲ್ಲಿ ಅಷ್ಟು ನಂಬಿಕೆಯಿಲ್ಲ!" ಎಂದು ವಿಚಾರಮಗ್ನನಾದ ದುಷ್ಟಬುದ್ಧಿಯು "ಅವರು ಸ್ವಾಮಿನಿಷ್ಠ ಸೇವಕರಿರುವರು."

"ಹಾಗಾದರೆ ಅವರನ್ನು ಕಿತ್ತೊಗೆಯುವದೇ ಒಳ್ಳೆಯದು"

"ನಾವು ನಮ್ಮ ಪ್ರಯತ್ನವನ್ನು ಮಾರ್ತಾಂಡವರ್ಮನೂ ಭುವನ ವಿಕ್ರಮನೂ ಹಿಂದಿರುಗಿ ಬರುವ ಮೊದಲೇ ಪ್ರಾರಂಭಿಸುವದೊಳ್ಳೆಯದು." ಎಂದು ತನ್ನ ಕಣ್ಣುಗಳನ್ನು ಮಗನ ಕಡೆಗೆ ಹೊರಳಿಸುತ್ತ ದುಷ್ಟಬುದ್ಧಿಯೂ ನುಡಿದನು: "ಅವರು ಬಂದರೆ ನಮ್ಮ ಉದ್ಯಮಗಳಿಗೆ ಪ್ರತಿಬಂಧಗಳು ಹೆಚ್ಚುವವು."

"ಹೌದು ಹಾಗೆಯೇ ಆಗಿದೆ ನನ್ನ ಆಲೋಚನೆಯು ಸಹ!"

"ಎಲ್ಲವೂ ಸಿದ್ಧನಾಗಿದೆಯಷ್ಟೆ? ನಾಡದ್ದು ಚಂಡೀದೇವಾಲಯದಲ್ಲಿ ಉತ್ಸವವು! ಈ ಉತ್ಸವದಲ್ಲಿ ಭಾಗವನ್ನು ವಹಿಸುವದಕ್ಕಾಗಿ ಮಹಾರಾಜರನ್ನು ಆಮಂತ್ರಿಸಿ ಕರೆದುಕೊಂಡು ಬರುವೆನು. ದೇವಾಲಯದ ಹತ್ತಿರದಲ್ಲಿ ಒಂದು ಕಾಡಿದೆಯಷ್ಟೆ? ನಾವು ದೇವಾಲಯದಿಂದ ಹಿಂದಿರುಗುವಾಗ ನಾಲ್ಕೆಂಟು ಮಂದಿಯನ್ನು ಆ ಕಾಡಿನಲ್ಲಿ ಸನ್ನದ್ಧರನ್ನಾಗಿ ಮಾಡಿಡಬೇಕು. ನಾವು ಅಲ್ಲಿಗೆ ಬಂದೊಡನೆಯೇ ನನ್ನನ್ನೂ ಮಹಾರಾಜರನ್ನೂ ಗದಾಪ್ರಹಾರಗಳಿಂದ ಮೂರ್ಛಿತರಾಗುವಂತೆ ಅವರು ಮಾಡಲಿ! ಅನಂತರ ಅರಸರನ್ನು ಬಂಧನಸ್ಥರನ್ನಾಗಿ ಮಾಡಿ, ಅರಮನೆಯನ್ನೂ ಬೊಕ್ಕಸವನ್ನೂ ಕೈವಶಪಡಿಸಿಕೊಳ್ಳತಕ್ಕದ್ದು!"

"ತಮ್ಮನ್ನೂ ಪ್ರಹರಿಸಬೇಕೆ?"

"ಹೌದು; ಇಲ್ಲದಿದ್ದರೆ, ಈ ಕೃತ್ಯದಲ್ಲಿ ನಮ್ಮ ಕೈವಾಡವಿದೆಯೆಂದು ಜನರು ತಿಳಿಯಬಹುದು. ಒಂದುವೇಳೆ ಅರಸನು ನಮ್ಮ ಬಂಧನದಿಂದ ವಿಮುಕ್ತನಾದರೂ ಅದು ಯಾರೋ ತಸ್ಕರರ ವರ್ತನೆಯೆಂದು ಊಹಿಸ

ಬೇಕಲ್ಲವೆ, ಆ ಕಾರಸ್ಥಾನದಲ್ಲಿ ನಮ್ಮ ಕೈವಾಡವಿರುವುದು ತಿಳಿಯಬಾರದು."

ಇಷ್ಟರಲ್ಲಿ ಏನೋ ಒಂದು ಸಪ್ಪಳವು ಕೇಳಿಬಂದಿತು; ಅದನ್ನು ಶ್ರಾವಿಸಿದೊಡನೆಯೇ ಅನ್ಯರು ಯಾರಾದರೂ ತಮ್ಮ ಸಂಭಾಷಣೆಯನ್ನು ಕೇಳುತ್ತಿರುವರೇ? ಎಂಬ ಸಂದೇಹವು ಅವರಿಬ್ಬರನ್ನೂ ಬಾಧಿಸಿತು. ಅವರಿಬ್ಬರೂ ಭಯಪೀಡಿತರಾಗಿ, ಬಿಳುಪೇರಿದ ಮುಖಗಳೊಡನೆ ಒಬ್ಬರನ್ನೊಬ್ಬರು ನೋಡುತ್ತ ನಿಂತರು. ಅಮಾತ್ಯನು ಮಗನೊಡನೆ ಹೇಳಿದನು: ' ಮದನ, ಯಾರದೋ ಕಾಲುಸಪ್ಪಳವಾದ ಹಾಗೆ ಕೇಳಿಬಂದಿದೆ; ಯಾರೋ ಗುಪ್ತಹೇರರು ನಮ್ಮ ಸಂಭಾಷಣೆಯನ್ನು ಕೇಳುತ್ತ ನಿಂತಿರಬಹುದು. ಹೊರಗೆ ಹೋಗಿ ನೋಡು; ಯಾರಾದರೂ ಹೊಂಚು ಹಾಕಿ ನಮ್ಮ ಸಂಭಾಷಣೆಯನ್ನು ಕೇಳುತ್ತಲಿದ್ದರೆ ಅವರನ್ನು ಹಿಡಿಯತಕ್ಕದ್ದು."

ತಂದೆಯ ನಿರ್ದೇಶದಂತೆ ಮದನನು ಹೊರಗೆ ಹೋಗಿ ನೋಡಿದನು; ಆದರೆ ಅವನು ಯಾರನ್ನೂ ಕಾಣಲಿಲ್ಲ. ಬಹುಶಃ ತಂದೆಯು ಬೀದಿಯಲ್ಲಿ ತಿರುಗುತ್ತಿರುವ ಜನರ ಕಾಲುಸಪ್ಪಳವನ್ನು ಕೇಳಿ ಈ ರೀತಿ ನುಡಿದದ್ದಿರಬಹುದೆಂದು ನೆನೆದು, ಅವನು ಹಿಂದಿರುಗಿ ಬಂದನು.

"ಯಾರು?" ಎಂದನು ದುಷ್ಟಬುದ್ಧಿಯು.

"ನಾನು ಯಾರನ್ನೂ ಕಾಣಲಿಲ್ಲವಲ್ಲ! ಬಹುಶಃ ತಾವು ಬೀದಿಯಲ್ಲಿ ಸಂಚರಿಸುತ್ತಿರುವ ಜನರ ಕಾಲುಸಪ್ಪಳದಿಂದ ಭ್ರಮಿಸಿದಂತೆ ತೋರುತ್ತದೆ!"

"ಇಲ್ಲ. ಯಾರೋ ಈ ವಸತಿಯ ಹಿಂದೆ ಸಂಚರಿಸಿದ ಶಬ್ದವನ್ನು ನಾನು ಕೇಳಿದೆನು" ಎಂದು ತನ್ನ ಕೋಣೆಯ ಹಿಂಬದಿಗೆ ತನ್ನ ಬೆರಳನ್ನು ತೋರಿಸಿ ಅಮಾತ್ಯನು ಭೀತಿಯಿಂದ ನಡುಗುತ್ತ ಹೇಳಿದನು: "ಮದನ, ನೀನು ಇನ್ನೊಮ್ಮೆ ಹೋಗಿ ನೋಡು; ಅವನು ನಮ್ಮ ಕರಗಳಿಗೆ ಸಿಗದೆ ಹೋದರೆ, ನಮ್ಮ ಪ್ರಯತ್ನವು ಜಲಮಧ್ಯ ಯಜ್ಞವಾಗಿ ಪರಿಣಮಿಸುವದು. ರಾಜದ್ರೋಹದ ದಂಡನೆಯನ್ನು ನಾವು ಅನುಭವಿಸಬೇಕಾಗಿ ಬರುವದು."

ತಂದೆಯ ಮಾತಿನಂತೆ ಮನೆಯ ಹಿಂದಿನ ಓಣಿಗೆ ಹೋಗಿ ನೋಡಿದನು ಮದನನು. ಆ ಓಣಿಯಲ್ಲಿ ಸ್ವಲ್ಪ ಕೆಸರಿದ್ದಿತು. ಆ ಕೆಸರಿನಲ್ಲಿ ಒಬ್ಬ ಮನುಷ್ಯನು ಆಗ ತಾನೇ ಸಂಚರಿಸಿದ ಪಾದ ಚಿಹ್ನಗಳು ಮದನನಿಗೆ ವ್ಯಕ್ತವಾಗಿ ಕಂಡು ಬಂದುವು; ಆದರೆ ಹುಡುಕಲು ಅಲ್ಲೆಲ್ಲಿಯೂ ಆ ಮನುಷ್ಯನು ಕಂಡುಬರಲಿಲ್ಲ. ಒಂದು ವೇಳೆ ಅವನು ಓಣಿಯನ್ನು ತ್ಯಜಿಸಿ ಹೋಗಿರಬಹುದು ಬೀದಿಯಲ್ಲಿ ನೂರಾರು ಮಂದಿ ಸಂಚರಿಸುತ್ತಿರುವಾಗ, ತಮ್ಮ ರಹಸ್ಯವನ್ನರಿತ ವ್ಯಕ್ತಿಯು ಯಾರೆಂಬುದನ್ನು ಹೇಗೆ ತಾನೆ ತಿಳಿಯಲು ಸಾಧ್ಯ

ವಾಗುವುದು? ಮದನನಿಗೆ ಏನು ಮಾಡಬೇಕೆಂಬುದು ತೋಚದೆ ಹೋಯಿತು. ಮೂರನೆಯವನೊಬ್ಬನು ತಮ್ಮ ರಹಸ್ಯವನ್ನು ಅರಿತನಲ್ಲಾ? ಎಂಬ ಭಯ ದಿಂದ ದೇಹವು ಕಂಪಿಸಿತು! ಆದರೂ ಕೆಸರನ್ನು ತುಳಿದ ವ್ಯಕ್ತಿಯ ಕಾಲುಗಳ ಮೇಲೆ ಮಣ್ಣು ಇದ್ದೇ ಇರಬೇಕೆಂದೂ ಅವನು ಬೀದಿಯಲ್ಲಿ ಬಹು ದೂರ ಹೋಗಿರಲಾರನೆಂದೂ ಮದನನು ತರ್ಕಿಸಿದನು.

ಮದನನು ತಮ್ಮ ಸಂಭಾಷಣೆಯನ್ನು ಶ್ರಾವಿಸಿದ ವ್ಯಕ್ತಿಯನ್ನು ಕಂಡು ಹಿಡಿಯುವದಕ್ಕಾಗಿ ಬೀದಿಯನ್ನು ಸೇರಿದನು. ಅವನ ತರ್ಕದಂತೆಯೇ ಕಾಲುಗಳಲ್ಲಿ ಕೆಸರಿರುವ ಒಬ್ಬ ವ್ಯಕ್ತಿಯು ದೃಗ್ಗೋಚರನಾದನು. ಅಮಾತ್ಯ ನಂದನನು ಅವನ ಸಮೀಪಕ್ಕೆ ಹೋಗಿ:—"ಯಾರಯ್ಯಾ ನೀನು?" ಎಂದು ಪ್ರಶ್ನಿಸಿದನು.

"ಏನು ಬೇಕಯ್ಯಾ ನಿನಗೆ?" ಎಂದು ಆ ಪುರುಷನು ಮದನನನ್ನು ದುರದುರನೆ ನೋಡುತ್ತ ನುಡಿದನು.

"ನಿನ್ನ ಹೆಸರೇನು?"

"ನೀನು ನನ್ನ ಕುಲಗೋತ್ರಗಳನ್ನು ಬಯಸುವುದೇಕೆ? ನಿನ್ನ ಸಹೋ ದರಿಗೆ ವರನನ್ನು ಹುಡುಕುತ್ತಿರುವೆಯಾ?"

ಆ ವ್ಯಕ್ತಿಯು ತರುಣನು; ೧೭-೧೮ ವರ್ಷಗಳಿಗಿಂತ ಹೆಚ್ಚು ಪ್ರಾಯ ವಿರಲಾರದು. ನೋಡುವದಕ್ಕೆ ಸುಂದರನು; ಕಣ್ಣುಗಳು ಉಜ್ವಲವಾಗಿ ಹೊಳೆಯುತ್ತಲಿದ್ದವು. ತನ್ನನ್ನು ಆ ತರುಣನು ಪರಿಹಾಸ ಮಾಡಿದುದನ್ನು ವೀಕ್ಷಿಸಿ, ಮದನನಿಗೆ ಸಹಿಸಲು ಸಾಧ್ಯವಾಗದೆ ಹೋಯಿತು. ಅವನು ಕ್ರೋಧ ಮತ್ತು ಅಧಿಕಾರಯುಕ್ತ ವಾಣಿಯಲ್ಲಿ ನುಡಿದನು: "ನೀನು ಯಾರಾ ದರೂ ಚಿಂತೆಯಿಲ್ಲ; ನಿನ್ನನ್ನು ಕರೆದುಕೊಂಡು ಬರಲು ಅಮಾತ್ಯರು ಆಜ್ಞಾಪಿ ಸಿರುವರು; ನೀನು ನನ್ನನ್ನು ಹಿಂಬಾಲಿಸತಕ್ಕದ್ದು!"

"ಏನಯ್ಯಾ ಮಹಾರಾಯ! ನಿನಗೆ ಪಿತ್ತೋದ್ರೇಕದ ಕಾಹಿಲೆಯಿದೆ ಯೇನು? ದಾರಿಯಲ್ಲಿ ಹೋಗುವವರನ್ನೇಕೆ ಅಡ್ಡಗಟ್ಟುತ್ತಿರುವೆ?" ಎಂದು ಆ ತರುಣನು ಬಹಳ ಸಿಟ್ಟಾದವನ ಹಾಗೆ ನಟಿಸಿದನು.

"ನೀನು ಶತ್ರುಪಕ್ಷದವರ ಗೂಢಚಾರನಾಗಿರುವದರಿಂದ ನಿನ್ನನ್ನು ಬಂಧನಸ್ಥನನ್ನಾಗಿ ಮಾಡಿರುವೆನು."

"ಹೊಳೆಯ ನೀರಿಗೆ ದೊಣ್ಣೆನಾಯಕನ ಅಪ್ಪಣೆಯೇಕೆ? ನನ್ನನ್ನು ಬಂಧಿಸಲು ನಿನಗೆ ಅಧಿಕಾರವನ್ನು ನೀಡಿದವರಾರು?"

"ನಾನು ಯಾರೆಂದು ಬಗೆದಿರುವೆ?" ಮದನನು ದರ್ಪದಲ್ಲಿ ನುಡಿದನು.

"ನೀನೂ ನನ್ನ ಹಾಗೆ ಕೈ, ಕಾಲು, ಕಣ್ಣು, ಮೂಗು ಇವುಗಳಿಂದ ಕೂಡಿದ ಒಂದು ನರಪ್ರಾಣಿ!"

"ಸಾಕು ಮಾಡು ನಿನ್ನ ಅಧಿಕಪ್ರಸಂಗ! ನಿನ್ನನ್ನು ಬಂಧನಸ್ಥನನ್ನಾಗಿ ಮಾಡಿರುವೆನು. ನಾನು ಉಪಮಂತ್ರಿಯಾದ ಮದನಕುಮಾರನಿರುವೆನು."

"ಬೇಷ್! ಉಪಸಚಿವೋತ್ತಮರೆ, ಒಳ್ಳೆಯದು! ತಮ್ಮ ಹಣೆಯಲ್ಲಿ ಉಪಸಚಿವರೆಂದು ಉಲ್ಲೇಖಿಸಿದ ಹಾಗೆ ಕಾಣುವದಿಲ್ಲವಲ್ಲ! ಅದನ್ನು ನಾನು ಹೇಗೆ ಊಹಿಸಲಿ? ತಾವು ಉಪಮಂತ್ರಿಗಳೆಂಬುದಕ್ಕೆ ತಕ್ಕಷ್ಟು ನಿದರ್ಶನ ಗಳಿಲ್ಲದಿರುವದರಿಂದ ತಮ್ಮ ಮಾತುಗಳನ್ನು ನಾನು ಅನುಸರಿಸುವದಿಲ್ಲ. ತಲೆಬಿಸಿಯಾದ ಯಾವನಾದರೂ ಒಬ್ಬ ಹುಚ್ಚನು ನುಡಿಯುತ್ತಿರುವ ಮಾತುಗಳನ್ನು ಅನುಸರಿಸುವಷ್ಟು ಮುಠ್ಠಾಳನು ನಾನಲ್ಲ. ಕುಂತಳದ ಬೀದಿ ಗಳಲ್ಲಿ ಸಂಚರಿಸಲು ಎಲ್ಲರಿಗೂ ಸರಿಸಮಾನ ಸ್ವಾತಂತ್ರ್ಯವಿದೆಯೆಂಬುದನ್ನು ತಾವು ನೆನಪಿನಲ್ಲಿಡಿರಿ" ಎಂದು ಮದನನ ನುಡಿಗಳಿಗೆ ಸ್ವಲ್ಪವಾದರೂ ಬೆದ ರದೆ ಆ ತರುಣನು ನುಡಿದನು.

"ನಾನು ಉಪಮಂತ್ರಿಯು ಹೌದೋ ಅಲ್ಲವೋ ಎಂಬುದನ್ನು ಯಾರನ್ನು ಬೇಕಾದರೂ ಕೇಳಿ ತಿಳಿದುಕೋ!"

"ತಮ್ಮ ಮಾಹಿತಿಗಳನ್ನು ಅರಿಯುವುದಕ್ಕಾಗಿ ಅಲೆಯಲು ನನಗೆ ಸಮಯವಿಲ್ಲ; ಹುಚ್ಚರಾದ ತಾವು ಸಮಯದ ಬೆಲೆಯನ್ನು ಅರಿತಿರಲಿಕ್ಕಿಲ್ಲ!"

"ಮಾತುಗಳಿಂದ ಮರುಳುಗೊಳಿಸಿ ಪಾರಾಗುವೆನೆಂದು ನೀನು ನೆನಸ ಬೇಡ; ಇಲ್ಲಿಂದ ಒಂದು ಹೆಜ್ಜೆಯನ್ನು ಮುಂದಿಡಲು ಬಿಡಲಾರೆನು."

"ಹೂಂ-ಹಾಗೇನು?"

"ಹೌದು!" ಎಂದು ನುಡಿದು, ಮುಂದೆ ಹೆಜ್ಜೆಯನ್ನಿಡಲು ಪ್ರಯತ್ನಿ ಸುತ್ತಲಿದ್ದ ಆಗುಂತಕನ ಕೈ ಹಿಡಿದು ನಿಲ್ಲಿಸಲು ಅಮಾತ್ಯನಂದನನು ಉದ್ಯಮಿ ಸಿದನು. ಅಪರಿಚಿತ ತರುಣನು: "ನೀನು ಮರ್ಯಾದೆಯಿಂದ ಮಣಿಯು ವವನಲ್ಲವೆಂದು ತೋರುತ್ತದೆ! ಉದ್ಧಟತನದ ಫಲವನ್ನು ಹಾಗಾದರೆ ನೀನು ಅನುಭವಿಸಬೇಕಾಗಿ ಬರುವದು" ಎಂದೆನ್ನುತ್ತ ಅಮಾತ್ಯನಂದನನ ಮೂಗಿನ ಮೇಲೆ ಆ ತರುಣನು ಬಲವಾದ ಒಂದು ಪ್ರಹಾರವನ್ನು ನೀಡಿ ದನು. ಅದರೊಡನೆಯೇ ಮದನನನ್ನು ತಳ್ಳುವ ಕೃತ್ಯವೂ ನೆರವೇರಿತು. ಇನ್ನೊಂದು ಕ್ಷಣದಲ್ಲಿಯೇ ಮದನನು ಕಾಲುತಪ್ಪಿ ದೊಪ್ಪನೆ ಕುಂಬಳಕಾಯಿ ಯಂತೆ ಭೂಮಿದೇವಿಯ ಮಡಲಲ್ಲಿ ಬಿದ್ದನು. ಅವನು ತಾನು ಪತನ ಹೊಂದಿದಲ್ಲಿಂದ ಏಳುವದರೊಳಗಾಗಿ ಆ ತರುಣನು ಅಲ್ಲಿಂದ ಮಾಯ

ವಾಗಿದ್ದನು! ತಾನು ಬಿದ್ದುದನ್ನು ಕಂಡು ಬೀದಿಹೋಕರು ಎಲ್ಲಿ ನಗುವರೋ ಎಂಬ ಲಜ್ಜೆಯಿಂದ ಅಮಾತ್ಯನಂದನನು ಮೆಲ್ಲನೆ ಎದ್ದು ನಿಂತನು. ಅವನು ನೋಡುವಾಗ, ತನ್ನನ್ನು ಸೋಲಿಸಿದ ವ್ಯಕ್ತಿಯು ಹತ್ತೆಂಟು ಮಾರು ಮುಂದೆ ಹೋಗುತ್ತಿರುವದು ಕಾಣಬಂದಿತು. ಅವನು ಒಂದು ಬಾರಿ ತನ್ನ ಕಡೆಗೆ ತಿರುಗಿ ನೋಡಿ ನಗುತ್ತ: "ಅಮಾತ್ಯನಂದನರೇ, ನವ ಸ್ಕಾರ ಸಮಯ ಬಂದಾಗ ಕಾಣುವೆನು" ಎಂದು ನುಡಿಯುತ್ತಿರುವ ದೃಶ್ಯವನ್ನು ಮದನನು ಅವಲೋಕಿಸಿದನು. ಹೇಗಾದರೂ ಆ ಚತುರನನ್ನು ಹಿಡಿಯಬೇಕೆಂದು ಸಂಕಲ್ಪಿಸಿ, ಹಲವು ಮಾರುಗಳಷ್ಟು ದೂರ ಅಮಾತ್ಯನಂದನನು ಓಡಿದನು. ಅಲ್ಲಿಗೆ ಅವನು ತಲುಪುವದರೊಳಗಾಗಿ ಆ ತರುಣನು ಅಲ್ಲಿಂದ ಮಾಯ ವಾಗಿದ್ದನು. ತನ್ನನ್ನು ಇಷ್ಟು ಸುಲಭದಲ್ಲಿ ಸೋಲಿಸಿದ ಆ ತಂತ್ರಶಾಲಿಯು ಎತ್ತ ತೆರಳಿದನೆಂಬುದನ್ನು ತಿಳಿದುಕೊಳ್ಳಲು ಮದನನು ಶಕ್ತನಾಗಲಿಲ್ಲ.

ತಮ್ಮ ಸಂಭಾಷಣೆಯನ್ನು ಹೊಂಚು ಹಾಕಿ ಕೇಳಿದ ವ್ಯಕ್ತಿಯನ್ನು ಹಿಡಿಯುವುದರಲ್ಲಿ ಕೃತಕಾರ್ಯನಾಗದೆ, ಅಮಾತ್ಯನಂದನನು ತನ್ನ ಮೂಗು ತುಟಿಗಳು, ಇವುಗಳನ್ನು ಒಡೆದುಕೊಂಡು ನಿರಾಶೆಯಲ್ಲಿ ಸ್ವನಿಕೇತನಕ್ಕೆ ಹಿಂದಿರುಗಿದನು. ಅಮಾತ್ಯನಿಗೆ ತನ್ನ ಪುತ್ರನ ಈ ವಿಚಿತ್ರ ಅವಸ್ಥೆಯನ್ನು ಕಂಡು ಅತ್ಯಂತ ಆಶ್ಚರ್ಯವಾಯಿತು. ಬಹಳ ಮಾಡಿ ಆ ಚಾರನು ಮದನನ ಕೈಯಿಂದ ಪಾರಾಗಿ ಹೋದನೆಂದು ದುಷ್ಟಬುದ್ಧಿಯು ಊಹಿಸಿದನು.

'ಮದನ!' ಎಂದು ಆಶ್ಚರ್ಯ ಮತ್ತು ಭಯಕಂಪಿತ ಸ್ವರದಲ್ಲಿ ಅಮಾತ್ಯನು: 'ಆ ಚಾರನು ಸಿಗಲಿಲ್ಲವೆ?'

'ಇಲ್ಲ ನನಗೆ ಈ ಅವಸ್ಥೆಯನ್ನು ಮಾಡಿ ಹೊರಟು ಹೋದನು.' ದುಃಖ ಭಾವದಲ್ಲಿ ತನಗೆ ಸಂಪ್ರಾಪ್ತವಾದ ಸೋಲನ್ನು ಮದನಕುಮಾರನು ತಂದೆಗೆ ವಿವರಿಸಿ ಹೇಳಿದನು ಸ್ವಲ್ಪಹೊತ್ತು ಮೌನವನ್ನು ಅವಲಂಬಿಸಿದ್ದು, ಅನಂತರ ದುಷ್ಟಬುದ್ಧಿಯು ಹೇಳಿದನು: 'ಆ ಮನುಷ್ಯನು ಹಾಗಾದರೆ ಮಹಾ ಚಾಣಾಕ್ಷನಾಗಿ ತೋರುತ್ತಾನೆ. ಅವನು ಅರಸನಿಂದ ನಿಯಮಿತನಾದ ಚಾರನೇ ಆಗಿದ್ದರೆ ನಮಗೆ ಬೇಗನೆ ವಿಪತ್ತುಗಳು ಬರುವುದರಲ್ಲಿ ಸಂದೇಹವಿಲ್ಲ. ಅವನನ್ನು ಬಂಧಿಸಲು ಸಾಧ್ಯವಾಗದಿದ್ದರೂ, ಅವನು ಯಾರೆಂದೂ, ಎತ್ತ ತೆರಳಿದನೆಂದೂ ತಿಳಿಯಬೇಕಾಗಿದ್ದಿತು. ಆ ಪಿಶಾಚಿಯಿಂದ ಕಳೆದ ಹದಿನಾರು ವರ್ಷಗಳಿಂದ ನಾನು ಜರುಗಿಸುತ್ತಿರುವ ಸಾಹಸವು ಮಣ್ಣುಗೂಡುವದಲ್ಲದೆ, ರಾಜ ದಂಡನೆಗೆ ಗುರಿಯಾಗಬೇಕಾಗಿ ಬರುವದು."

"ನಾನು ಅವನನ್ನು ಹಿಂಬಾಲಿಸಲು ಬಹಳವಾಗಿ ಯತ್ನಿಸಿದೆನು;

ಆದರೆ ಅವನು ಎತ್ತ ತೆರಳಿದನೆಂಬುದನ್ನು ತಿಳಿಯಲು ಶಕ್ತನಾಗಲಿಲ್ಲ."

"ಇದು ಅವನು ನಿನಗಿಂತ ಎಷ್ಟರಮಟ್ಟಿಗೆ ಬುದ್ಧಿಶಾಲಿಯಾಗಿರುವನೆಂಬುದನ್ನು ಸೂಚಿಸುತ್ತಿದೆ. ನೀನು ಬಹು ವಿನಯದಲ್ಲಿ ಅವನೊಡನೆ ವರ್ತಿಸಿ, ಮಾತಿನಿಂದ ಅವನನ್ನು ಮರುಳುಗೊಳಿಸಿದ್ದರೆ ಕಾರ್ಯವು ಕೈಗೂಡುತ್ತಿತ್ತು" ಎಂದು ಪುತ್ರನ ವರ್ತನೆಯು ವಿವೇಕಶೂನ್ಯವಾದುದೆಂಬುದನ್ನು ಸೂಚಿಸುತ್ತ ದುಷ್ಟಬುದ್ಧಿಯು ನುಡಿದನು.

"ಅವನು ಅಷ್ಟರ ಮಟ್ಟಿಗಿರುವ ತಂತ್ರಶಾಲಿಯೆಂದು ನಾನು ಬಗೆದಿರಲಿಲ್ಲ."

"ಆದುದಾಯಿತು; ಇನ್ನು ಕಳೆದು ಹೋದ ಕಾರ್ಯವನ್ನು ಚಿಂತಿಸಿ ಫಲವಿಲ್ಲ ಅವನು ಅರಮನೆಗೆ ತೆರಳುವನೊ ಹೇಗೆಂದು ತಿಳಿಯಬೇಕಾಗಿದೆ. ಯಾವುದಾದರೂ ಒಂದು ಉಪಾಯದಿಂದ ಅವನನ್ನು ಅರಮನೆಗೆ ಹೋಗದಂತೆ ಮಾಡಬೇಕು. ನೀನೀಗಲೇ ಅರಮನೆಗೆ ಹೋಗು. ಅವನು ರಾಜಗೃಹಕ್ಕೆ ತೆರಳುವನೆಂಬ ನಂಬಿಕೆಯು ನನಗಿದೆ. ಅಲ್ಲಿ ಅವನು ಬರುವಾಗಲೇ ಅವನು ಶತ್ರುಪಕ್ಷದ ಚಾರನೆಂದೂ, ನಮ್ಮ ರಾಜ್ಯಶಾಸನದ ರಹಸ್ಯವನ್ನು ತಿಳಿದುಕೊಳ್ಳಲು ಪ್ರಯತ್ನಿಸಿದನೆಂದೂ ರಾಜದ್ರೋಹದ ಆರೋಪವನ್ನು ಹೊರಿಸಿ, ಅವನನ್ನು ಸೆರೆಹಿಡಿದು ಕಾರಾಗೃಹದಲ್ಲಿರಿಸಬೇಕು. ಈ ಯತ್ನದ ಸುಳುವು ಮಹಾರಾಜರಿಗೆ ತಿಳಿಯದಂತೆ ಜಾಗರೂಕತೆಯಿಂದ ವರ್ತಿಸಬೇಕು. ಅವನನ್ನು ನೀನು ಗುರುತಿಸುವಿಯಾ?"

"ಧಾರಾಳವಾಗಿ. ಯಾವ ವೇಷವನ್ನು ಧರಿಸಿ ಬಂದರೂ ಗುರುತಿಸಬಲ್ಲೆನು!"

"ಹಾಗಾದರೆ ಬೇಗನೆ ಹೊರಡು. ಈ ಹದಿನಾರುವರ್ಷಗಳ ನಿರಂತರ ಪ್ರಯತ್ನದ ವಿಜಯವೂ ನಮ್ಮ ಪ್ರಾಣಗಳೂ ನಿನ್ನ ಈ ಕೆಲಸವನ್ನು ಹೊಂದಿಕೊಂಡಿವೆಯೆಂಬುದನ್ನು ನೆನಪಿನಲ್ಲಿಡು."

"ಹಾಗೆಯೇ ಆಗಲಿ! ಆ ತಂತ್ರಶಾಲಿಯನ್ನು ಶೋಧಿಸಿ ಬಂಧನಸ್ಥನನ್ನಾಗಿ ಮಾಡುವೆನು." ಎಂದು ಹೇಳಿ, ಮದನನು ತನ್ನ ಜನಕನು ಆಜ್ಞಾಪಿಸಿದ ಕೆಲಸವನ್ನು ನೆರವೇರಿಸುವದಕ್ಕಾಗಿ ತೆರಳಿದನು.

ದುಷ್ಟಬುದ್ಧಿಯು ಏಕಾಂಗಿಯಾಗಿ ಕುಳಿತು ಆಲೋಚಿಸಲು ಪ್ರಾರಂಭಿಸಿದನು. ಒಮ್ಮೆ ಹರ್ಷ, ಇನ್ನೊಮ್ಮೆ ವಿಷಾದ ಇವುಗಳೆರಡೂ ಅವನಲ್ಲಿ ತೋರುತ್ತಿದ್ದುವು. ಇನ್ನೆರಡು ದಿನಗಳಲ್ಲಿಯೇ ತಾನು ಕುಂತಳದ ಚಕ್ರವರ್ತಿಯಾಗುವೆನು, ಎಂಬುದೇ ಅವನ ಹರ್ಷಕ್ಕೆ ಕಾರಣವಾಗಿದ್ದಿತು. ಒಮ್ಮೆ

ಗದ್ದುಗೆಯು ಸಿಲುಕಿದರೆ ಸಾಕು; ಅನಂತರ ತನ್ನ ಆಸನವನ್ನು ಭದ್ರಪಡಿಸುವದು ಸುಲಭವೆಂದು ಅವನು ವಿಚಾರಿಸಿದ್ದನು. ಹೆಚ್ಚಿನ ಸೇನಾಭಾಗವು ಲೂಟರನ್ನು ಆಕ್ರಮಿಸುವದಕ್ಕಾಗಿ ಗಡಿನಾಡಗಳಿಗೆ ತೆರಳಿದ್ದುದರಿಂದ, ಇಷ್ಟು ಸುಲಭವಾದ ಸಂದರ್ಭವು ಬೇರೊಂದಿರಲಿಲ್ಲ ಮಾರ್ತಂಡವರ್ಮನು ರಾಜಧಾನಿಯಲ್ಲಿದ್ದರೆ ತನ್ನ ಪ್ರಯತ್ನವು ಸಾಗದು, ಎಂಬುದನ್ನು ಅಮಾತ್ಯನು ಚೆನ್ನಾಗಿ ಬಲ್ಲನು. ಮಾರ್ತಂಡವರ್ಮನಂಥ ಅಕೃತ್ರಿಮ ಸ್ವಾಮಿನಿಷ್ಠೆಯುಳ್ಳ ಸೇನಾಪತಿಯ ಮುಂದೆ ತನ್ನ ಕಾರಸ್ಥಾನಗಳು ಫಲಕಾರಿಯಾಗಲಾರವೆಂದೂ, ಆದುದರಿಂದ ಅವನು ಸಮರಾಂಗಣಕ್ಕೆ ತೆರಳಿದ ಈ ಸುವರ್ಣ ಸಂದರ್ಭವನ್ನು ವೃಥಾ ವ್ಯಯಗೊಳಿಸಬಾರದೆಂದೂ ಅಮಾತ್ಯನು ಬಗೆದಿದ್ದನು. ತಾನು ಬೊಕ್ಕಸ, ಅರಮನೆ ಮತ್ತು ಆಯುಧಶಾಲೆ ಇವುಗಳನ್ನು ವಶಪಡಿಸಿಕೊಂಡ ನಂತರ ಮಾರ್ತಂಡವರ್ಮನು ಬಂದು ತನ್ನನ್ನು ಎದುರಿಸಿದರೂ ಯಾವುದಾದರೂ ಒಂದು ತಂತ್ರದಿಂದ ಅವನನ್ನು ಕೊಲೆಮಾಡಿ, ತನ್ನ ಮಾರ್ಗವನ್ನು ಸುಗಮಗೊಳಿಸಬಹುದೆಂದಾಗಿದ್ದಿತು ಅಮಾತ್ಯನ ವಿಚಾರವು! ಈ ವಿಚಾರಗಳೊಂದಿಗೆ ಈ ದಿನ ತಾನು ಮದನನೊಡನೆ ಆಡಿದ ರಹಸ್ಯ ಸಂಗತಿಯು ಅದನ್ನು ಆಶ್ರಾವಿಸುತ್ತಲಿದ್ದ ಆ ಅಪರಿಚಿತ ತರುಣನ ಮೂಲಕ ಬೈಲಿಗೆ ಬಂದು ತನ್ನ ಯತ್ನವೆಲ್ಲ ಎಲ್ಲಿ ನಿಷ್ಫಲವಾಗುವುದೋ, ಎಂಬ ಭೀತಿಯು ಅವನನ್ನು ಪೀಡಿಸುತ್ತಲಿದ್ದಿತು. ಈ ರೀತಿಯ ವಿವಿಧ ವಿಚಾರಗಳಲ್ಲಿ ತಲ್ಲೀನನಾಗಿ ದುಷ್ಟಬುದ್ಧಿಯು ಕುಳಿತಿರುವಾಗ, ಅರಮನೆಯಿಂದ ತನ್ನ ಬಳಿಗೆ ಒಬ್ಬ ರಾಜದೂತನು ಬರುತ್ತಿರುವದನ್ನು ಅಮಾತ್ಯನು ವೀಕ್ಷಿಸಿದನು. ಅವನನ್ನು ನೋಡುತ್ತಲೆ ಮಂತ್ರಿಯ ಮೈಬೆವರಿತು ಬಹುಶಃ ಆ ಚತುರನಾದ ತರುಣನು ತಾನು ಮದನನೊಡನೆ ಆಡಿದ ರಹಸ್ಯವಾರ್ತೆಯನ್ನು ಅರಸನ ಕಿವಿಗಳಿಗೆ ಹಾಕಿರಬಹುದು. ಅದನ್ನು ಕುರಿತು ಅನ್ವೇಷಿಸುವದಕ್ಕಾಗಿ ಈ ದೂತನನ್ನು ಅರಸನು ತನ್ನ ಬಳಿಗೆ ಕಳುಹಿಸಿರಲಿಕ್ಕೆ ಸಾಕು. ಇನ್ನು ತನ್ನ ಗತಿಯೇನು? ಎಂಬಿತ್ಯಾದಿ ವಿಚಾರಗಳು ಅಮಾತ್ಯನ ಮನೋವಲಯವನ್ನು ಆವರಿಸಿದುವು; ಮುಖವು ಬಿಳುಪೇರಿತು; ಭಯವು ಹೃದಯವನ್ನು ಆವರಿಸಿತು. ಆದರೂ ಅವು ಹೊರಗೆ ಸ್ಫುರಿಸದಂತೆ ಅವನು ಜಾಗರೂಕನಾಗಿದ್ದನು.

ರಾಜಗೃಹದಿಂದ ಬಂದ ದೂತನು "ಅಮಾತ್ಯಶ್ರೇಷ್ಠರೇ, ತಾವು ಇಂದಿನ ಓಲಗಕ್ಕೆ ಬರಲು ವಿಲಂಬವಾದುದರಿಂದ ತಮ್ಮನ್ನು ಕರೆದುಕೊಂಡ ಬರಲು ಮಹಾರಾಜರು ನನ್ನನ್ನು ಕಳುಹಿಸಿದರು." ಎಂದನು.

ತನ್ನ ಕಾರ್ಯಗಳನ್ನು ಆಲೋಚಿಸುವುದರಲ್ಲಿ ನಿರತನಾಗಿದ್ದ ದುಷ್ಟ

ಬುದ್ಧಿಯು ಅಂದಿನ ಓಲಗದ ಸಂಗತಿಯನ್ನೇ ಮರೆತಿದ್ದನು. ತಾನು ಹಾಗೆ ಮರೆತುದು ಅಕೃತ್ಯವಾಯಿತೆಂದು ತನ್ನೊಳಗೇ ಅವನು ನುಡಿದುಕೊಂಡನು. ಅಮಾತ್ಯನು ದೂತನೊಡನೆ: "ನೀನು ನಡೆ; ನಾನೀಗಲೆ ಬಂದೆನು." ಎಂದನು.

ರಾಜಸಭೆಯು ಅತ್ಯಂತ ವೈಭವ ಪರಿಪೂರ್ಣವಾಗಿದೆ. ಪುರ ಪ್ರಮುಖರನ್ನೂ, ಪ್ರಜಾಪಾಲನೆಯಲ್ಲಿ ನಿರತರಾದ ಪ್ರಮುಖ ಅಧಿಕಾರಿಗಳನ್ನೂ ಬರಮಾಡಿಕೊಂಡು ರಾಜ್ಯಶಾಸನದಲ್ಲಿರುವ ಗುಣದೋಷಗಳನ್ನು ವಿವೇಚಿಸುವುದಾಗಿತ್ತು ಆ ಓಲಗದ ಉದ್ದೇಶವು ಆ ಕಾಲದಲ್ಲಿ ಪ್ರಜೆಗಳ ಸಂಕಟಗಳನ್ನು ಸ್ವತಃ ಅರಸನೇ ಈ ಓಲಗಗಳಲ್ಲಿ ಕೇಳಿ, ಮಂತ್ರಿಗಳೊಡನೆ ಆಲೋಚಿಸಿ, ಬೇಕಾದ ನಿವಾರಣೆಗಳನ್ನು ಮಾಡುತ್ತಿದ್ದನು ಸಾಧಾರಣ ನ್ಯಾಯಾಧೀಶರಿಂದ ನ್ಯಾಯ ದೊರಕದ ಪ್ರಜೆಗಳಾದರೂ ಈ ಸಭೆಗಳಲ್ಲಿಯೇ ಅರಸನ ಮುಂದೆ ನ್ಯಾಯವನ್ನು ಬೇಡುತ್ತಿದ್ದರು ಪ್ರಜೆಗಳ ದೂರುಗಳನ್ನು ಕೇಳಿ ರಾಜನು ಪುರಪ್ರಮುಖರೊಡನೆಯೂ ಮಂತ್ರಿಗಳೊಡನೆಯೂ ಆಲೋಚಿಸಿ ನ್ಯಾಯದಾನವನ್ನು ಮಾಡುತ್ತಿದ್ದನು. ಈ ನ್ಯಾಯದಾನಗಳನ್ನೂ, ರಾಜ್ಯಕಾರ್ಯಾಲೋಚನೆಗಳನ್ನೂ ಕಂಡು ತಿಳಿಯುವದಕ್ಕಾಗಿ, ಉತ್ಸುಕರಾದ ನಾಗರಿಕರು ಈ ಸಭೆಗಳಲ್ಲಿ ನೆರೆಯುತ್ತಿದ್ದರು. ಇದು ನಮ್ಮ ನಾಡಿನ ಒಂದು ಪುರಾತನ ಪದ್ಧತಿಯಾಗಿದೆ ಅನಂತರ ನಮ್ಮ ನಾಡನ್ನು ಆಕ್ರಮಿಸಿದ ಮುಸಲ್ಮಾನ ಅರಸರಾದರೂ ಈ ಪದ್ಧತಿಯನ್ನೇ ಅನುಸರಿಸಿದರು. ಇತಿಹಾಸದಲ್ಲಿ ಇಂಥ ಓಲಗಗಳಲ್ಲಿ ನ್ಯಾಯದಾನವನ್ನು ಮಾಡಿದ ಹಲವು ಸಂದರ್ಭಗಳನ್ನು ನಾವು ನೋಡಬಹುದು. ಈಗಲಾದರೂ ಈ ನ್ಯಾಯದಾನ, ಪ್ರಜೆಗಳ ಸಂಕಟಗಳನ್ನು ಕೇಳುವ ಪದ್ಧತಿಯಿಲ್ಲದಿದ್ದರೂ ದೇಶೀಯ ಸಂಸ್ಥಾನಗಳಲ್ಲಿ ಈ ಓಲಗವು "ದರ್ಬಾರ್" ಎಂಬ ಹೆಸರಿನಿಂದ ಕೇವಲ ಆಡಂಬರಕ್ಕಾಗಿ ನೆಲೆನಿಂತಿದೆ.

ಆದರೆ ಪ್ರಾಚೀನ ಕಾಲದಲ್ಲಿ ಈ ಓಲಗಕ್ಕೆ ಬಹಳ ಪ್ರಾಧಾನ್ಯವಿದ್ದಿತು. ಪ್ರತಿಯೊಬ್ಬ ಅರಸನೂ ಈ ಓಲಗವನ್ನು ನೆರವೇರಿಸಿ ಪ್ರಜೆಗಳ ಸಂಕಟವನ್ನು ಕೇಳುವುದು ತನ್ನ ಕರ್ತವ್ಯವೆಂದು ಬಗೆದಿದ್ದನು. ಶಿಲ್ಪಕಲಾಚಾತುರ್ಯದಿಂದ ನಿಬಿಡವಾದ ಒಂದು ಪ್ರತ್ಯೇಕ ಮಂದಿರದಲ್ಲಿ ಈ ಸಭೆಯು ನೆರವೇರುತ್ತಿದ್ದಿತು. ಸಿಂಹಾಸನವು ಇತರ ಎಲ್ಲ ಪೀಠಗಳಿಗಿಂತ ಎತ್ತರವಾಗಿದ್ದು ಅಮೌಲ್ಯರತ್ನಗಳಿಂದ ಖಚಿತವಾಗಿದ್ದಿತು. ಯೋಗ್ಯತಾನುಸಾರವಾಗಿ ಮಂತ್ರಿ-ಸೇನಾಪತಿಗಳಿಗೂ, ಪೌರಪ್ರಧಾನಿಗಳಿಗೂ, ಪರದೇಶಗಳಿಂದ ಬಂದ ರಾಯಭಾರಿಗಳಿಗೂ ಬೇರೆ ಬೇರೆಯಾಗಿ ಪೀಠಗಳು ಹಂಗಡಿಸಲ್ಪಟ್ಟಿದ್ದುವು. ಅರಸನ ಬಲಭಾಗದಲ್ಲಿ ಇದ್ದ ಪೀಠವು ಪ್ರಧಾನ ಅಮಾತ್ಯನಿಗುಳ್ಳದ್ದಾಗಿದ್ದಿತು.

ಅವನ ಸಮೀಪದಲ್ಲಿಯೇ ಸಚಿವರಿಗೂ, ಉಪಮಂತ್ರಿಗಳಿಗೂ ಇರುವ ಪೀಠಗಳು ಇದ್ದುವು. ಅರಸನ ಎಡಭಾಗದಲ್ಲಿ ಸೇನಾಧಿಪತಿ, ಕೋಶಾಧಿಪತಿ ಮೊದಲಾದ ಅಧಿಕಾರಿಗಳಿರುವ ಆಸನಗಳು ರಾಜಿಸುತ್ತಿದ್ದುವು. ಅರಸನ ಸಿಂಹಾಸನದ ಮುಂದೆ ಸ್ವಲ್ಪ ವಿಸ್ತೀರ್ಣವಾದ ಸ್ಥಳವು ಹಾಗೆಯೇ ಬಿಡಲ್ಪಟ್ಟಿದ್ದಿತು. ಅದು ಸಂಗೀತ, ಮೇಳ, ಭರತನಾಟ್ಯ ಮೊದಲಾದ ಕಲೆಗಳನ್ನು ಪ್ರದರ್ಶಿಸಲಿರುವ ರಂಗಸ್ಥಳವಾಗಿದ್ದಿತು. ಈ ರಂಗಸ್ಥಳದ ಹಿಂದೆ ಪೌರ ಪ್ರಧಾನಿಗಳಿಗಿರುವ ಪೀಠಗಳು ಅಲಂಕೃತವಾಗಿದ್ದುವು. ಪೌರಪ್ರಧಾನಿಗಳ ಕೆಳಸ್ಥಳದ ಎರಡೂ ಅಂಚೆಗೂ ಸಾಲಾಗಿ ಪೀಠಗಳು ಕಂಗೊಳಿಸುತ್ತಿದ್ದುವು. ಇವು ಪರದೇಶಗಳಿಂದ ಬಂದ ರಾಯಭಾರಿಗಳಿಗೂ ಮಾನ್ಯ ಅತಿಥಿಗಳಿಗೂ ಉಳ್ಳಪೀಠಗಳಾಗಿದ್ದುವು. ಇವೆಲ್ಲವಕ್ಕಿಂತಲೂ ಹಿಂದೆ ಪ್ರೇಕ್ಷಕರಿಗಿರುವ ಪ್ರದೇಶವು!

ಅಂದಿನ ಕುಂತಳದ ಸಭಾಮಂದಿರದಲ್ಲಿ ಪ್ರಧಾನ ಅಮಾತ್ಯನ ಹೊರತು ಇತರ ಎಲ್ಲ ಅಧಿಕಾರಿಗಳೂ, ಪೌರಪ್ರಧಾನಿಗಳೂ, ವಿದೇಶ ರಾಯಭಾರಿಗಳೂ ನೆರೆದರು. ಲಾಟರೊಡನೆ ಕಾಳಗವು ಆರಂಭವಾದ ನಂತರ ಇದು ಮೊದಲನೆಯ ಓಲಗವಾಗಿತ್ತು. ಆದುದರಿಂದ ಯುದ್ಧದ ಕಾರ್ಯಕಲಾಪಗಳೇನೆಂದು ತಿಳಿಯುವದಕ್ಕಾಗಿ ಬಹು ಮಂದಿ ಪ್ರೇಕ್ಷಕರು ನೆರೆದಿದ್ದರು. ಕುಂತಳದ ರಾಜತಂತ್ರಜ್ಞರು ಯಾವ ತರದ ರಾಜನೀತಿಯನ್ನು ಅವಲಂಬಿಸುವುರೆಂಬುದನ್ನು ತಿಳಿಯಲು ಉತ್ಸುಕತರಾಗಿದ್ದುದರಿಂದ, ಭರತವರ್ಷದ ಪ್ರಮುಖ ದೇಶಗಳ ರಾಯಭಾರಿಗಳೆಲ್ಲರೂ ಈ ಓಲಗದಲ್ಲ ಸನ್ನಿಹಿತರಾಗಿದ್ದರು. ಸೇನಾನಾಯಕರಿಗಾಗಿರುವ ಆಸನಗಳೆಲ್ಲವೂ ಜನರಿಲ್ಲದೆ ಬರಿದಾಗಿದ್ದುವು. ಬರಿದಾದ ಆಸನಗಳನ್ನು ನೋಡಿ ಪ್ರೇಕ್ಷಕರು ಈ ಪೀಠಗಳಲ್ಲಿ ಮಂಡಿಸಬೇಕಾದ ಮಹನೀಯರೆಲ್ಲರೂ ಸಮರಾಂಗಣಕ್ಕೆ ತೆರಳಿರುವುದರಿಂದ ಇವು ಬರಿದಾಗಿವೆ, ಎಂದು ತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದರು. ಕಸ್ತೂರಿ, ಪುನಗು ಮೊದಲಾದ ವಾಸನಾದ್ರವ್ಯಗಳಿಂದ ಅಲ್ಲಿಯ ವಾತಾವರಣವು ಅತ್ಯಂತ ಪರಿಮಳವಾಗಿದ್ದಿತು.

ಸಭಿಕರೆಲ್ಲರೂ ನೆರೆದು ಸಮ್ರಾಟನ ಆಗಮನವನ್ನು ನಿರೀಕ್ಷಿಸುತ್ತಿದ್ದರು. ಒಬ್ಬ ಪ್ರತಿಹಾರಿಯು, ಬಂದು ರಾಜಸಭೆಗಳಲ್ಲಿ ಸಾಧಾರಣವಾಗಿ ಕಂಗೊಳಿಸುತ್ತಿರುವ ವಂದಿಮಾಗಧರೊಡನೆ "ಮಹಾರಾಜರು ಚಿತ್ತೈಸುತ್ತಲಿದ್ದಾರೆ" ಎಂದನು ಆಗ ಒಬ್ಬ ವಂದಿಯು ತನ್ನ ಆಸನದಿಂದ ಎದ್ದು ಉಚ್ಚಸ್ವರದಲ್ಲಿ: "ಶ್ರೀಮದ್ರಾಜಧಿರಾಜ, ಶ್ರೀ ಸಾರ್ವಭೌಮ, ಸಮಸ್ತ ಭೂಮಿಮಂಡಲಪಾಲ,

ಶೌರ್ಯ ಪ್ರತಾಪ ಧೈರ್ಯ ಸ್ಥೈರ್ಯ ಗಾಂಭೀರ್ಯ ಸಕಲಗುಣ ವಿಭೂಷಿತ, ರಿಪುಕುಲ ಕೃತಾಂತ, ಆಶ್ರಿತ ಜನಪಾಲ, ಕಾರುಣ್ಯಸಾಗರ, ಕುಂತಳ ಸಾಮ್ರಾಜ್ಯಾಧೀಶ ವೀರಶ್ರೀ ವೀರ ವಿಶ್ವ ವಿಕ್ರಮ ಮಹಾರಾಜಾಧಿರಾಜರು ಚಿತ್ತೈಸುವವರಾಗಿದ್ದಾರೆ.” ಎಂದು ನುಡಿದನು. ಹೊಗಳುಭಟ್ಟನ ಈ ಗರ್ಜನೆಯನ್ನು ಕೇಳಿ, ಮಹಾರಾಜರಾಗಮನವನ್ನರಿತು ಭಕ್ತಿಬಹುಮಾನ ಸೂಚಕವಾಗಿ ಸಭಿಕರೆಲ್ಲರೂ ತಮ್ಮ ಆಸನಗಳಿಂದ ಎದ್ದು ನಿಂತರು.

ಮಹಾರಾಜನು ಉತ್ತಮ ವಸ್ತ್ರ ವಿಭೂಷಿತನಾಗಿ ಹೊಳೆಯುವ ಮುಕುಟದೊಡನೆ ಸಭಾಮಂದಿರದೊಳಗೆ ಪ್ರವೇಶಿಸಿದನು. ಅವನು ಬಂದು ಸಿಂಹಾಸನದ ಬಳಿಯಲ್ಲಿ ನಿಂತುಕೊಂಡನು. ಪದ್ಧತಿಯಂತೆ ಇಬ್ಬರು ಬಾಲಿಕೆಯರು ಬಂದು ಮೋಹನ ಸ್ವರದಲ್ಲಿ:

ಮಂಗಳವ ನೀಡಲಿ ಎಮ್ಮಯ ಅರಸನಿಗೆ
ಲೋಕಗಳ ಪಾಲಿಸುವ ಜಗದೀಶನು!
ಆನಂದ-ಹರ್ಷಗಳ ತೋರಲಿ ಕುಂತಳೇಂದ್ರನಿಗೆ
ಭಕ್ತರಾ ಪೊರೆವ ಕಾರುಣ್ಯಸಾಗರನು!

ಎಂದು ದೇವರ ಪ್ರಾರ್ಥನೆಯನ್ನು ಮಾಡಿದರು. ಈ ಪ್ರಾರ್ಥನೆಯು ಕಳೆದೊಡನೆಯೇ ಅರಸನು ಸಿಂಹಾಸನಾರೂಢನಾದನು. ಸಭಿಕರು ಆಸೀನರಾಗಲಿಲ್ಲ. ಬಾಲಿಕೆಯರು ಮೊದಲಿನ ಅದೇ ಮೋಹನ ರಾಗದಲ್ಲಿ:

ಮಂಗಳಂ ಕುಂತಳೇಂದ್ರಗೆ ಮಂಗಳಂ
ರಾಜವಿಕ್ರಮ ಭುವನ ಪಾಲಗೆ
ಮಂಗಳಂ ದೀನರ ಪೊರೆವಾ ಕುಂತಳದ
ಭಾಗ್ಯ ಪ್ರದೀಪ ರಾಜಾಧಿರಾಜನಿಗೆ!

ಎಂದು ಕುಂತಳೇಂದ್ರನನ್ನು ಕುರಿತು ಮಂಗಳಗೀತೆಯನ್ನು ಹಾಡಿದರು. ಗಾನವು ಸಮಾಪ್ತಿಯನ್ನು ಹೊಂದಿದ ನಂತರ ಸಭಿಕರೆಲ್ಲರೂ ತಮ್ಮ ಪೀಠಗಳಲ್ಲಿ ಅಲಂಕೃತರಾದರು. ಹೊಗಳುಭಟ್ಟರು ಎದ್ದು ಉಚ್ಚಸ್ವರದಲ್ಲಿ ಕುಂತಳೇಂದ್ರನ ಬಿರುದು-ಭಾವಲಿಗಳನ್ನು ಹೇಳಿದರು. ನರ್ತಕಿಯರು ರಂಗಸ್ಥಳದಲ್ಲಿ ಬಂದು ತಮ್ಮ ಮನೋಹರ ನಾಟ್ಯಗಳಿಂದ ಅರಸನನ್ನೂ, ಸಭಿಕರನ್ನೂ ಸಂತೃಪ್ತಿಗೊಳಿಸಿದರು. ನಾಟ್ಯ, ಸಂಗೀತ ಮೊದಲಾದ ಕಲಾಪ್ರದರ್ಶನವು ಸಮಾಪ್ತವಾಗಲು, ಸಾಮಂತ ಅರಸರು ಬಂದು ಮಹಾರಾಜನ ಚರಣಗಳಲ್ಲಿ ಕಪ್ಪ ಕಾಣಿಕೆಗಳನ್ನು ನೀಡಿ, ಭಕ್ತಿವಿಶ್ವಾಸಗಳನ್ನು ಪ್ರದರ್ಶಿಸಿ, ಕುಂತಳೇಂದ್ರನಲ್ಲಿ ತಮಗಿರುವ ವಿಶ್ವಾಸವನ್ನು ತೋರಿಸುತ್ತಾ ರಾಜನಿಷ್ಠೆಯ ಪ್ರತಿಜ್ಞೆ

ಯನ್ನು ಮಾಡಿದರು. ವಿದೇಶದಿಂದ ಬಂದ ರಾಯಭಾರಿಗಳು ತಮ್ಮ ಅರಸರು ಕಳುಹಿಸಿದ ಕಾಣಿಕೆಗಳನ್ನು ಮಹಾರಾಜನಿಗೆ ಅರ್ಪಿಸಿ, ವಂದಿಸಿದರು ಇಷ್ಟೆಲ್ಲ ಕೃತ್ಯಗಳು ಕಳೆದ ನಂತರ ರಾಜಸಭೆಯಲ್ಲಿ ಕಾರ್ಯಾಲೋಚನೆಗೆ ಪ್ರಾರಂಭವಾಯಿತು.

ಕುಂತಳೇಂದ್ರನು ಮಂತ್ರಿಗಳ ವಿಭಾಗಕ್ಕೆ ತನ್ನ ದೃಷ್ಟಿಯನ್ನು ತಿರುಗಿಸಲು ಪ್ರಧಾನ ಅಮಾತ್ಯನು ಬಂದುದಾಗಿ ಕಾಣಲಿಲ್ಲ. ಅವನು ಒಡನೆಯೆ ದುಷ್ಟಬುದ್ಧಿಯನ್ನು ಕರೆದುಕೊಂಡು ಬರಲು ದೂತನನ್ನು ಕಳುಹಿಸಿದನು. ಸಂಧಿವಿಗ್ರಹ ಕಾರ್ಯಗಳನ್ನಾಲೋಚಿಸುವ ಸಚಿವನು ಮಹಾರಾಜನ ಅನುಮತಿಯಂತೆ ಎದ್ದು ನಿಂತು, ಸಭಿಕರನ್ನು ಉದ್ದೇಶಿಸಿ ಹೀಗೆ ನುಡಿಯಲಾರಂಭಿಸಿದನು:

"ಪೌರಪ್ರಧಾನಿಗಳೇ, ವಿದೇಶಗಳ ರಾಯಭಾರಿಗಳೇ, ಕುಂತಳ ನಾಡಿನ ಪ್ರಜೆಗಳೇ, ಲಾಟರು ನಮ್ಮೊಡನೆ ಸಮರಕ್ಕೆ ಉದ್ಯುಕ್ತರಾದ ಸಂಗತಿಯು ತಾವೆಲ್ಲ ಅರಿತಿರಬಹುದು. ಅದನ್ನು ಕುರಿತು ನಾನು ಹೆಚ್ಚಿಗೆ ವಿವರಿಸುವದಿಲ್ಲ. ಕುಂತಳ ಸಾಮ್ರಾಜ್ಯದ ಭಟರ ಬಾಹುಗಳಲ್ಲಿಯ ಪರಾಕ್ರಮವನ್ನು ತೋರಿಸಿಕೊಡುವ ಭಾರವು ಮಹಾರಾಜರಲ್ಲಿ ಭಕ್ತಿ-ವಿಶ್ವಾಸಗಳನ್ನಿಟ್ಟಿರುವ ಪ್ರಜೆಗಳದ್ದಾಗಿದೆ. ಈಗ ನಮ್ಮ ಗಡಿನಾಡುಗಳಲ್ಲಿ ಭಯಂಕರವಾದ ಕಾಳಗವು ನಡೆಯುತ್ತಿರುವದು. ಸಹಸ್ರಾರು ನಮ್ಮ ಭಟರು ಕುಂತಳದ ಕೀರ್ತಿಯ ಬಿಳೀ ಬಣ್ಣವನ್ನು ಕಾಪಾಡುವದಕ್ಕಾಗಿ ಹೋರಾಡುತ್ತಿರುವರು. ಶತ್ರುಗಳು ಒಂದಂಗುಲ ಮಾಡಿದರೂ ಮುಂದೆ ಬರದಂತೆ ಅವರನ್ನು ತಡೆದಿರುವರು. ಧರ್ಮದಿಂದ ರಾಜ್ಯಭಾರವನ್ನು ನಡೆಸುತ್ತಿರುವ ನಮ್ಮ ಮಹಾರಾಜಾಧಿರಾಜರಿಗೆ ವಿಜಯವು ನಿಶ್ಚಯವು! ತಾವೆಲ್ಲರೂ ಮುಂದೆ ಬಂದು, ಧನ ಮತ್ತು ಆಳುಗಳ ಸಹಾಯವನ್ನು ಕೊಡುವದು ತಮ್ಮ ಕರ್ತವ್ಯವಾಗಿದೆ."

ಅವನ ಮಾತುಗಳು ಮುಗಿಯುಲು ಸಭಾಂಗಣದಲ್ಲಿ: "ಮಹಾರಾಜರಿಗೆ ಮಂಗಳವಾಗಲಿ!" "ಕುಂತಳ ಸಾಮ್ರಾಜ್ಯವು ನೆಲೆನಿಲ್ಲಲಿ!" "ಲಾಟರಾಜ್ಯವು ಚೂರ್ಣೀಕೃತವಾಗಲಿ!" ಎಂಬೀ ರವಗಳು ಪ್ರಜೆಗಳ ಕಂಠಗಳನ್ನು ಭೇದಿಸಿಕೊಂಡು ಹೊರಗೆ ಬಂದು ದಿಗಂತಪರ್ಯಂತ ವ್ಯಾಪಿಸಿದುವು

ಈ ಸಂದರ್ಭದಲ್ಲಿ ಪ್ರಧಾನ ಅಮಾತ್ಯನಾದ ದುಷ್ಟಬುದ್ಧಿಯು ಸಭಾಮಂದಿರದಲ್ಲಿ ಪ್ರವೇಶಿಸಿ, ಮಹಾರಾಜರಿಗೆ ತನ್ನ ಪ್ರಣಾಮಗಳನ್ನು ಅರ್ಪಿಸಿದನು. "ಏನು ಅಮಾತ್ಯರೇ, ನೀವು ಬರಲು ಇಷ್ಟು ವಿಳಂಬವಾದುದು?" ಎಂದು ಅರಸನು ಪ್ರಶ್ನಿಸದೆ ಇರಲಿಲ್ಲ. ದುಷ್ಟಬುದ್ಧಿಯು "ಆ ಮೇಲೆ

ನುಡಿಯುವೆನು" ಎಂದು ಹೇಳಿ ತನ್ನ ಪೀಠದಲ್ಲಿ ಕುಳಿತುಕೊಂಡನು.

ಸಂಧಿವಿಗ್ರಹ ಕಾರ್ಯಗಳ ಸಚಿವನ ನುಡಿಗಳು ಮುಗಿದ ನಂತರ ದುಷ್ಟಬುದ್ಧಿಯು ತನ್ನ ಆಸನದಿಂದ ಎದ್ದು ನಿಂತು ಉಚ್ಚಸ್ವರದಲ್ಲಿ ನುಡಿಯಲಾರಂಭಿಸಿದನು: "ಕುಂತಳ ಸಾಮ್ರಾಜ್ಯದ ಆಧಾರಸ್ತಂಭಗಳೇ! ಈಗ ತಾನೇ ಮಹಾರಾಜರು ಪ್ರಶ್ನಿಸಿದರು ನಾನು ಬರುವದಕ್ಕೇಕೆ ವಿಳಂಬವಾಯಿತೆಂಬುದಾಗಿ? ತಾವಿಂದು ಮುಂದೆ ಬರದಿದ್ದರೆ ಕುಂತಳದಲ್ಲಿ ಲೂಟಿರ ಉಪದ್ರವಗಳು ಹೆಚ್ಚುವದರಲ್ಲಿ ಸಂದೇಹವಿಲ್ಲ. ಒಂದು ಉದಾಹರಣೆಯನ್ನು ನುಡಿಯುತ್ತೇನೆ. ಇಂದು ಸ್ವಲ್ಪ ಹೊತ್ತು ಮೊದಲು ನನ್ನ ಮನೆಯಲ್ಲಿ ಕುಳಿತು ನನ್ನ ಮಗನೊಡನೆ ರಾಜ್ಯಕಾರ್ಯವನ್ನು ಕುರಿತು ಮಾತಾಡುತ್ತಿದ್ದೆನು. ನಾವು ಹಲವು ಪ್ರಧಾನ ರಾಜ್ಯಕಾರ್ಯಗಳನ್ನು ಕುರಿತಾಗಿಯೇ ಮಾತಾಡುತ್ತಿದ್ದೆವು. ಕಾರ್ಯಾಲೋಚನೆಯು ಕೋಣೆಯ ಹಿಂಬದಿಯಲ್ಲಿ ನಿಂತು ಯಾರೋ ನನ್ನ ಮಾತುಗಳನ್ನು ಕೇಳುತ್ತಿರುವ ಸಂಶಯವು ನನಗುಂಟಾಯಿತು. ಮದನನನ್ನು ಹೋಗಿ ನೋಡಲು ಹೇಳಿ ಕಳುಹಿಸಿದೆನು. ಅವನು ಹೋಗಿ ನೋಡಲು, ಶತ್ರುಗಳ ಗೂಢಚಾರನು ಅಲ್ಲಿಂದ ಮಾಯವಾಗಿದ್ದನು; ಆದರೆ ನಾವಾಡುತ್ತಿದ್ದ ಮಾತುಗಳನ್ನು ಅವನು ಹೊಂಚುಹಾಕಿ ಕೇಳುತ್ತಿದ್ದನೆಂಬುದಕ್ಕೆ ಆ ಓಣಿಯ ಕೆಸರಿನಲ್ಲಿ ಹೊಸದಾಗಿ ಕಂಡು ಬಂದ ಹೆಜ್ಜೆಗಳೇ ಸಾಕ್ಷಿಗಳಾಗಿದ್ದವು. ಮದನನು ಆ ದುಷ್ಟನನ್ನು ಕಂಡು ಹಿಡಿದನು; ಆದರೆ ಅವನು ನನ್ನ ಮಗನ ದೇಹವನ್ನು ಉಪದ್ರವಿಸಿ ಮಾಯವಾದನು. ಈ ಸಂಭವವನ್ನು ಕುರಿತು ಹೆಚ್ಚು ಶೋಧಗಳನ್ನು ನಡೆಯಿಸಿದುದರಿಂದ, ರಾಜಸಭೆಗೆ ಬರಲು ಇಷ್ಟು ವಿಳಂಬವಾಯಿತು. ಶತ್ರುಗಳು ರಾಜಧಾನಿಯಲ್ಲಿ ಸಹ ತುಂಬಿಹೋಗಿದ್ದಾರೆ; ಅವರಿಗೆ ತಕ್ಕ ಶಾಸನವನ್ನು ಮಾಡಲು ಕಾಲ ವಿಳಂಬವಾಗಿದೆ. ಆದುದರಿಂದ ತಾವೆಲ್ಲರೂ ಕುಂತಳ ಸಿಂಹಾಸನದ ಪಾಲನೆಗಾಗಿ ಮುಂದೆ ಬರಬೇಕು."

ಅಮಾತ್ಯನ ಈ ಮಾತುಗಳನೆಲ್ಲ ಕೇಳಿ ಜನರು ಅದ್ಭುತಪರತಂತ್ರರಾದರು! ಶತ್ರುಗಳು ಬಲಾಢ್ಯರು, ಎಂಬ ಭೀತಿಯು ಎಲ್ಲರ ಹೃದಯಗಳಲ್ಲಿಯೂ ಸಂಜಾತವಾಯಿತು. ಹಲವು ಜನ ಪ್ರಜೆಗಳು ರಾಜಸಮ್ಮುಖದಲ್ಲಿ ತಾವು ಭಟರಾಗಿ ಸೇರಿ, ಕಾದಲು ಸನ್ನದ್ಧರಾಗಿರುವೆವೆಂದು ಮುಂದೆ ಬಂದರು. ವಣಿಕರು ಧನಸಹಾಯವನ್ನು ನೀಡಲು ಒಪ್ಪಿದರು. ಒಂದು ಮಾತಿನಲ್ಲಿ ಹೇಳುವುದಾದರೆ, ಅಂದಿನ ಓಲಗವು ಅತ್ಯಂತ ಯಶಸ್ವಿಯಾಗಿದ್ದಿತು. ಉಚಿತವಾದ ರೀತಿಯಲ್ಲಿ ಮಹಾರಾಜನು ಪ್ರಜೆಗಳಿಗೆ ಧೈರ್ಯ-ಪ್ರೋತ್ಸಾಹಗಳನ್ನು

ನೀಡುತ್ತ ತನ್ನ ಭಾಷಣವನ್ನು ಮಾಡಿದನು. ಮಹಾರಾಜನ ಭಾಷಣಾನಂತರ ಸಭಿಕರು ಮಹಾರಾಜನಿಗೆ ವಂದಿಸಿ, ಸಭಾಮಂದಿರವನ್ನು ತ್ಯಜಿಸಿದರು.

ಸಭಿಕರೆಲ್ಲರೂ ತೆರಳಿದ ನಂತರ, ಅಮಾತ್ಯನು ಮಹಾರಾಜನ ಸಮೀಪಕ್ಕೆ ಬಂದು ವಂದಿಸಿದನು.

'ಏನು ಅಮಾತ್ಯರೆ?' ಎಂದನು ಮಹಾರಾಜನು.

"ನಾಡಿದ್ದು ಚಂಡಿಕಾ ದೇವಾಲಯದಲ್ಲಿ ಉತ್ಸವವು!"

"ಅದಕ್ಕೆ ಬೇಕಾದ ವ್ಯವಸ್ಥೆಗಳನ್ನು ನೀವು ಮಾಡಿರಿ."

"ತಾವು ಬಂದು ದೇವಿಯ ದರ್ಶನವನ್ನು ತೆಗೆದುಕೊಳ್ಳುವದು ಒಳ್ಳೆಯದೆಂದು ನನ್ನ ಭಾವನೆಯು! ಉತ್ಸವದಲ್ಲಿ ನೆರೆದ ಜನರೊಡನೆ ತಾವು ಸೈನ್ಯಕ್ಕೆ ಸೇರಬೇಕೆಂದು ನುಡಿಯುವದರಿಂದ ಹೆಚ್ಚು ಪರಿಣಾಮವಾಗುವದು. ತಮ್ಮ ದಿವ್ಯರೂಪವನ್ನು ಕಂಡು ಪ್ರಜೆಗಳು ಹೊಸರೂಪವನ್ನು ತಾಳಿ ಸಾಮ್ರಾಜ್ಯವನ್ನು ಕಾಯಲು ಮುಂದೆ ಬರುವರು."

"ಅದು ಅಹುದು; ತಮ್ಮ ಇಷ್ಟದಂತೆಯೇ ಆಗಲಿ! ನಾಡಿದ್ದು ಪ್ರಭಾತದಲ್ಲಿ ಬನ್ನಿರಿ!"

"ಅಪ್ಪಣೆ ಮಹಾಪ್ರಭೂ!" ಎಂದು ಹೇಳಿ ತಾನು ವಿಜಯಿಯಾದೆನೆಂಬ ಭಾವದೊಡನೆ ಅಮಾತ್ಯನು ಮಂದಿರವನ್ನು ತ್ಯಜಿಸಿ ತೆರಳಿದನು.

ಇನ್ನು ಮಹಾರಾಜನು ಅರಮನೆಯೊಳಗೆ ತೆರಳತಕ್ಕವನು; ಅಷ್ಟರಲ್ಲಿ ದೂತನೊಬ್ಬನು ಬಂದು ಪ್ರಣಾಮವನ್ನು ಗೈದು ಒಂದು ಓಲೆಯನ್ನು ನೀಡಿದನು. ಮಹಾರಾಜನು ಅದನ್ನು ತೆಗೆದುಕೊಂಡು ಓದಿ ನೋಡಿದನು. ಅದರಲ್ಲಿ ಈ ಪ್ರಕಾರ ಲಿಖಿತವಾಗಿದ್ದಿತು:

"ತಾವು ನಾಳೆ ಚಂಡಿಕಾಲಯಕ್ಕೆ ತೆರಳಕೂಡದು; ಅಲ್ಲಿಗೆ ತೆರಳಿದರೆ ನಿಶ್ಚಯವಾಗಿಯೂ ವಿಪತ್ತು ಸಂಭವಿಸುವದು" ಎಂದು ಮಾತ್ರವಾಗಿದ್ದಿತು.

"ಈ ಓಲೆಯನ್ನು ಕೊಟ್ಟವರಾರು?" ಎಂದು ಕುಂತಳೇಂದ್ರನು ದೂತನನ್ನು ಪ್ರಶ್ನಿಸಿದನು.

"೧೭-೧೮ ವರ್ಷ ಪ್ರಾಯದ ತರುಣನೋರ್ವನು ಬಂದು ಈ ಓಲೆಯನ್ನು ತಮಗೆ ಅರ್ಪಿಸಬೇಕೆಂದು ಕೊಟ್ಟನು ಮಹಾಪ್ರಭೂ!"

"ಹೋಗು, ಬೇಗನೆ ಹೋಗು! ಅವನೆಲ್ಲಿರುವನೆಂದು ಹುಡುಕಿ, ಅವನನ್ನು ಕರೆದುಕೊಂಡು ಬಾ!"

ತನ್ನ ಅರಮನೆಯಲ್ಲಿ ಸಂಧ್ಯೆಯವರೆಗೆ ಕಾದರೂ ದೂತನು ಬರಲಿಲ್ಲ;

ವಾಯಿತು. "ಈ ಪತ್ರವನ್ನು ಬರೆದವರು ಯಾರಿರಬಹುದು? ದುಷ್ಟಬುದ್ಧಿಯು ವಂಚಿಸಿ ದ್ರೋಹವನ್ನು ಬಗೆಯಲು ಉದ್ಯುಕ್ತನಾಗಿರುವನೆ? ಹಿಂದೆ ಚಂದ್ರಹಾಸನ ಗೆಳೆಯನಾದ ನಾಗರಾಜನು ದುಷ್ಟಬುದ್ಧಿಯು ನನಗೆ ಅಹಿತವನ್ನು ಬಗೆಯುತ್ತಿರುವನೆಂಬುದನ್ನು ಸೂಚಿಸಿದ್ದನು. ಅದರಲ್ಲಿ ಸತ್ಯಾಂಶವಿರಬಹುದೇ?" ಎಂಬಿತ್ಯಾದಿ ಹಲವು ವಿಚಾರಗಳಿಂದ ಅವನ ಮನಸ್ಸು ಚಿಂತೆಗಳ ಸಂತೆಯಾಗಿ ಹೋಯಿತು. "ಅದರೂ ಕಳೆದ ಇಪ್ಪತ್ತುವರ್ಷಗಳಿಂದ ತನ್ನನ್ನು ವಿಶ್ವಾಸಪೂರ್ವಕವಾಗಿ ಸೇವಿಸಿದ ಅಮಾತ್ಯನು ಎಂದಿಗಾದರೂ ತನಗೆ ದ್ರೋಹವನ್ನು ಬಗೆಯುವನೆ? ಇರಲಾರದು." ಹೀಗೆ ಕುಂತಳೇಂದ್ರನು ಸಮಾಧಾನವನ್ನು ತಾಳಲು ಪ್ರಯತ್ನಿಸಿದನು; ಹೇಗಾದರೂ ಅವನ ಮನಸ್ಸು ಪ್ರಶಾಂತತೆಯ ಭಾವವನ್ನು ಹೊಂದಲಿಲ್ಲ.

ಓಲೆಯನ್ನು ಕೊಟ್ಟ ತರುಣನನ್ನು ಹುಡುಕಿಕೊಂಡು ಹೋಗಿದ್ದ ಭೃತ್ಯನು ಸಂಜೆಗೆ ಬಂದನು. ಆಗ ಮಹಾರಾಜನು:—"ತರುಣನು ಸಿಕ್ಕಿದನೆ?" ಎಂದು ಕೇಳಿದನು.

"ಇಲ್ಲ. ಮಹಾಪ್ರಭೂ, ಅವನನ್ನು ಹುಡುಕುತ್ತ ನಗರದಲ್ಲೆಲ್ಲ ಅಲೆದೆನು; ಆದರೂ ಆತನು ಕಾಣಸಿಗಲಿಲ್ಲ."

ಕುಂತಳೇಂದ್ರನಿಗೆ ಆ ರಾತ್ರಿ ನಿದ್ರೆಯೇ ಬರಲಿಲ್ಲ; ಹಲವು ವಿಚಾರಗಳ ಮತ್ತು ಚಿಂತೆಗಳ ತೊಡಕುಗಳಲ್ಲಿ ಸಿಲುಕಿ ಅವನ ಆತ್ಮವು ತಳಮಳಿಸುತ್ತಲಿತ್ತು. ಈ ಓಲೆಯಲ್ಲಿರುವ ಸಂಗತಿಗಳು ಯಥಾರ್ಥವಾದರೆ, ಆ ತರುಣನು ತಾನೇ ಬಂದು ತನ್ನ ಪರಿಚಯವನ್ನು ನೀಡಿ ಸತ್ಯಾಂಶವನ್ನೇಕೆ ಅರುಹಬಾರದು? ಅವನನ್ನು ಕರೆದುಕೊಂಡು ಬರಲು ದೂತನನ್ನು ಕಳುಹಿಸಿದಾಗ ಅವನೇಕೆ ಕಾಣಸಿಗದೆ ಮಾಯವಾದನು? ಎಂಬಿತ್ಯಾದಿ ವಿಚಾರಗಳೂ ಮೂಡದೆ ಇರಲಿಲ್ಲ. ದುಷ್ಟಬುದ್ಧಿಯು ಶತ್ರುವೆಂಬುದನ್ನು ಅವನು ಇದುವರೆಗೆ ಗೈದ ಯಾವ ಕೃತ್ಯವೂ ತೋರಿಸುವುದಿಲ್ಲ. ಈ ಓಲೆಯನ್ನು ನಂಬಿ ದುಷ್ಟಬುದ್ಧಿಯ ಮೇಲೆ ರಾಜದ್ರೋಹವನ್ನು ಆರೋಪಿಸುವುದು ಹೇಗೆ? ಇದುವರೆಗೆ ಅವನು ಗೈದ ರಾಜಸೇವೆಯು ಅಪಾರವಾದುದು ಎಂಬುದಾಗಿ ಅರಸನು ತನ್ನೊಳಗೆ ತಾನೇ ನುಡಿದುಕೊಂಡನು. ಅಂತ್ಯದಲ್ಲಿ ಆ ಓಲೆಯನ್ನು ಅಮಾತ್ಯನಿಗೆ ತೋರಿಸಬೇಕೆಂದೂ, ಆ ಕಾಗದವನ್ನು ನೋಡಿದೊಡನೆಯೇ ಅಮಾತ್ಯನ ಮುಖದಲ್ಲಿ ಕಾಣುವ ಹಾವಭಾವಗಳಿಂದ ಸತ್ಯಾಂಶವನ್ನು ಊಹಿಸಬೇಕೆಂದೂ ಅರಸನು ನಿರ್ಧರಿಸಿದನು.

ದಿನಗಳೆರಡು ಕಳೆದುವು; ಚಂಡಿಕಾಲಯಕ್ಕೆ ತೆರಳಬೇಕಾದ ದಿನವು

ಬಂದಿತು. ಮಹಾರಾಜರನ್ನು ಕರೆದೊಯ್ಯುವದಕ್ಕಾಗಿ, ಅಮಾತ್ಯನು ರಾಜ ನಿಕೇತನಕ್ಕೆ ಬಂದನು. ಅರಸನು ದುಷ್ಟಬುದ್ಧಿಯನ್ನು ನೋಡಿದೊಡನೆಯೇ "ಅಮಾತ್ಯರೇ, ಕಂಡಿರಾ ನನಗೆ ಒಂದು ವಿಚಿತ್ರವಾದ ಓಲೆಯು ಬಂದಿದೆ!" ಎಂದು ಹೇಳಿ, ಎರಡುದಿನಗಳ ಮುಂಚೆ ತನಗೆ ಬಂದ ಆ ಓಲೆಯನ್ನು ದುಷ್ಟ ಬುದ್ಧಿಯ ಕರಗಳಲ್ಲಿ ಕೊಟ್ಟನು.

ಅಮಾತ್ಯನು ಆ ಓಲೆಯನ್ನು ತೆಗೆದು ಓದಿ ನೋಡಿದನು; ಅದರ ತಾತ್ಪರ್ಯವನ್ನರಿಯಲು ಅವನು ಅದ್ಭುತ ಹಾಗು ಭಯಪರತಂತ್ರನಾದರೂ ಅವುಗಳನ್ನು ಅವನು ಹೊರಗೆ ತೋರಿಸಲಿಲ್ಲ. ತನ್ನ ಹೃದಯದಲ್ಲಿರುವ ಭೀತಿ ಮತ್ತು ಶಂಕೆ ಇವುಗಳನ್ನು ಹೊರಗೆಡವದೆ, ದೊಡ್ಡದಾದ ಒಂದು ನಗು ವನ್ನು ಅಮಾತ್ಯನು ಹೊರಚೆಲ್ಲಿದನು. ಅಮಾತ್ಯನ ಈ ನಗುವನ್ನು ಕಂಡು ಕುಂತಳೇಂದ್ರನು ಆಶ್ಚರ್ಯಪರವಶನಾದನು. ಅವನು ನುಡಿದನು: "ಏಕೆ, ಅಮಾತ್ಯರೇ ನಗುತ್ತಿರುವಿರಿ?"

"ಏನೂ ಇಲ್ಲ; ಶತ್ರುಗಳ ಭೇದೋಪಾಯವನ್ನು ಕಂಡು! ಲಾಟ ದೇಶದ ರಾಜ್ಯತಂತ್ರಜ್ಞರು ತಮ್ಮ ಭೇದೋಪಾಯಗಳಿಂದ ನನ್ನನ್ನು ತಮ್ಮಿಂದ ಅಗಲಿಸಿದರೆ, ನಮ್ಮ ನಾಡನ್ನು ಗೆಲ್ಲುವದು ಸುಲಭವೆಂದು ವಿಚಾರಿ ಸಿರುತ್ತಾರೆ!"

"ಅದನ್ನು ಹೇಗೆ ಊಹಿಸಿದಿರಿ?"

"ಮಹಾಪ್ರಭೂ! ನಾನು ತಮ್ಮ ಉಪ್ಪನ್ನು ತಿನ್ನಲು ಪ್ರಾರಂಭಿಸಿ ದುದು ನಿನ್ನೆ-ಮೊನ್ನೆಯಿಂದಲ್ಲ. ತಮ್ಮನ್ನು ಸೇವಿಸುವದಕ್ಕೆ ಪ್ರಾರಂಭಿಸಿ ಇಪ್ಪತ್ತುವರ್ಷಗಳಾದುವು! ಇದುವರೆಗೆ ಯಾವ ಸ್ವಾಮಿದ್ರೋಹದ ಕೃತ್ಯವೂ ನನ್ನಿಂದ ಘಟಿಸಿರುವುದಿಲ್ಲ. ನಾನು ಸ್ವಾಮಿದ್ರೋಹಿ ಎಂಬುದನ್ನು ಸೂಚಿ ಸಲು ಈ ಓಲೆಯನ್ನು ಬರೆದ ವ್ಯಕ್ತಿಯು ತಕ್ಕ ನಿದರ್ಶನಗಳೊಡನೆ ಪ್ರತ್ಯಕ್ಷ ವಾಗಿ ಮಹಾರಾಜರ ದರ್ಶನ ಪಡೆದು, ಆ ಸಂಗತಿಯನ್ನು ನಿವೇದಿಸಿ ನ್ಯಾಯ ಸಾಧನೆಗೆ ಏಕೆ ಯತ್ನಿಸಬಾರದು? ಇದು ಶತ್ರುಗಳ ಕಪಟಜಾಲವಾಗಿದೆ. ತಮಗೆ ನನ್ನಲ್ಲಿ ಸಂದೇಹವಿದ್ದರೆ, ಇಗೋ, ಕತ್ತಿ ಇದೆ; ತಾವು ನನ್ನ ಶಿರ ಸ್ಸನ್ನು ಛೇದಿಸಿರಿ! ಅಂತ್ಯದಲ್ಲಿಯೂ ಒಬ್ಬ ಸ್ವಾಮಿನಿಷ್ಠನಾಗಿಯೇ ಮರಣ ಹೊಂದುವೆನು."

"ಅಮಾತ್ಯರೇ, ತಮ್ಮಲ್ಲಿ ನನಗೆ ಸಂಶಯವಿದ್ದರೆ, ಎಂದಿಗಾದರೂ ಈ ಓಲೆಯನ್ನು ತಮಗೆ ತೋರಿಸುತ್ತಿದ್ದೆನೆ? ನೀವು ಯಾವ ತರದ ರಾಜನಿಷ್ಠ ರೆಂಬುದನ್ನು ನಾನು ಅರಿತವನಲ್ಲವೇ? ಇದು ನಮ್ಮಿಬ್ಬರನ್ನು ಅಗಲಿಸಲು

ಶತ್ರುಗಳು ಹೂಡಿದ ತಂತ್ರವೆಂದು ನಾನು ಈ ಮೊದಲೇ ಅರಿತಿದ್ದೆನು.”

“ಶತ್ರುಗಳ ಕಪಟ ತಂತ್ರಗಳನ್ನು ನೋಡಿದಿರಾ?”

ಅಮಾತ್ಯನ ಆ ನಟನೆಯು ಕುಂತಳೇಂದ್ರನನ್ನು ಮೋಸಗೊಳಿಸಿತು; ಅವನು ನಿಷ್ಕಲಂಕನೆಂದು ಅರಸನು ಬಗೆದನು. ದುಷ್ಟಬುದ್ಧಿಯ ಊಹೆಯಂತೆ ಅದು ಶತ್ರುಗಳ ಭೇದೋಪಾಯದ ಫಲವಿರಬೇಕೆಂದು ಆ ಸರಳ ಹೃದಯದ ಅರಸನು ನೆನೆದನು. ದುಷ್ಟಬುದ್ಧಿಯ ನಿರ್ದೇಶದಂತೆ ಅವನು ಪ್ರಯಾಣಕ್ಕೆ ಹೊರಡಲು ಸಿದ್ಧನಾದನು.

“ಅಮಾತ್ಯರೇ, ನಾವು ತೆರಳೋಣವೇ?”

“ಹೂಂ-”

ಅವರಿಬ್ಬರೂ ರಾಜಗೃಹವನ್ನು ತ್ಯಜಿಸಿದರು. ದೇಹರಕ್ಷಣೆಗಾಗಿ ಅಂಗ ರಕ್ಷಕರನ್ನು ಕರೆದೊಯ್ಯಬೇಕೆಂದು ಅರಸನು ಅಭಿಪ್ರಾಯಪಟ್ಟನು; ಆದರೆ ಅಮಾತ್ಯನು ದೇವತಾದರ್ಶನಕ್ಕಾಗಿ ತೆರಳುತ್ತಿರುವಾಗ, ಭಟರನ್ನು ಕರೆದೊಯ್ಯುವುದು ಸಮಂಜಸವಲ್ಲವೆಂದೂ, ಮಹಾರಾಜನ ದೇಹರಕ್ಷಣೆಯ ಭಾರವನ್ನು ತಾನು ನೋಡಿಕೊಳ್ಳುವೆನೆಂದೂ ಭರವಸೆಯನ್ನು ನೀಡಿದನು.

ಮಹಾರಾಜ ಮತ್ತು ಮಂತ್ರಿ ಇವರಿಬ್ಬರೂ ಚಂಡಿಕಾದೇವಿಯ ದರ್ಶನಕ್ಕಾಗಿ ಹೊರಟರು.

ದೇವಿಯ ದರ್ಶನವನ್ನು ಪಡೆದು, ಸಮರದಲ್ಲಿ ತಮಗೆ ವಿಜಯವನ್ನು ನೀಡಬೇಕೆಂದು ಅವರಿಬ್ಬರೂ ಭಕ್ತಿಭಾವದಲ್ಲಿ ದೇವಿಯನ್ನು ಪ್ರಾರ್ಥಿಸಿದರು. ದುಷ್ಟಬುದ್ಧಿಯು ತನ್ನ ಕಾರಸ್ಥಾನವು ಜಯಪ್ರದವಾಗಬೇಕೆಂದು ಮನಸ್ಸಿನಲ್ಲಿಯೇ ಪ್ರಾರ್ಥಿಸಿದನು. ಇದಾಗಿದ್ದಿತು ಅವರಿಬ್ಬರ ಪ್ರಾರ್ಥನೆಯ ಅಂತರವು! ಅಲ್ಲಿ ನೆರೆದಿದ್ದ ಜನರು ಭಕ್ತಿಯಲ್ಲಿ ಮಹಾರಾಜನಿಗೆ ವಂದಿಸಿದರು. ರಾಜನು ಅವರೊಡನೆ ಕುಂತಳಸಿಂಹಾಸನವನ್ನು ಶತ್ರುಗಳ ಕರದಿಂದ ರಕ್ಷಿಸಬೇಕೆಂದು ಪ್ರಾರ್ಥಿಸಿಕೊಂಡನು. ಮಹಾರಾಜನ ಆವೇಶಪರಿಪೂರ್ಣವಾದ ನುಡಿಗಳನ್ನು ಶ್ರಾವಿಸಿ, ಅಲ್ಲಿ ನೆರೆದಿದ್ದ ಜನರು ದೇಶವನ್ನು ಕಾಯುವದರಲ್ಲಿ ಸಹಾಯ-ಸಲಕರಣೆಗಳನ್ನು ನೀಡುವುದಾಗಿ ಒಪ್ಪಿಗೆಯನ್ನಿತ್ತರು.

ದೇವರ ಪ್ರಸಾದವನ್ನು ಸ್ವೀಕರಿಸಿ, ಅರಸನೂ ಅಮಾತ್ಯನೂ ನಗರಕ್ಕೆ ಹಿಂದಿರುಗಿದರು. ದಾರಿಯಲ್ಲಿ ಸ್ವಲ್ಪ ದೂರದ ವರೆಗೆ ಎರಡು ಪಾರ್ಶ್ವಗಳಲ್ಲಿಯೂ ಕಾಡೇ ವ್ಯಾಪಿಸಿದ್ದಿತು. ಅಲ್ಲಲ್ಲಿ ಮರಗಳು ದಟ್ಟವಾಗಿ ಬೆಳೆದಿದ್ದುದರಿಂದ, ಸೂರ್ಯನ ಬಿಸಿಲು ಸಹ ನೆಲದ ಮೇಲೆ ಬೀಳುತ್ತಿರಲಿಲ್ಲ. ಅರಸನು ಅಮಾತ್ಯನ ಸಂಗಡ ಒಂದೊಂದು ಮಾತುಗಳನ್ನಾಡುತ್ತ ಮುಂದೆ ಸಾಗುತ್ತಿ

ದ್ದನು. ಹೀಗೆ ತೆರಳುತ್ತಿರಲು ಕಾಡಿನಿಂದ ಒಂದು ಸಪ್ಪಳವು ಕೇಳಿಬಂದಿತು. ಅದನ್ನು ಶ್ರಾವಿಸಿ ಚಕಿತನಾದ ಅರಸನು:—"ಏನೋ ಸಪ್ಪಳವಾಗುತ್ತಿದೆ ಯೆಲ್ಲಾ!" ಎಂದನು.

"ನಾವು ಮಾತಾಡುವದನ್ನು ಕೇಳಿ ಭಯದಿಂದ ಓಡುತ್ತಿರುವ ಹರಿಣಗಳ ಕಾಲುಗಳ ಸಪ್ಪಳವಾಗಿರಬಹುದು."

ಅಮಾತ್ಯನು ತನ್ನ ಮಾತುಗಳನ್ನು ಮುಗಿಸಲಿಲ್ಲ; ಅಷ್ಟರಲ್ಲಿ ಕರಗಳಲ್ಲಿ ಭಯಂಕರವಾದ ಗದೆಗಳನ್ನು ಹಿಡಿದುಕೊಂಡು ಹತ್ತೆಂಟು ಮಂದಿ ಭೀಮಕಾಯರು ಕಾಡಿನಿಂದ ಹೊರಬಿದ್ದು ಅರಸನೂ ಮಂತ್ರಿಯೂ ನಿಂತುರುವಲ್ಲಿಗೆ ಬಂದರು. ಅರಸನು ಭಯಚಕಿತನಾಗಿ:—"ಇವರು ಯಾರು?" ಎಂಬ ಮಾತುಗಳನ್ನು ಮುಗಿಸುವುದರೊಳಗಾಗಿ ಪ್ರಬಲವಾದ ಒಂದು ಗದಾಪ್ರಹಾರವು ಅರಸನ ಬೆನ್ನಮೇಲೆ ಬಿದ್ದಿತು! ಅರಸನು ಅದನ್ನು ಸಹಿಸಲು ಅಸಮರ್ಥನಾಗಿ ಭೂಮಿಯನ್ನು ಶರಣು ಹೊಂದಿದನು. ಅವನು ನೆಲದಲ್ಲಿ ಬಿದ್ದು ಉರುಳುತ್ತ ಅಮಾತ್ಯನ ಕಡೆಗೆ ನೋಡಿದನು. ಅವನಾದರೂ ತನ್ನಂತೆಯೇ ದುಷ್ಕರ ತಾಡನಗಳಿಗೆ ಒಳಗಾಗಿ ನೆಲದಲ್ಲಿ ಹೊರಳುತ್ತಿರುವುದನ್ನು ಕುಂತಳೇಂದ್ರನು ಅವಲೋಕಿಸಿದನು. ಇಷ್ಟರಲ್ಲಿ ಇನ್ನೊಂದು ಪ್ರಹಾರವು ಅರಸನ ಶಿರಸ್ಸಿನಮೇಲೆ ಪತಿಸಿತು ಆಗ ಅರಸನು ಪತ್ರದಲ್ಲಿ ಲಿಖಿತವಾದುದು ವಾಸ್ತವವೆಂಬುದಾಗಿ ತನ್ನನ್ನು ತಾನೇ ಹಳಿದುಕೊಂಡನು. ತನ್ನಂತೆಯೇ ದುಷ್ಟಬುದ್ಧಿಯೂ ಈ ನರರಾಕ್ಷಸರ ತಾಡನಗಳಿಗೆ ಗುರಿಯಾಗುತ್ತಿದ್ದುದರಿಂದ ಅದು ಅವನ ಹಂಚಿಕೆಯಾಗಿರಲಿಕ್ಕಿಲ್ಲವೆಂದೂ ಲಾಟರ ಉದ್ಯಮವಾಗಿರಬೇಕೆಂದೂ ಅರಸನು ತನ್ನೊಳಗೇ ನುಡಿದುಕೊಂಡನು. ಮೂರನೆಯ ಪ್ರಹಾರವು ಬೀಳಲು ಅರಸನು ಪ್ರಜ್ಞಾರಹಿತನಾದನು!

ಅರಸನು ಪ್ರಜ್ಞಾರಹಿತನಾಗಿ ನೆಲದಲ್ಲಿ ಒಂದು ಮರದ ಕೊರಡಿನಂತೆ ಬೀಳಲು, ದುಷ್ಟಬುದ್ಧಿಯು ತಾನು ಬಿದ್ದಿರುವಲ್ಲಿಂದ ಎದ್ದು ನಿಂತನು. ಅವನಿಗೆ ಬಲವಾದ ತಾಡನಗಳೇನೂ ಬಿದ್ದಿರಲಿಲ್ಲ ಅವನು ಘಾತುಕರಿಗೆ ಈ ರೀತಿ ಆಜ್ಞಾಪಿಸಿದನು: "ಅರಸನ ಕಣ್ಣುಗಳನ್ನು ಕಟ್ಟಿ ಅಂಬಿಕಾಗ್ರಾಮದಲ್ಲಿರುವ ನನ್ನ ವಸತಿಗೆ ಒಯ್ಯಿರಿ! ಅವನು ಶಬ್ದ ಮಾಡದಂತೆ ಬಾಯಿಯಲ್ಲಿ ವಸ್ತ್ರವನ್ನು ತುಂಬಿರಿ. ಇವನು ಪಾರಾಗಿ ಹೋಗದಂತೆ ಜಾಗ್ರತೆಯಿಂದ ನೋಡಿಕೊಳ್ಳತಕ್ಕದ್ದು. ಇತರ ಕಾರ್ಯಗಳನ್ನು ನಾನು ಅಲ್ಲಿಗೆ ಬಂದು ನಿರ್ಧರಿಸುವೆನು."

"ಅಪ್ಪಣೆ ಮಹಾಸ್ವಾಮಿ!"

ಅವರು ಕುಂತಳೇಂದ್ರನ ಕೈಕಾಲುಗಳನ್ನು ಪ್ರಬಲವಾದ ರಜ್ಜುಗಳಿಂದ

ಬಂಧಿಸಿದರು; ನೇತ್ರಗಳನ್ನು ವಸ್ತ್ರಗಳಿಂದ ಬಂಧಿಸಿ, ದಿಗ್ಬಂಧವನ್ನು ಮಾಡಿದರು. ಅನಂತರ ಆ ಘಾತುಕರು ಅವನನ್ನು ಹೊತ್ತುಕೊಂಡು ಕಾಡಿನಲ್ಲಿ ಮಾಯವಾದರು. ದುಷ್ಟಬುದ್ಧಿಯು ನಗರಾಭಿಮುಖವಾಗಿ ತೆರಳಿದನು.

## ನಾಗರಾಜನ ಸಾಹಸಗಳು!

ನಾಗರಾಜನು ರಾಜಧಾನಿಗೆ ಹಿಂದಿರುಗಿ ಬರುವ ಕಾಲದಲ್ಲಿ ದುಷ್ಟಬುದ್ಧಿಯ ನಿರಂಕುಶ ಪ್ರಭುತ್ವವಾಗಿದ್ದಿತು ನಾಡಿನಲ್ಲೆಲ್ಲ ತಾಂಡವವಾಡುತ್ತಿದ್ದುದು. ಅರಸನು ಸೆರೆಯಾಳದ ನಂತರ ರಾಜ್ಯಶಾಸನದ ಸಕಲ ಭಾರವನ್ನೂ ಅಮಾತ್ಯನೇ ವಹಿಸಿಕೊಂಡನು. ಅವನ ವಿರೋಧಿಗಳಾದ ಅಧಿಕಾರಿಗಳೆಲ್ಲರೂ ತುರಂಗವಾಸದ ರುಚಿಯನ್ನು ನೋಡಬೇಕಾಗಿ ಬಂದಿತು. ತನ್ನ ಶತ್ರುಗಳನ್ನೆಲ್ಲ ಯಾರ ದಾಕ್ಷಿಣ್ಯಕ್ಕೂ ಒಳಗಾಗದೆ ದುಷ್ಟಬುದ್ಧಿಯು ಸಂಹರಿಸಿದನು. ಆಯುಧಶಾಲೆ, ಬೊಕ್ಕಸ, ಅರಮನೆ ಇವುಗಳನ್ನೆಲ್ಲ ಅವನು ತನ್ನ ವಶಪಡಿಸಿಕೊಂಡನು. ಸಾಮಂತ ಅರಸರಿಗೆ ತನ್ನ ಹೆಸರಿನಲ್ಲಿಯೇ ನಿರೂಪಗಳನ್ನು ಹೊರಡಿಸಲು ಪ್ರಾರಂಭಿಸಿದನು. ನಗರದ ನಾಲ್ಕು ಭಾಗಗಳಲ್ಲಿಯೂ ವ್ಯಾಪಿಸಿರುವ ಕೋಟೆಯನ್ನು ಅವನು ಭದ್ರಪಡಿಸಿದನು. ಶತ್ರುಗಳು ನಗರದೊಳಗೆ ಪ್ರವೇಶಿಸದಂತೆ ಬೇಕಾದ ಸನ್ನಾಹಗಳನ್ನೆಲ್ಲ ಅವನು ಏರ್ಪಡಿಸಿದನು. ದುಷ್ಟಬುದ್ಧಿಯ ಅಪ್ಪಣೆಯಿಲ್ಲದೆ ಯಾರೂ ನಗರದೊಳಗೆ ಪ್ರವೇಶಿಸುವಂತಿಲ್ಲ; ಅದರಂತೆಯೇ ನಗರದಿಂದ ತೆರಳಬೇಕಾದರೂ ದುಷ್ಟಬುದ್ಧಿಯ ಅಪ್ಪಣೆಯನ್ನು ಪಡೆಯಬೇಕಾಗಿದ್ದಿತು. ನಗರದ ಹೆಬ್ಬಾಗಿಲಿನಲ್ಲಿ ನೂರಾರುಮಂದಿ ಭಟರು ಕಾದು ನಿಂತಿರುವರು ದುಷ್ಟಬುದ್ಧಿಯ ಮುದ್ರೆಯೊಡನೆ ಕೂಡಿದ ಸಮ್ಮತಪತ್ರವು ಹೊರಗೆ ಹೋಗುವದಕ್ಕೂ ಒಳಗೆ ಬರುವದಕ್ಕೂ ಅತ್ಯಾವಶ್ಯಕವಾಗಿದ್ದಿತು. ಹೆಬ್ಬಾಗಿಲಿನಲ್ಲಿ ನಿಂತಿರುವ ದಂಡನಾಯಕರು ಸಮ್ಮತಪತ್ರವಿಲ್ಲದೆ ಯಾರನ್ನೂ ಒಳಗೆ ಬಿಡುತ್ತಿರಲಿಲ್ಲ ಅಲ್ಲಿ ನಿಂತಿರುವ ಸೈನಿಕರು ನಗರದೊಳಗೆ ತೆರಳುವ ಪ್ರತಿಯೊಬ್ಬನ ದೇಹವನ್ನೂ ಪರಿಶೋಧಿಸಿದ ನಂತರ ಒಳಗೆ ಬಿಡುತ್ತಿದ್ದರು. ಅದರಂತೆಯೇ ಹೊರಗೆ ತೆರಳುವವರೂ ಈ ಪರೀಕ್ಷೆ-ಪರಿಶೋಧನೆಗಳ ತಾಪಗಳಿಗೆ ಗುರಿಯಾಗಬೇಕಾಗುತ್ತಿದ್ದಿತು. ಸಾಮಾನು-ಸರಂಜಾಮುಗಳನ್ನೂ ಸರಕುಗಳನ್ನೂ ಬಹು ಎಚ್ಚರಿಕೆಯಿಂದ ಪರಿಶೋಧಿಸಿದ ನಂತರವೇ ಆ ಸೈನಿಕರು ನಗರದೊಳಕ್ಕಾಗಲಿ ಹೊರಕ್ಕಾಗಲಿ ಕೊಂಡು ಹೋಗಲು ಸಮ್ಮತಿಸುತ್ತಿದ್ದರು. ದುಷ್ಟಬುದ್ಧಿಯು ತಾನು ಅಧಿಕಾರಗಳನ್ನು ವಶಪಡಿಸಿ

ಕೊಂಡ ನಂತರ ತನ್ನ ಆಸನವನ್ನು ಭದ್ರಪಡಿಸುವದಕ್ಕಾಗಿ ಈ ರೀತಿಯ ಹಲವು ಶಿಸ್ತುಗಳನ್ನು ಜಾರಿಗೆ ತಂದಿದ್ದನು.

ಇದು ಮಾತ್ರವಲ್ಲ; ಇನ್ನು ಹಲವು ವಿಚಿತ್ರತರಗತಿಯ ನಿಯಮಗಳು ಅವನ ರಾಜ್ಯಭಾರದಲ್ಲಿ ಜನ್ಮವೆತ್ತಿದುವು. ದೇಶದಲ್ಲೆಲ್ಲ ತನ್ನ ಚಾರರನ್ನು ಕಳುಹಿಸಿ, ನಡೆಯುತ್ತಿರುವ ಪ್ರತಿಯೊಂದು ವಿವರವನ್ನೂ ಅಮಾತ್ಯನು ತಿಳಿಯುತ್ತಲಿದ್ದನು. ಈ ಚಾರರ ನುಡಿಗಳಂತೆ ತನಗೆ ವಿರೋಧವಾಗಿ ಕಂಡು ಬಂದವರನ್ನು ನ್ಯಾಯಾಸ್ಥಾನದಲ್ಲಿ ವಿಚಾರಣೆಗಾಗಲೀ, ಆರೋಪಿಗೆ ತನ್ನ ನಿರಪರಾಧಿತ್ವವನ್ನು ಸ್ಥಾಪಿಸುವ ಸೌಕರ್ಯಗಳನ್ನಾಗಲೀ ಒದಗಿಸಿ ಕೊಡದೆ, ಅಮಾತ್ಯನು ಅವರನ್ನು ಮರಣದಂಡನೆಗೆ ಗುರಿಪಡಿಸುತ್ತಿದ್ದನು. ಇನ್ನೊಂದು ಕಾನೂನು, ಯಾರೂ ತಮ್ಮ ವ್ಯಯವನ್ನು ಕಳೆದು ಹೆಚ್ಚಿರುವ ಧನವನ್ನು ಕೈವಶವಿಟ್ಟುಕೊಳ್ಳಕೂಡದೆಂದೂ, ಅದನ್ನು ರಾಜಕೋಶದಲ್ಲಿ ಭದ್ರಪಡಿಸಬೇಕೆಂದೂ ಆಗಿದ್ದಿತು. ಈ ನಿಯಮದಂತೆ ಒಬ್ಬನು ಸಾವಿರ ಹೊನ್ನುಗಳಿಗಿಂತ ಹೆಚ್ಚು ದ್ರವ್ಯವನ್ನಿಟ್ಟುಕೊಳ್ಳಕೂಡದಾಗಿದ್ದಿತು. ಹಾಗೆ ಇಟ್ಟುಕೊಂಡವನು ಮಹಾರಾಜನ ರಾಜದಂಡನೆಗೆ ಗುರಿಯಾಗಿ ೧೨ ವರ್ಷಗಳ ಕಾರಾಗೃಹ ವಾಸದ ರುಚಿಯನ್ನು ನೋಡಬೇಕಾಗುವುದು. ಈ ನಿಯಮದ ಉದ್ದೇಶವು ಹೆಚ್ಚಿನ ಹಣವಿರುವ ಪ್ರಜೆಗಳು ತಮ್ಮ ದ್ರವ್ಯವನ್ನು ಕುಂತಳೇಂದ್ರನಿಗೆ ಸಹಾಯವನ್ನು ನೀಡಲು ವಿನಿಯೋಗಿಸುವರು ಎಂಬ ಭಯವನ್ನು ನಿವಾರಿಸುವುದಕ್ಕಾಗಿತ್ತು. ಇನ್ನು ತಮ್ಮ ಗಾರ್ಹಿಕ ಪ್ರಶ್ನೆಗಳನ್ನು ಕುರಿತಲ್ಲದೆ, ರಾಜ್ಯಪ್ರಶ್ನೆಗಳನ್ನು ಕುರಿತು ಉಸಿರೆತ್ತಲು ಕೂಡ ಪ್ರಜೆಗಳಿಗೆ ಅವಕಾಶವಿಲ್ಲ. ಯಾರಾದರೂ ದುಷ್ಟಬುದ್ಧಿಯ ಶಾಸನಕ್ಕೆ ವಿಪರೀತವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರಂತೂ, ಅವರ ದೇಹಗಳ ಮೇಲಿನ ರುಂಡಗಳು ನೆಲೆನಿಲ್ಲುವ ಕಾರ್ಯವು ಸಂದೇಹಾಸ್ಪದವೇ ಆಗಿತ್ತು.

ಅರಮನೆಯ ಸುತ್ತಲೂ ನೂರಾರು ಮಂದಿ ಸೈನಿಕರು ಕಾವಲು ನಿಂತಿರುವರು. ಅರಮನೆಯೊಳಗೆ ವಾಸಿಸುವ ಜನರಿಗೆ ಹೊರಗಿನ ಪರಿಸ್ಥಿತಿಗಳಾಗಲಿ, ಹೊರಗಿನವರಿಗೆ ಅರಮನೆಯೊಳಗಿನ ಆದ್ಯಮಾನಗಳಾಗಲಿ ತಿಳಿದುಕೊಳ್ಳಲು ಯಾವ ಅವಕಾಶಗಳೂ ಇಲ್ಲ. ಅರಮನೆಯೊಳಕ್ಕೆ ಒಬ್ಬ ವಸ್ತ್ರವ್ಯಾಪಾರಿ, ಹಾಲು-ಮಜ್ಜಿಗೆಗಳನ್ನು ವಿಕ್ರಯಿಸುವ ಒಬ್ಬ ಗೊಲ್ಲ ಸ್ತ್ರೀ, ಕಾಯಿ-ಪಲ್ಲೆಗಳನ್ನು ಮಾರುವ ಒಬ್ಬಳು ಮುದುಕಿ ಈ ಮೂವರಿಗಲ್ಲದೆ ಇನ್ನಾಂಗೂ ಪ್ರವೇಶವು ಸಿಗದು.

ದುಷ್ಟಬುದ್ಧಿಯ ಈ ರೀತಿಯ ನಿರಂಕುಶ ಶಾಸನವು ತಾಂಡವವಾಡು

ತ್ತಿರುವಾಗ ಚಂದ್ರಹಾಸನ ನಿರ್ದೇಶದಂತೆ ರಾಜಧಾನಿಗೆ ಹೊರಟ ನಾಗರಾಜನು ಕುಂತಳನಗರಕ್ಕೆ ಬಂದು ತಲುಪಿದನು. ಒಬ್ಬ ಭೃತ್ಯನಲ್ಲದೆ ಇನ್ನಾರೂ ಅವನ ಸಂಗಡವಿರಲಿಲ್ಲ. ನಾಗರಾಜನು ಕುಂತಳನಗರದ ಹೆಬ್ಬಾಗಿಲಿಗೆ ತಲುಪಿದೊಡನೆಯೇ ಅಲ್ಲಿ ನಿಂತಿದ್ದ ಒಬ್ಬ ದಂಡನಾಯಕನು ನಾಗರಾಜನನ್ನು ದುರದುರನೆ ನೋಡುತ್ತ:—"ಸಮ್ಮತ ಪತ್ರವೆಲ್ಲಿ?" ಎಂದು ಗರ್ಜಿಸಿದನು.

"ಯಾವ ಸಮ್ಮತಪತ್ರ!" ಎಂದು ಆಶ್ಚರ್ಯಭರಿತನಾಗಿ ನಾಗರಾಜನು ಪ್ರಶ್ನಿಸತಕ್ಕವನಿದ್ದನು; ಆದರೆ ಅವನು ಆ ರೀತಿ ವರ್ತಿಸಲಿಲ್ಲ. ಈ ವಿಚಿತ್ರವಾದ ಸಮ್ಮತ ಪತ್ರದ ಸಂಗತಿಯಿಂದ ತಾನು ಯುದ್ಧರಂಗಕ್ಕೆ ತೆರಳಿದ ನಂತರ ಏನೇನೋ ಹಲವು ವಿಶೇಷ ಸಂಭವಗಳು ಜರುಗಿವೆಯೆಂದೂ, ಆ ಸಂಭವಗಳ ಕುರುಹು ಈ ಸಮ್ಮತ ಪತ್ರದ ಅವತಾರವೆಂದೂ ಅವನು ಊಹಿಸಿ ತಿಳಿದುಕೊಂಡನು. ಒಡನೆಯೇ ನಾಗರಾಜನು ತನ್ನ ಜೇಬುಗಳಿಗೆ ಕೈಹಾಕಿ ಸಮ್ಮತ ಪತ್ರವನ್ನು ಹುಡುಕಿ ತೆಗೆಯುತ್ತಿರುವವನ ಹಾಗೆ ನಟಿಸಿದನು. ಬಹಳ ಹೊತ್ತು ತನ್ನ ಜೇಬುಗಳಲ್ಲಿಯೂ ವಸ್ತ್ರಗಳಲ್ಲಿಯೂ ಭಯ ಮತ್ತು ಪರಿಭ್ರಮಭಾವಗಳನ್ನು ತಾಳಿದವನಂತೆ ನಟಿಸುತ್ತ ನಾಗರಾಜನು ಹುಡುಕಿದನು. ಅವನ ಈ ಭಾವವನ್ನು ಕಂಡು, ಚಕಿತನಾದ ದಂಡನಾಯಕನು: "ಏನಯ್ಯಾ, ಇಷ್ಟು ಫಜೀತಿಯಲ್ಲಿ ಹುಡುಕುತ್ತಿರುವೆ?" ಎಂದು ಕೇಳಿದನು.

"ಅಯ್ಯೋ! ದಂಡನಾಯಕರೇ, ಸರ್ವನಾಶವಾಗಿ ಹೋಯಿತು." ಎನ್ನುತ್ತ ಅಳತೊಡಗಿದನು ನಾಗರಾಜನು.

"ಏನಯ್ಯಾ, ಹೆಂಗಸರ ಹಾಗೆ ಅಳುತ್ತಿರುವೆ?"

"ಹೋಯಿತು! ನನ್ನ ಸಮ್ಮತ ಪತ್ರವು ಹಾಳಾಗಿ ಹೋಗಿದೆ; ಯಾರೋ ನನಗೆ ಚಕ್ಕರ್ ಕೊಟ್ಟರು!"

"ಹೇಗಯ್ಯಾ, ಅದು ಹೋದುದು?"

"ಅದು ತಿಳಿದಿದ್ದರೆ ಈ ಫಜೀತಿಗೆ ಅವಕಾಶವೇ ಇರಲಿಲ್ಲ. ನಾನು ಮದನಕುಮಾರನ ಗುಮಾಸ್ತನು; ಕರವಸೂಲಿಗಾಗಿ ಹಳ್ಳಿಗಳೊಳಗೆ ಹೋಗಿದ್ದೆನು. ಎಲ್ಲ ಕರವಸೂಲನ್ನು ಮಾಡಿ ಈಗ ತಾನೆ ನಾನು ಹಿಂದಿರುಗಿ ಬಂದಿರುವೆನು."

"ಮದನಕುಮಾರರ ಎಲ್ಲಾ ಗುಮಾಸ್ತರ ಪರಿಚಯವೂ ನನಗಿದೆ; ಅವರ ಪೈಕಿ ನೀನು ಇದ್ದ ಹಾಗೆ ತೋರುವದಿಲ್ಲವಲ್ಲ!"

"ದಂಡನಾಯಕರೇ, ಹೇಗೆ ತಾವು ತಿಳಿಯುವಿರಿ ನನ್ನನ್ನು? ನಾನು

ಹೆಚ್ಚಾಗಿ ಹಳ್ಳಿಗಾಡಿನಲ್ಲಿಯೇ ವಾಸ; ಹಳ್ಳಿಗಾಡುಗಳಲ್ಲಿ ಕರವಸೂಲಿ ಮಾಡಿ ಪಕ್ಷಕ್ಕೊಮ್ಮೆ ರಾಜಧಾನಿಗೆ ಬಂದು ಹಣವನ್ನು ಬೊಕ್ಕಸಕ್ಕೆ ಸಲ್ಲಿಸಿ ಮರು ದಿನವೇ ಹಿಂದಿರುಗಿ ಹೋಗತಕ್ಕವನು ನಾನು! ಆದುದರಿಂದ ತಾವು ನನ್ನನ್ನು ಕಾಣುವ ಬಗೆ ಹೇಗೆ? ನಾನು ಸುಳ್ಳು ಹೇಳುವದಿಲ್ಲ; ನೋಡಿ, ಈ ಸರತಿ ತಂದ ಹೊನ್ನುಗಳು!" ಎಂದು ನುಡಿದು, ತನ್ನ ಚೀಲವನ್ನು ಬಿಚ್ಚಿ ನಾಗರಾಜನು ದಂಡನಾಯಕನಿಗೆ ಸಾವಿರಾರು ಹೊನ್ನುಗಳನ್ನು ತೋರಿಸಿದನು.

"ನೀನೆಲ್ಲಿಯಾದರೂ ಸಮ್ಮತಪತ್ರವನ್ನು ಮರೆತಿರಬಹುದು; ಹುಡುಕಿ ತೆಗೆದುಕೊಂಡು ಬಾ!"

"ಕರವಸೂಲಿಗಾಗಿ ಒಂದು ದಿನಕ್ಕೆ ನೂರುಮನೆಗಳನ್ನು ಸುತ್ತಿ ಸಂಚರಿಸುವವನು ನಾನಾಗಿದ್ದೇನೆ; ಎಲ್ಲಿ ಎಂದು ನಾನು ಹುಡುಕಲಿ! ಇಂದು ಸೂರ್ಯಾಸ್ತಮಾನಕ್ಕೆ ಮೊದಲೇ ಬೊಕ್ಕಸಕ್ಕೆ ಹಣವನ್ನು ಒಪ್ಪಿಸಬೇಕೆಂದು ಆಜ್ಞೆಯಾಗಿದೆ ದಂಡನಾಯಕರೆ! ದಯೆತೋರಿರಿ! ನಿಮ್ಮ ಹಾಗೆಯೇ ಹೆಂಡತಿ-ಮಕ್ಕಳು ನನಗೂ ಇದ್ದಾರೆ; ಈ ಬಡವನ ಬದುಕು ಹಾಳು ಮಾಡಬೇಡಿ!"

ನಾಗರಾಜನ ಈ ದೈನ್ಯತೆಯಿಂದ ತುಂಬಿದ ನುಡಿಗಳನ್ನು ಆಶ್ರಾವಿಸಿ ದಂಡನಾಯಕನ ಎದೆಯು ಕರಗಿತು. "ಬಹಳ ಸಜ್ಜನನಾಗಿ ತೋರುತ್ತಾನೆ; ಮದನಕುಮಾರನ ಗುಮಾಸ್ತನೆಂದು ಹೇಳುತ್ತಾನೆ!" ಎಂದು ಆಲೋಚಿಸುತ್ತ ಹೇಳಿದನು ದಂಡನಾಯಕನು: "ನೀನು ಬಹಳೇ ಸಜ್ಜನನಾಗಿ ತೋರುತ್ತೀಯೆ! ಆದುದರಿಂದ ಈ ಬಾರಿ ನಗರದೊಳಗೆ ತೆರಳು. ನಿನಗೆ ಸಮ್ಮತವನ್ನು ಕೊಡುತ್ತೇನೆ. ಸಮ್ಮತ ಪತ್ರವಿಲ್ಲದೆ ಒಳಗೆ ಬಿಡುವದು ಮಹತ್ತಾದ ಅಪರಾಧವಾಗಿದೆ. ನೀನು ಹಿಂದಿರುಗಿ ಬರುವಾಗ ಸಮ್ಮತಪತ್ರವನ್ನು ತೆಗೆದುಕೊಂಡು ಬರಬೇಕು. ತಿಳಿಯಿತೇ? "ಎಂದನು.

"ದಂಡನಾಯಕರೇ, ಬಹಳ ಉಪಕಾರವಾಯಿತು; ಈ ಜನ್ಮದಲ್ಲಿ ನಾನು ತಮ್ಮನ್ನು ಮರೆಯಲಾರೆನು. ಇಂದು ತಾವು ಕರುಣೆಯನ್ನು ತೋರದಿದ್ದರೆ, ನನ್ನ ಮೂರು ಮಂದಿ ಮಕ್ಕಳ ಹೊಟ್ಟೆಗೆ ಮಣ್ಣಾಗುತ್ತಿತ್ತು." ಎಂದು ದಂಡನಾಯಕನನ್ನು ಹೊಗಳುತ್ತ, ನಾಗರಾಜನು ಹೆಬ್ಬಾಗಲಿನೊಳಗೆ ತನ್ನ ಭೃತ್ಯನೊಡನೆ ಪ್ರವೇಶಿಸಿದನು.

ದಂಡನಾಯಕನು ನಾಗರಾಜನ ಮುಖಸ್ತುತಿಯಿಂದ ಉಬ್ಬಿಹೋದನು. ಸಾಧಾರಣವಾಗಿ ಯಾರಾದರೂ ನಮ್ಮನ್ನು ಮುಖಸ್ತುತಿ ಮಾಡಿದರೆ, ಆ ಹೆಂಡದ ರುಚಿಯಿಂದ ನಾವು ನಮ್ಮಗಳನ್ನು ಮರೆತೇ ಬಿಡುವೆವು. ದಂಡನಾಯಕನಾದರೂ ಈ ಮುಖಸ್ತುತಿಯಿಂದುಂಟಾದ ಹರ್ಷದಲ್ಲಿಯೇ

ತಲ್ಲೀನವಾದುದರಿಂದ ನಾಗರಾಜನೊಡನೆ ಬಂದಿದ್ದ ಭೃತ್ಯನ ಸಮ್ಮತಪತ್ರವನ್ನು ಪರಿಶೋಧಿಸುವ ಕೆಲಸವನ್ನು ಅವನು ಮರೆತನು. ನಾಗರಾಜನು ತನ್ನ ತಂತ್ರವು ಫಲಪ್ರದವಾದುದನ್ನು ಕಂಡು ಮನಸ್ಸಿನಲ್ಲಿಯೇ ನಗುತ್ತ ನಗರದೊಳಗೆ ಪ್ರವೇಶಿಸಿದನು.

ಚಿಂತೆಯಲ್ಲಿ ಮುಳುಗಿರುವ ನಗರದ ಸ್ವರೂಪವನ್ನು ಕಂಡೊಡನೆಯೇ ನಾಗರಾಜನ ಸಂಶಯಗಳು ಹೆಚ್ಚಿದುವು. ದಾರಿಯಲ್ಲಿ ಕಂಡ ಒಬ್ಬಿಬ್ಬರನ್ನು ಕುರಿತು ಈ ವಿಚಿತ್ರಾವಸ್ಥೆಗೆ ಕಾರಣವೇನೆಂದು ಅವನು ಪ್ರಶ್ನಿಸಿದಾಗ, ಅವರು ತಮ್ಮ ಕಣ್ಣುಗಳನ್ನು ಹೊರಳಿಸಿ ಪಿಸುಮಾತಿನಲ್ಲಿ: "ಎಚ್ಚರಿಕೆ! ರಾಜ್ಯಕಾರ್ಯಗಳನ್ನು ಕುರಿತು ಪ್ರಶ್ನಿಸಿದರೆ ನಿನ್ನ ದೇಹದಲ್ಲಿ ಮುಂದವು ಉಳಿಯಲಿಕ್ಕಿಲ್ಲ" ಎಂದು ಮಾತ್ರ ಹೇಳಿದರು. ನಾಗರಾಜನು ಇತರ ಸಂಗತಿಗಳನ್ನು ತನ್ನಬುದ್ಧಿಯನ್ನು ಉಪಯೋಗಿಸಿ ತಿಳಿದುಕೊಳ್ಳಲು ಪ್ರಯತ್ನಿಸಿದನು.

ನಾಗರಾಜನು ತನ್ನ ವೇಷದಲ್ಲಿಯೇ ನಗರದಲ್ಲಿ ಸಂಚರಿಸುವುದು ಅಪಾಯಕರವೆಂದು ನೆನೆದನು. ತನ್ನನ್ನು ತಿಳಿದವರು ಈ ನಗರದಲ್ಲಿ ಧಾರಾಳ ಮಂದಿ ಇರಬಹುದು. ತಾನು ಚಂದ್ರಹಾಸನ ಗೆಳೆಯನೆಂಬುದು ಅಮಾತ್ಯನಿಗೆ ತಿಳಿದರೆ, ತನ್ನ ಬಾಳುವೆಯು ನೆಟ್ಟಗೆ ಆಗಲಿಕ್ಕಿಲ್ಲವೆಂದು ಆ ಚಾಣಾಕ್ಷನು ಊಹಿಸಿದನು. ಅವನು ಹಾಗೆಯೇ ಅನ್ನವನ್ನು ವಿಕ್ರಯಿಸುವ ಒಬ್ಬ ಮುದುಕಿಯ ಮನೆಯನ್ನು ಹುಡುಕಿದನು.

ಆ ಕಾಲದಲ್ಲಿ ಈಗಿನಂತೆ ಹೋಟೆಲ್ಲುಗಳಾಗಲೀ, ಭೋಜನ ಶಾಲೆಗಳಾಗಲೀ, ಉಪಾಹಾರ ಮಂದಿರಗಳಾಗಲೀ ಇರಲಿಲ್ಲ. ಆ ಕಾಲದ ಅರಸರು ನಗರದಲ್ಲೆಲ್ಲ ದೊಡ್ಡ ದೊಡ್ಡ ಸತ್ರಗಳನ್ನು ಇಡಿಸಿದ್ದರು. ಆ ಕಾಲದ ಜನರು ಅನ್ನ ವಿಕ್ರಯವನ್ನು ಅತ್ಯಂತ ನಿಂದ್ಯವಾದ ಒಂದು ಕರ್ಮವೆಂದು ಪರಿಗಣಿಸಿದ್ದರು. ಗತಿಶೂನ್ಯೆಯರಾದ ವಿತಂತುಗಳು, ತಮ್ಮನ್ನು ಸಾಕಿ ಸಲಹಲು ನಾಥರಿಲ್ಲದ ಹೆಂಗಸರು ನಗರಗಳಲ್ಲಿ ದೂರ ದೇಶಗಳಿಂದ ಬರುವ ಪ್ರವಾಸಿಗಳಿಗೆ ಅನ್ನವನ್ನು ವಿಕ್ರಯಿಸಿ ಬರುವ ದ್ರವ್ಯದಿಂದ ಉದರ ನಿರ್ವಹಣವನ್ನು ಮಾಡುತ್ತಿದ್ದರು. ಈ ವೃತ್ತಿಯು ಬಹು ಕಾಲದಿಂದಲೇ ನಮ್ಮ ನಾಡಿನಲ್ಲಿ ನಡೆದು ಬಂದಿದೆ ಎಂದು ಹೇಳಬಹುದು. ಲಕ್ಷಾಗೃಹದಿಂದ ಪಾಂಡವರು ಪಾರಾದ ನಂತರ ವೇಷಚ್ಛನ್ನರಾಗಿ ಏಕಚಕ್ರಪುರದಲ್ಲಿ ಓರ್ವ ಅನ್ನ ವಿಕ್ರಯಿನಿಯ ಗೃಹದಲ್ಲಿ ವಾಸವಾಗಿದ್ದರೆಂದು ಮಹಾಭಾರತದಲ್ಲಿ ಉಲ್ಲೇಖಿತವಾಗಿರುವದರಿಂದ, ಈ ಪದ್ಧತಿಯು ಅನಾದಿಕಾಲದಿಂದಲೂ ನಮ್ಮಲ್ಲಿ ನಡೆದು ಬಂದಿದೆ ಎಂದು ಹೇಳಬಹುದು.

ಈ ರೀತಿಯು ಓರ್ವ ಅನ್ನವಿಕ್ರಯಿನಿಯ ಗೃಹಕ್ಕೆ ಸಾಗರಾಜನು ತೆರಳಿದನು. ಅಲ್ಲಿ ಸುಖವಾಗಿ ತನ್ನ ಭೋಜನವನ್ನು ತೀರಿಸಿದ ನಂತರ ಆ ಹೆಂಗುಸಿನೊಡನೆ ಮಾತಾಡುತ್ತ ಅಲ್ಲಿ ಸ್ವಲ್ಪ ಹೊತ್ತು ಕುಳಿತುಕೊಂಡನು. ಅವಳಿಗೆ ನಲವತ್ತು-ಐವತ್ತು ವರ್ಷ ಪ್ರಾಯವಿರಬಹುದು. ಒಳ್ಳೆಯ ಸ್ವಭಾವ ಗುಣಗಳುಳ್ಳವಳಾಗಿದ್ದಳು. ಭೋಜನಕ್ಕಾಗಿ ಬಂದ ಜನರನ್ನು ವಿನಯ ವಚನಗಳಿಂದ ಸಂತೃಪ್ತಿಗೊಳಿಸಿ, ಅವರನ್ನು ಉಪಚರಿಸುವದರಲ್ಲಿ ಅತ್ಯಂತ ಕುಶಲಳುಳ್ಳವಳಾಗಿದ್ದಳು. ನಾಗರಾಜನು ಅವಳ ವರ್ತನೆಯನ್ನೂ ನುಡಿಗಳನ್ನೂ ಅವಲೋಕಿಸಿ ಬಹು ಸಂತುಷ್ಟನಾದನು. ಅವನು ಅವಳೊಡನೆ ಹೇಳಿದನು:-"ನಿನಗೆ ಬಂಧುಗಳು ಯಾರೂ ಇಲ್ಲವೇನಮ್ಮಾ?"

"ಇಲ್ಲ. ದೇವರೇ ನನ್ನ ಬಂಧು-ಬಾಂಧವರು!"

"ನೀನೇಕೆ ಹಾಗೆ ಹೇಳುವೆ?"

"ಅಯ್ಯೋ! ನಾನು ಒಂದು ಕಾಲದಲ್ಲಿ ಸಂಪತ್ತುಳ್ಳವಳಾಗಿದ್ದೆನು. ವಿಧಿವಿಲಾಸದಿಂದ ಅನ್ನವಿಕ್ರಯಿನಿಯಾಗಬೇಕಾಗಿ ಬಂದಿತು!"

"ಅದೇನು ಹೇಳು?"

"ಅಯ್ಯೋ! ಇಪ್ಪತ್ತೆರಡು ವರ್ಷಗಳಾದುವು; ನಾನಾದರೂ ಅತ್ಯಂತ ಶ್ರೇಷ್ಠವಾದ ಒಂದು ಕುಟುಂಬದಲ್ಲಿಯೇ ಜನಿಸಿದೆನು; ಶ್ರೇಷ್ಠಕುಲದ ಆರ್ಯ ಪುತ್ರನ ಕೈಯನ್ನೇ ಹಿಡಿದೆನು. ಆದರೆ.........." ಎಂದೆನ್ನುತ್ತ ಮಾತನ್ನು ನಿಲ್ಲಿಸಿ ಕಂಬನಿ ಸುರಿಸಲಾರಂಭಿಸಿದಳು ಆ ಹೆಂಗುಸು.

"ಏಕಮ್ಮಾ, ಅಶ್ರುರಾಶಿಯನ್ನು ಸುರಿಸುತ್ತಿರುವೆ?"

"ನಮ್ಮ ಊರು ಇದಲ್ಲ; ನಾನು ಕೇರಳದಿಂದ ಬಂದವಳು. ನನ್ನ ಸ್ವಾಮಿಯವರು ಅಲ್ಲಿಯ ಸೇನಾಪತಿಗಳಾಗಿದ್ದರು; ಆದರೆ ನನ್ನ ದೌರ್ಭಾಗ್ಯದಿಂದ ಅವರು ಯುದ್ಧದಲ್ಲಿ ಪರಗತರಾದರು."

"ಯಾವುದಾ ಸಮರವು?"

"ನಮ್ಮ ನಾಡಿನ(ಕೇರಳದ) ಸದ್ಧಾರ್ಮಿಕ ಮಹಾರಾಜರಿಗೆ ಬಹು ಯಜ್ಞಯಾಗತಪಹೋಮಗಳ ಫಲವಾಗಿ ಒಬ್ಬ ಮಗನು ಜನಿಸಿದನು. ತಂದೆಯ ಪ್ರಾಣಕ್ಕೆ ಕಂಟಕವನ್ನು ತರುವ ಒಂದು ವಿಷಮ ಮುಹೂರ್ತದಲ್ಲಿ ಆ ಕೂಸಿನ ಜನನವು ಆಗಿದ್ದಿತು! ಶಿಶುಜನನದ ನಂತರ ಮೂರು ವರ್ಷಗಳೊಳಗಾಗಿ ದೇಶಕ್ಕೆ ಮಹತ್ತಾದ ಶತ್ರುಬಾಧೆಯು ಪ್ರಾಪ್ತವಾಗಿ ಅರಸನಿಗೆ ದೊಡ್ಡದಾದ ಒಂದು ಕಂಟಕವು ಸಂಪ್ರಾಪ್ತವಾಗುವುದೆಂದು ಜ್ಯೋತಿಷ್ಕರು ನುಡಿದರು. ಬಾಲಕನಿಗೆ ಇಪ್ಪತ್ತುನಾಲ್ಕು ವರ್ಷ ಪ್ರಾಯವಾದ ನಂತರ

ಮಹಾರಾಜನಾಗಿ ಬಾಳುವ ಭಾಗ್ಯವು ಇದೆಯೆಂದು ಸಹ ಅವರು ಹೇಳಿದರು. ಆ ಭವಿಷ್ಯದಂತೆ ವಿಪತ್ತು ಪ್ರಾಪ್ತವಾಗಿ ಶತ್ರುಬಾಧೆಯಿಂದ ಮಹಾರಾಜರು ಮೃತರಾದರು. ಆ ಯುದ್ಧದಲ್ಲಿಯೇ ನನ್ನ ಭಾಗ್ಯಪ್ರದೀಪಕನು ನನ್ನನ್ನು ತ್ಯಜಿಸಿದನು. ಶತ್ರುಗಳು ಪುರವನ್ನು ಆಕ್ರಮಿಸಲು, ನಾನು ಕುಂತಳಕ್ಕೆ ಬಂದು ಅನ್ನವಿಕ್ರಯಿನಿಯಾಗಿ ಜೀವಿಸುತ್ತಲಿದ್ದೇನೆ''

ನಾಗರಾಜನಿಗೆ ಅನ್ನವಿಕ್ರಯಿನಿಯ ಈ ಮಾತುಗಳು ಸೊಗಸೆನಿಸಲಿಲ್ಲ. ವಿಷಯಾಕುಮಾರಿ, ಕುಂತಳದ ವಿಚಿತ್ರತರದ ಶಾಸನದ ಅವತಾರ ಇವುಗಳನ್ನು ಕುರಿತು ಅವನ ಮನಸ್ಸು ಚಿಂತಿಸುತ್ತಲಿದ್ದಿತು. ವಿಷಯಾಕುಮಾರಿಯ ಅವಸ್ಥೆಯೇನೆಂಬುದನ್ನು ತಿಳಿಯಲು ಅವನು ಆತುರಭರಿತನಾಗಿದ್ದನು. ಬಹಳ ಮಾಡಿ ಸಹಾಯಕ್ಕಾಗಿ ತಾನು ಬರುವ ಮುಂಚೆಯೇ ಅನರ್ಥವು ಒದಗಿರಬಹುದೇ? ಎಂದು ಅವನು ಆಲೋಚಿಸಿದನು. ಆದುದರಿಂದ ಆ ಸಂಗತಿಯನ್ನು ಅರಿಯಲು ಉತ್ಸುಕನಾಗಿ, ಅವನು ಅನ್ನವಿಕ್ರಯಿನಿಯನ್ನು ಪ್ರಶ್ನಿಸಿದನು: ''ಅಮಾತ್ಯನಂದಿನಿಯ ವಿವಾಹ ವಾರ್ತೆಯನ್ನು ಕೇಳಿದ್ದೆನು; ಅದು ಜರುಗಿತೆ?'' ಎಂಬುದಾಗಿ

''ಇಲ್ಲ;'' ಎಂದು ಅನ್ನವಿಕ್ರಯಿನಿಯು ನುಡಿದು, ಅಮಾತ್ಯನಂದಿನಿಯು ವಿವಾಹದ ದಿವಸ ಮಾಯವಾದ ಕತೆಯನ್ನು ನಾಗರಾಜನಿಗೆ ವಿವರಿಸಿ ಹೇಳಿದನು.

ಈ ಮಾತುಗಳನ್ನು ಕೇಳಿದ ನಂತರ ನಾಗರಾಜನು ಸ್ವಲ್ಪ ವೇಗವಾಗಿ ಉಸಿರಾಡತೊಡಗಿದನು. ಅಮಾತ್ಯನಂದಿನಿಯು ಎಲ್ಲಿ ಈ ವಿವಾಹಕ್ಕೆ ಹೇಸಿ ಆತ್ಮಹತ್ಯೆಗೆ ಉದ್ಯುಕ್ತಳಾಗುವಳೋ? ಎಂಬ ಭೀತಿಯು ನಾಗರಾಜನಿಗಿದ್ದಿತು; ಆದರೆ ಅವಳು ಗೃಹದಿಂದ ಮಾಯವಾದ ವಾರ್ತೆಯನ್ನರಿಯಲು ಅವನ ಭಯವು ನಿವಾರಣೆಯಾಯಿತು. ಕುಂತಳದ ಸದ್ಯದ ಪರಿಸ್ಥಿತಿಯನ್ನು ತಿಳಿಯುವ ಉದ್ದೇಶದಿಂದ ಹೀಗೆ ಅವನಂದನು: ''ಕುಂತಳದಲ್ಲಿ ಯುದ್ಧವೆಂಬ ವಾರ್ತೆಯನ್ನು ಕೇಳಿದ್ದೆನು. ಶತ್ರುಗಳ ಬಾಧೆಯು ಅಧಿಕವಾಗಿರಬಹುದಲ್ಲವೇ? ಮಹಾರಾಜಧಿರಾಜರಿಗೇ ಜಯವುಂಟಾಗುವದೆಂದು ನನ್ನ ಊಹೆ!''

''ನಿಮ್ಮ ಮಾತು ಕೇಳುವಾಗ ನೀವು ಈ ಊರಿಗೆ ಹೊಸಬರಂತೆ ಕಾಣುತ್ತೀರಲ್ಲ!''

''ಹೌದು! ನಾನೊಬ್ಬ ವ್ಯಾಪಾರಿಯು. ನಿನ್ನೆಯ ದಿನ ಇಲ್ಲಿಗೆ ಬಂದೆನು. ಏನೋ ಯುದ್ಧ ನಡೆಯುತ್ತಿದೆಯೆಂದು ಮಾತ್ರ ದಾರಿಯಲ್ಲಿ ಕೇಳಿದ್ದೆನು.''

"ಯುದ್ಧ ಮಾತ್ರವೇ! ಶತ್ರುಗಳು ತಂತ್ರವನ್ನು ಪ್ರಯೋಗಿಸಿ ಮಹಾರಾಜರನ್ನು ಸೆರೆಹಿಡಿದಿರುವರಂತೆ" ಹೀಗೆಂದು ಆ ಹೆಂಗುಸು ಮಹಾರಾಜರು ಮಾಯವಾದ ವಾರ್ತೆಯನ್ನು ನಾಗರಾಜನಿಗರುಹಿದಳು: "ಶತ್ರುಗಳು ರಾಜಧಾನಿಯಲ್ಲಿ ಸಹ ಇರುವರೆಂಬ ಸಂಶಯದ ಮೇಲೆ ಅಮಾತ್ಯರು ಉಗ್ರವಾದ ಶಾಸನಗಳನ್ನು ಜಾರಿಯಲ್ಲಿ ತಂದಿರುವರು."

"ಇಷ್ಟೆಲ್ಲ ಅನರ್ಥಗಳು ಘಟಿಸಿರುವದು ನನಗೆ ತಿಳಿಯದು. ಹೆಚ್ಚಿನ ವಿಶೇಷವೇನಿದೆ?" ಎಂದು ರಾಜಕಾರಣದ ಕಲಾಪಗಳನ್ನು ಕುರಿತು ತಿಳಿದುಕೊಳ್ಳಲು ಉತ್ಸುಕನಾಗಿ ನಾಗರಾಜನು ಪ್ರಶ್ನಿಸಿದನು.

"ನಾನು ಹೊರಗೆ ಹೋದವಳಲ್ಲ; ರಾಜ್ಯಕಾರ್ಯಗಳು ನನಗೆ ತಿಳಿಯವು. ಇಲ್ಲಿ ಊಟಕ್ಕೆ ಬರುತ್ತಿರುವ ಜನರು ಆಡುವ ಮಾತುಗಳಿಂದ ಇಷ್ಟನ್ನು ಗ್ರಹಿಸಿಕೊಂಡಿರುವೆನು. ಸಾರು ತೀರಿ ಹೋಗಿದೆ; ಅವನು ಬರುವ ಹೊತ್ತಾಯಿತು. ಸಾರು ಮಾಡಬೇಕಾಗಿದೆ."

"ಅವನು ಎಂದರೆ ಯಾರು?"

"ಒಬ್ಬ ವಿಚಿತ್ರ ಮನುಷ್ಯನವನು; ಅವನು ಯಾರೆಂಬುದು ತಿಳಿಯದು. ನಿತ್ಯವೂ ಇಲ್ಲಿಗೆ ಊಟಕ್ಕೆ ಮಾತ್ರ ಬರುತ್ತಾನೆ. ಅವನ ಹೆಸರು ವಿಶ್ವಜಿತು ಅಂತ. ಅವನ ವಿಚಿತ್ರವೇನಂದರೆ, ಅವನು ಊಟಮಾಡುವದನ್ನು ಯಾರೂ ನೋಡಕೂಡದು. ಒಂದು ಕೋಣೆಯಲ್ಲಿ ಆಹಾರವನ್ನೆಲ್ಲ ಸಿದ್ಧಪಡಿಸಿ ಮಡಗಿದ ನಂತರ ಅವನು ತಾನು ಬಂದು ತಾನೇ ಬಡಿಸಿಕೊಂಡು ಊಟವನ್ನು ಮಾಡುವನು. ಬಾಗಿಲವನ್ನು ಸಹ ಭದ್ರಪಡಿಸಿರುತ್ತಾನೆ ಮಹಾರಾಯ! ಅದೊಂದು ವ್ರತವಂತೆ!" ಎಂದು ನುಡಿದು, ಅವಳು ಗೃಹಾಂತರ್ಭಾಗಕ್ಕೆ ಹೊರಟು ಹೋದಳು.

ಈ ವಿಚಿತ್ರ ಮನುಷ್ಯನು ಯಾರೆಂಬುದನ್ನು ತಿಳಿಯಲು ನಾಗರಾಜನು ಉತ್ಸುಕನಾದನು. ಇನ್ನು ಸ್ವಲ್ಪ ಹೊತ್ತಿನೊಳಗಾಗಿ ಅವನು ಊಟಕ್ಕೆ ಬರುವಾಗ ನೋಡಬಹುದಲ್ಲಾ? ಎಂಬ ಸಂತಸವನ್ನು ಹೊಂದಿ ನಾಗರಾಜನು ಒಂದು ಚಾಪೆಯನ್ನು ಹಾಸಿ ಮಲಗಿದನು. ಒಂದು ಗಳಿಗೆ ಸಮಯವು ಗತಿಸಲು, ೧೭-೧೮ ವರ್ಷ ಪ್ರಾಯದ ಸುಂದರನಾದ ಒಬ್ಬ ತರುಣನು ಅನ್ನವಿಕ್ರಯಿನಿಯ ಗೃಹದೊಳಗೆ ಪ್ರವೇಶಿಸುತ್ತಿರುವದನ್ನು ನಾಗರಾಜನು ಅವಲೋಕಿಸಿದನು. ಆ ತರುಣನು ಅವನನ್ನು ನೋಡಿದೊಡನೆಯೇ ಒಂದು ವಿಸ್ಮಯ ದೃಷ್ಟಿಯನ್ನು ಚೆಲ್ಲಿದನು. ನಾಗರಾಜನ ಮನಸ್ಸಿನಲ್ಲಿ ಈ ಮೊಗವನ್ನು ತಾನೆಲ್ಲಿಯೋ ಕಂಡ ನೆನಪು ಬಂದಿತು; ಆದರೆ ಎಲ್ಲಿ ಎಂಬುದು ಅವನ

ನೆನಪಿಗೆ ಬರಲಿಲ್ಲ. ಅನ್ನವಿಕ್ರಯಿನಿಯು ಹೇಳಿದ ವಿಶ್ವಜಿತ್ತು ಇವನೇ ಇರ ಬೇಕೆಂದು ಅವನು ಊಹಿಸಿಕೊಂಡನು. ಆ ತರುಣನು:—"ಅಜ್ಜೀ, ಭೋಜನಕ್ಕೆ ಆಗಿದೆಯೇ?" ಎಂದು ಪ್ರಶ್ನಿಸಿದನು. ಆ ಸ್ವರವು ಬಹು ಇಂಪಾಗಿದ್ದು, ಹೆಂಗುಸಿನ ಕಂಠನಾದದಂತೆ ಇರುವದನ್ನು ಕಂಡು, ನಾಗರಾಜ ನಿಗೆ ಆಶ್ಚರ್ಯವಾಯಿತು.

"ಇಲ್ಲ, ಸ್ವಲ್ಪ ತಾಳು; ಸಾರು ಆಗಿಲ್ಲ" ಎಂಬ ಅನ್ನವಿಕ್ರಯಿನಿಯ ಪ್ರತ್ಯುತ್ತರವು ಕೇಳಬಂದಿತು.

"ಚಿಂತೆಯಿಲ್ಲ; ಅಷ್ಟು ಅವಸರವೇನೂ ಇಲ್ಲ. ಬೇಕಾದರೆ ಒಂದೆರಡು ಗಳಿಗೆ ಪರ್ಯಂತ ತಾಳುವೆನು" ಅನ್ನುತ್ತ ಆ ತರುಣನು ಒಂದು ಚಾಪೆ ಯನ್ನು ಹಾಸಿ ಅದರ ಮೇಲೆ ಕುಳಿತುಕೊಂಡನು.

ಆ ತರುಣನು ಯಾರೆಂದು ತಿಳಿಯಲು ನಾಗರಾಜನು ಆಗ್ರಹಿಸಿದನು; ಅವನು ಆ ತರುಣನ ಕಡೆಗೆ ನೋಡುತ್ತ 'ತಾವು ಯಾರು?' ಎಂದು ಕೇಳಿದನು.

"ತಾವು ಯಾರು?" ಎಂಬ ನಾಗರಾಜನ ಪದಗಳನ್ನೇ ಆ ತರುಣನು ತಿರುಗಿ ಪ್ರಯೋಗಿಸಿದನು.

"ನಾನೊಬ್ಬ ವ್ಯಾಪಾರಿಯು!"

"ಇರಬಹುದು; ಆದರೆ ತಮ್ಮಲ್ಲಿ ವ್ಯಾಪಾರಿಗಿರಬೇಕಾದ ಕೌಶಲಗಳಿಗೆ ಬದಲಾಗಿ, ರಾಜತಂತ್ರಜ್ಞನಲ್ಲಿ ಹೊಳೆಯುತ್ತಿರುವ ಚಾತುರ್ಯವು ಕಂಗೊಳಿ ಸುತ್ತಿರುವುದು."

ನಾಗರಾಜನಿಗೆ ತರುಣನ ಈ ನುಡಿಗಳು ಅದ್ಭುತವಾಗಿ ತೋರಿದುವು. ತಾನು ವೇಷಚ್ಛನ್ನನಾಗಿರುವಾಗ ಈ ತರುಣನು ತಾನು ರಾಜತಂತ್ರಜ್ಞ ನೆಂಬುದನ್ನು ಹೇಗೆ ಅರಿತುಕೊಂಡನು? ಅವನು ಅಮಾತ್ಯನ ಚಾರನಿರ ಬಹುದೇ? ಎಂಬಿತ್ಯಾದಿ ಹಲವು ಸಂಶಯಗಳು ಏಕಕಾಲದಲ್ಲಿ ನಾಗರಾಜನ ಮೆದುಳನ್ನು ಪೀಡಿಸಿದುವು.

"ತಾವು ಎಲ್ಲಿಂದ ಬಂದಿರಿ?"

"ವಂಗದೇಶದಿಂದ."

"ಅಲ್ಲ, ಸಮರಾಂಗಣದಿಂದ ಇರಬಹುದು!"

ಈ ನುಡಿಗಳನ್ನು ಆ ತರುಣನು ಹೇಳುವಾಗಲಂತೂ ನಾಗರಾಜನ ಆಶ್ಚರ್ಯಕ್ಕೆ ಮೇರೆಯೇ ಇಲ್ಲದಾಯಿತು. ತಾನು ಸಮರಾಂಗಣದಿಂದ ಬಂದಿರುವೆನೆಂಬುದನ್ನೂ ತಾನಾರೆಂಬುದನ್ನೂ ಈ ತರುಣನು ಅರಿತಿರುವನೆ? ಎಂಬ ಸಂದೇಹವು ನಾಗರಾಜನಲ್ಲಿ ಹೆಚ್ಚಿತು. ಭಯವು ನಾಗರಾಜನ ಕಣ್ಣು

ಗಳಲ್ಲಿ ಹೊಳೆದಿತು. ನಾಗರಾಜನ ಭಯವನ್ನೂ ಪರಿಭ್ರಮವನ್ನೂ ನೋಡಿ ಆ ತರುಣನು ಗಹಗಹನೆ ನಗುತ್ತ ಹೀಗೆ ಹೇಳಿದನು:—"ತಾವು ಭಯಪಡ ಬೇಡಿ. ತಮ್ಮನ್ನು ಕುರಿತು ಇನ್ನೂ ಹೆಚ್ಚಿನ ಮಾಹಿತಿಯನ್ನು ಕೊಡಬಲ್ಲೆನು. ತಾವು ಈ ದಿನ ನಗರಪ್ರವೇಶವನ್ನು ಮಾಡುವಾಗ ತಮ್ಮಲ್ಲಿ ಸಮ್ಮತ ಪತ್ರ ವಿಲ್ಲದ್ದರಿಂದ, ದಂಡನಾಯಕನು ತಮ್ಮನ್ನು ತಡೆಯಲಿಲ್ಲವೆ? ಕರವಸೂಲಿಗೆ ತೆರ ಳಿದ ಮದನಕುಮಾರನ ಕರಣಿಕನೆಂದು ಹೇಳಿ ದಂಡನಾಯಕನನ್ನು ವಂಚಿಸಿ ಯಲ್ಲವೆ ತಾವು ಒಳಗೆ ಪ್ರವೇಶಿಸಿದುದು! ತಾವಿನ್ನು ಸಮ್ಮತಪತ್ರಕ್ಕಾಗಿ ಭಯ ಪಡಬೇಕಾಗಿಲ್ಲ, ತೆಗೆದುಕೊಳ್ಳಿ!" ಎಂದೆನ್ನುತ್ತ ಆ ತರುಣನು ಹತ್ತೆಂಟು ಸಮ್ಮತ ಪತ್ರಗಳನ್ನು ತನ್ನ ಉತ್ತರೀಯದಿಂದ ತೆಗೆದು ನಾಗರಾಜನಿಗೆ ಕೊಟ್ಟನು.

"ತಾವು ಯಾರು?" ಎಂದು ಆ ತರುಣನನ್ನೇ ನೋಡುತ್ತ ಪುನಃ ನಾಗರಾಜನು ಪ್ರಶ್ನಿಸಿದನು.

"ನಾನು ಯಾರೆಂಬುದು ತಮಗೆ ಈಗ ತಿಳಿದು ಹೆಚ್ಚಿನ ಪ್ರಯೋಜನ ವಾಗಲಾರದು. 'ವಿಶ್ವಜಿತ್ತು' ಎಂಬ ಹೆಸರನ್ನು ತಾವು ಒಂದು ವೇಳೆ ಕೇಳಿರ ಲಿಕ್ಕೆ ಸಾಕು. ನಾನು ತಮ್ಮ ಮಿತ್ರನೆಂಬುದನ್ನು ಸದ್ಯಕ್ಕೆ ತಿಳಿದುಕೊಳ್ಳಿರಿ. ಸತ್ಯ ಮತ್ತು ನ್ಯಾಯ ಇವುಗಳನ್ನು ಸಾಧಿಸಲು ಪ್ರಯತ್ನಿಸತಕ್ಕವನು ನಾನಾ ಗಿರುವೆನು."

"ತಾವು ಸತ್ಯ ಮತ್ತು ನ್ಯಾಯ ಇವುಗಳಿಗೆ ಬೇಕಾಗಿ ಹೆಣಗುವವರಾ ದರೆ, ಇಂದಿನ ಕುಂತಳ ರಾಜ್ಯದ ಪರಿಸ್ಥಿತಿಯನ್ನು ತಿಳಿಸಬಹುದಲ್ಲವೆ?"

"ತಾವು ರಾಜಕಾರಣದಲ್ಲಿ ಹೆಚ್ಚಿನ ಆಸಕ್ತಿಯುಳ್ಳವರಾಗಿರುತ್ತೀರಿ! ಕುಂತಳ ಸಿಂಹಾಸನವು ಈಗ ಒಂದು ಕಾರಸ್ಥಾನದ ಫಲವಾಗಿ ನಡುಗುತ್ತಲಿದೆ! ರಾಜಭಕ್ತರು ಈಗ ಹೆಚ್ಚಿನ ಪ್ರಯತ್ನವನ್ನು ಮಾಡದಿದ್ದರೆ, ಕುಂತಳದ ಪುರಾ ತನ ರಾಜವಂಶವು ಸಮಾಪ್ತಿಯಾಗುವದು."

"ಯಾರು ಈ ಕಾರಸ್ಥಾನದ ಕರ್ತೃಗಳು?"

"ಅದನ್ನು ನಾನು ಬಲ್ಲವನಲ್ಲ; ಇದುವರೆಗೆ ಅತ್ಯಂತ ವಿಶ್ವಸ್ತನಾಗಿದ್ದ ಒಬ್ಬ ರಾಜತಂತ್ರಜ್ಞನು ಸಿಂಹಾಸನಕ್ಕೆ ಎರಡನ್ನು ಬಗೆದನು!"

"ಅಮಾತ್ಯನಂದಿನಿಯು ಗೃಹವನ್ನು ಪರಿತ್ಯಜಿಸಿದಳಂತೆ. ಅವಳು ಈಗ ಎಲ್ಲಿರುವಳು ಎಂಬುದನ್ನು ಬಲ್ಲಿರಾ?"

ನಾಗರಾಜನ ಈ ಮಾತುಗಳಿಂದ ಆ ತರುಣನ ಮುಖವು ಸ್ವಲ್ಪ ವಿವರ್ಣ ವಾಯಿತು. ಆ ಕಣ್ಣುಗಳು ಅವನು ಮಹತ್ತಾದ ಯಾವುದೋ ಒಂದು

ಆಲೋಚನೆಯಲ್ಲಿ ಮುಳುಗಿರುವನೆಂಬುದನ್ನು ಸೂಚಿಸುತ್ತಲಿದ್ದವು. ಸ್ವಲ್ಪ ಸಮಯದವರಗೆ ಮೌನವನ್ನವಲಂಬಿಸಿದ ನಂತರ ವಿಶ್ವಜಿತ್ತು ಇಂತೆಂದನು: “ಅವಳು ಗೃಹವನ್ನು ಪರಿತ್ಯಜಿಸಿದ ನಂತರ ಎಲ್ಲಿರುವಳೆಂಬುದನ್ನು ನಾನು ತಿಳಿಯದಿದ್ದರೂ ಅವಳು ಸುರಕ್ಷಿತವಾಗಿಯೇ ಇರುವಳೆಂದು ನಾನು ಹೇಳಬಲ್ಲೆನು. ತನ್ನ ಪ್ರಣಯದೇವನಾದ ಕುಳಿಂದರಾಜಪುತ್ರನಿಗೆ ಅವಳು ಸಹಾಯವನ್ನು ಯಾಚಿಸಿ ಓಲೆಯನ್ನು ಕಳುಹಿಸಿದ್ದಳಂತೆ. ನಾನಾದರೂ ಇದುವರೆಗೆ ಆ ರಾಜಪುತ್ರನು ಉದಾರ ಹೃದಯನೆಂದು ನಂಬಿದ್ದೆನು; ಆದರೆ ತನ್ನ ತಂದೆಯ ವಿವಾಹನಿರ್ಧಾರದಿಂದ ವಿಷಯಾಕುಮಾರಿಯನ್ನು ರಕ್ಷಿಸಲು ಆತನು ಬರಲಿಲ್ಲ”

“ರಾಜಪುತ್ರನು ಉದಾರ ಹೃದಯನೇ ಅಹುದು; ಅಮಾತ್ಯನಂದಿನಿಯಲ್ಲಿ ಚಂದ್ರಹಾಸನು ಅನುರಕ್ತನಾಗದಿದ್ದರೂ ಅವನು ಅವಳನ್ನು ಆ ವಿವಾಹ ಬಂಧದಿಂದ ರಕ್ಷಿಸಲು ತನ್ನ ಗೆಳೆಯನನ್ನು ಕಳುಹಿಸಿದನು; ಆದರೆ ಸಹಾಯವು ತಲುಪುವಾಗ ಕಾಲವಿಳಂಬವಾಯಿತು.”

“ಯಾರನ್ನು ಕಳುಹಿದನು?” ಎಂದು ಆ ತರುಣನು ಪರಿಭ್ರಮಯುಕ್ತ ಸ್ವರದಲ್ಲಿ ಪ್ರಶ್ನಿಸಿದನು.

“ಅವನ ಗೆಳೆಯ ನಾಗರಾಜನನ್ನು!”

“ಹೌದು; ನಾನು ಆ ರೀತಿ ವಿಚಾರಿಸಿದ್ದೆನು; ಕುಂತಳದ ಕುಲಚಿತ್ರಭಾನುವಿನ ಕೀರ್ತಿಯನ್ನು ನಾನು ಕೇಳಿದ್ದೆನು. ಅವನು ತನ್ನ ಹೃದಯೇಶ್ವರಿಯನ್ನಾಗಿ ಸ್ವೀಕರಿಸಲು ಅಮಾತ್ಯನಂದಿನಿಯು ಯೋಗ್ಯಳಿರುವಳು. ಅವನ ಶತ್ರುಗಳ ಕರಗಳಿಂದ ಅವನನ್ನು ರಕ್ಷಿಸಲು ಅವಳು ಬದ್ಧಕಂಕಣವನ್ನು ಧರಿಸಿರುವಳು. ಅವಳ ಪ್ರಯತ್ನಗಳಿಂದ ಆ ರಾಜನಂದನನ ಜೀವ ಉಳಿಯುವದು. ಅವಳ ಪ್ರಣಯಕ್ಕೆ ಜಗದೀಶ್ವರನು ವಿಜಯವನ್ನು ನೀಡಲಿ!”

ಅಮಾತ್ಯನಂದಿನಿಯಲ್ಲಿ ಇಷ್ಟು ಕರುಣೆಯನ್ನು ವಿಶ್ವಜಿತ್ತುವು ಪ್ರದರ್ಶಿಸುತ್ತಿರುವುದನ್ನು ಕಂಡು ನಾಗರಾಜನಲ್ಲಿ ಈತನು ಅಮಾತ್ಯನಂದಿನಿಯು ಹಸ್ತಕನಿರಬಹುದೇ? ಎಂಬ ಸಂಶಯವು ಜನಿಸಿತು. ಆಗ ಅವನು ಕೇಳಿದನು: ‘ತಾವು ಅಮಾತ್ಯನಂದಿನಿಯ ಪರಿಚಿತಸ್ಥರಂತೆ ತೋರುವುದು; ಆದುದರಿಂದ ಇಷ್ಟು ಸಹತಾಪವನ್ನು ಅವಳಲ್ಲಿ ತೋರಿಸುತ್ತಿರುವಿರಿ!’

“ಛೇ! ಅಮಾತ್ಯನಂದಿನಿಯ ಪರಿಚಯವು ನನಗೇನೂ ಇಲ್ಲ; ಉನ್ನತ ಆದರ್ಶಕ್ಕಾಗಿ ಪ್ರಯತ್ನಿಸುವವರನ್ನು ಕಂಡರೆ ನನಗೆ ಸಂತಸವು. ಅದರಲ್ಲಿಯೂ ಹೆಂಗಸರಲ್ಲಿ!”

ಹೀಗೆ ಮಾತಾಡುವಷ್ಟರಲ್ಲಿ ಭೋಜನಕ್ಕಾಯಿತೆಂದು ಅನ್ನವಿಕ್ರಯಿನಿ

ಯು ನುಡಿದುದರಿಂದ ವಿಶ್ವಜಿತ್ತುವು ತನ್ನ ಸಂಭಾಷಣೆಯನ್ನು ನಿಲ್ಲಿಸಿ ಒಳಗೆ ಹೊರಟು ಹೋದನು.

ನಾಗರಾಜನು ಏಕಾಂಗಿಯಾಗಿ ಕುಳಿತು ಆಲೋಚಿಸಲು ಪ್ರಾರಂಭಿಸಿದನು. ತಾನೇನು ಮಾಡಬೇಕೆಂಬುದು ಆವನಿಗೆ ತಿಳಿಯಲಿಲ್ಲ. ಅಮಾತ್ಯ ನಂದಿನಿಯನ್ನು ರಕ್ಷಿಸುವದಕ್ಕಾಗಿ ಅವನು ರಣಾಂಗಣವನ್ನು ತ್ಯಜಿಸಿ ರಾಜಧಾನಿಗೆ ಬಂದಿದ್ದನು; ಆದರೆ ಅವನ ಸಹಾಯವಿಲ್ಲದೆ ಅವಳು ಸಂಕಟದಿಂದ ಪಾರಾಗಿದ್ದಳು. ತಾನು ಮುಂದೇನು ಮಾಡಬೇಕೆಂದು ಅವನು ಚಿಂತಿಸ ತೊಡಗಿದನು ವಿಶ್ವಜಿತ್ತು ತನ್ನ ಪ್ರತಿಯೊಂದು ಸಂಗತಿಯನ್ನು ಅರಿತುದಂತೂ ಅವನನ್ನು ವಿಸ್ಮಯಗೊಳಿಸಿತು. ನಾಗರಾಜನು ತಾನೇ ಇದುವರೆಗೆ ಅತ್ಯಂತ ತೀಕ್ಷ್ಣಬುದ್ಧಿಯವನೆಂದು ಬಗೆದಿದ್ದನು; ಆದರೆ ಈ ಅಪರಿಚಿತ ತರುಣನಾದರೋ ತನಗಿಂತ ನೂರು ಪಾಲು ಮೇಧಾವಿಯಾಗಿರುವನೆಂಬುದು ತೋರಿದುದರಿಂದ, ಅವನ ವಿಸ್ಮಯಕ್ಕೆ ಪಾರವೇ ಇರಲಿಲ್ಲ. ಆವನು ವಿಷಯಾ ಕುಮಾರಿಯ ಹೆಚ್ಚಿನ ಮಾಹಿತಿಗಳನ್ನು ತಿಳಿದುಕೊಳ್ಳಲು ಭುವನವಿಕ್ರಮನ ಪತ್ನಿಯಾದ ಮಾಲಿನಿಯ ಗೃಹಕ್ಕೆ ತೆರಳುವುದುಚಿತವೆಂದು ನಿರ್ಧರಿಸಿದನು.

ವಿಶ್ವಜಿತ್ತು ತನ್ನ ಭೋಜನವನ್ನು ತೀರಿಸಿಕೊಂಡು ಬಂದು ನಗುತ್ತ: ‘‘ವ್ಯಾಪಾರಿಗಳೇ, ನಾನೀಗ ತೆರಳುತ್ತೇನೆ; ತಾವು ಇಲ್ಲಿಯೇ ಇರುವುದಾದರೆ ನನ್ನನ್ನು ಹಲವು ಸಾರೆ ಈ ಮಂದಿರದಲ್ಲಿಯೇ ಕಾಣಬಹುದು. ವಂದನೆಗಳು!’’ ಎಂದು ನುಡಿದನು.

‘‘ವಂದನೆಗಳು!’’ ವಿಶ್ವಜಿತ್ತುವು ತೆರಳಿದನು. ಅವನು ಹೋದ ನಂತರ ತನ್ನ ವಸ್ತ್ರಾಡಂಬರಗಳನ್ನು ಬದಲಾಯಿಸಿ ನಾಗರಾಜನು ಓರ್ವ ರತ್ನ ವ್ಯಾಪಾರಿಯ ವೇಷವನ್ನು ಧರಿಸಿದನು. ತನ್ನ ಪೆಟ್ಟಿಗೆಯಿಂದ ಹಲವು ಜಾತಿಗಳ ಮುತ್ತು-ರತ್ನಗಳನ್ನು ತೆಗೆದುಕೊಂಡನು. ಅವನಿಗೆ ಬಾಲ್ಯದಿಂದಲೇ ಹಲವು ಜಾತಿಯ ರತ್ನಗಳನ್ನು ಸಂಗ್ರಹಿಸುವ ಚಟವು ಇದ್ದುದರಿಂದ, ಅವನ ಪೆಟ್ಟಿಗೆಯಲ್ಲಿ ಹಲವು ಸಹಸ್ರ ಹೊನ್ನುಗಳ ಬೆಲೆ ಬಾಳುವ ರತ್ನಗಳಿದ್ದುವು.

ಮಾಲಿನಿಯ ನಿಕೇತನವನ್ನರಿಯಲು ಪ್ರಯಾಸವೇನೂ ಆಗಿರಲಿಲ್ಲ; ಹತ್ತಿರದಲ್ಲಿಯೇ ನಿಂತಿದ್ದ ಅಮಾತ್ಯನ ಚಾರನು ರತ್ನ ವ್ಯಾಪಾರಿಯ ವೇಷದಲ್ಲಿರುವ ನಾಗರಾಜನನ್ನು ಯಾರೆಂದು ಪ್ರಶ್ನಿಸದೆಯೂ ಇರಲಿಲ್ಲ. ಆಗ ತಾನೊಬ್ಬ ರತ್ನ ವ್ಯಾಪಾರಿಯೆಂದೂ ಭುವನವಿಕ್ರಮನ ಮಡದಿಗೆ ಹಲವು ತರಗತಿಗಳ ಮುತ್ತು-ರತ್ನಗಳನ್ನು ತೋರಿಸಿ ಮಾರುವದಕ್ಕಾಗಿ ತಾನು ಬಂದುದಾಗಿಯೆಂದೂ ನಾಗರಾಜನು ವಿವರಿಸಲು, ಆ ಚಾರನ ಸಂದೇಹಗಳು ಮಾಯ

ವಾದುವು. ನಾಗರಾಜನು ಮನೆಯೊಳಗೆ ಪ್ರವೇಶಿಸಿದನು. ಅಪರಿಚಿತನಾದ ಒಬ್ಬ ಪುರುಷನು ಮನೆಯೊಳಗೆ ಪ್ರವೇಶಿಸಿದುದನ್ನು ಕಂಡು ಓರ್ವ ದಾಸಿಯು "ನೀವು ಯಾರು?" ಎಂದು ಪ್ರಶ್ನಿಸಿದಳು.

"ನಾನೊಬ್ಬ ರತ್ನವ್ಯಾಪಾರಿಯು!"

ಆ ದಾಸಿಯು ಈ ಸಂಗತಿಯನ್ನು ತನ್ನ ಒಡತಿಗೆ ಅರುಹಿದಳು; ಮಾಲಿನಿಯು ತನಗೆ ರತ್ನಗಳ ಆವಶ್ಯವಿಲ್ಲವೆಂದು ಹೇಳಿ ವ್ಯಾಪಾರಿಯನ್ನು ಹಿಂದಕ್ಕೆ ಕಳುಹಿಸತಕ್ಕವಳು; ಆದರೆ ಅವಳಿಗೆ ಏನು ಹೊಳೆಯಿತೋ ಎಂಬುದನ್ನು ಬಲ್ಲವರಾರು? "ನನಗೆ ರತ್ನವನ್ನು ತೆಗೆದುಕೊಳ್ಳಬೇಕೆಂದಿಲ್ಲ; ಆದರೂ ರತ್ನಗಳನ್ನು ನೋಡಬಹುದಲ್ಲ! ಅವನನ್ನು ಉಪ್ಪರಿಗೆಗೆ ಕರೆದುಕೊಂಡು ಬಾ!" ಎಂದು ಆಜ್ಞಾಪಿಸಿದಳು. ಒಡತಿಯ ಅಪ್ಪಣೆಯಂತೆ ದಾಸಿಯು ನಾಗರಾಜನನ್ನು ಉಪ್ಪರಿಗೆಗೆ ಕರೆದುಕೊಂಡು ಹೋದಳು.

ನಾಗರಾಜನು ಮಾಲಿನಿಯನ್ನೊಮ್ಮೆ ನೋಡಿದನು. ಆ ಕಣ್ಣುಗಳಿಂದ, ಆ ವಿಶಾಲವಾದ ಹಣೆಯಿಂದ ಅವಳು ಭುವನವಿಕ್ರಮನು ವರ್ಣಿಸುತ್ತಿದ್ದಂತೆ ಸಗುಣಪರಿಪೂರ್ಣಳೆಂಬುದನ್ನು ತಿಳಿದುಕೊಂಡನು. ಅವನು ತನ್ನ ಚೀಲವನ್ನು ಬಿಚ್ಚಿ ವಿವಿಧಾಕಾರಗಳ ಮುತ್ತು-ರತ್ನಗಳನ್ನು ತೋರಿಸತೊಡಗಿದನು. ಕೌತುಕ ದೃಷ್ಟಿಯಲ್ಲಿ ಒಂದೊಂದು ರತ್ನವನ್ನು ತೆಗೆದುಕೊಂಡು ಮಾಲಿನಿಯು ನೋಡಹತ್ತಿದಳು. ಹೀಗಿರಲು ನೆಲದಲ್ಲಿ ಚೆಲ್ಲಿರುವ ರತ್ನಗಳ ಮಧ್ಯದಲ್ಲಿ ಒಂದು ಓಲೆಯಿರುವುದು ಮಾಲಿನಿಗೆ ಗೋಚರವಾಯಿತು. ಅವಳು ಅದನ್ನು ನಾಗರಾಜನು ತಿಳಿಯದ ಹಾಗೆ ತೆಗೆದುಕೊಂಡಳು; ಅಥವಾ ಆ ಓಲೆಯನ್ನು ಅವಳು ತೆಗೆದು ನೋಡಬೇಕೆಂಬ ಉದ್ದೇಶದಿಂದಲೇ ಅವನು ಆ ರತ್ನಗಳ ಮಧ್ಯದಲ್ಲಿಟ್ಟು ಅವಳು ಅದನ್ನು ತೆಗೆದುಕೊಳ್ಳುವುದನ್ನು ನೋಡದವನ ಹಾಗೆ ನಟಿಸಿದನೋ ಎಂಬುದನ್ನು ಹೇಳಬರುವಂತಿಲ್ಲ. ಅವಳು ಆ ಓಲೆಯನ್ನು ತೆಗೆದು ಓದಿ ನೋಡಿದಳು.

ಅದು ಅವಳ ಗೆಳತಿ ಅಮಾತ್ಯನಂದಿನಿಗಿರುವ ಓಲೆಯಾಗಿದ್ದಿತು; ಅದನ್ನು ಬರೆದವನು ಚಂದ್ರಹಾಸನಾಗಿದ್ದನು! ವಿಸ್ಮಯಭರಿತಳಾಗಿ ಅವಳು ನುಡಿದಳು: "ನೀನು ಯಾರು?" ಎಂದಳು.

"ಕಾಣವುದಿಲ್ಲವೆ, ನಾನೊಬ್ಬ ರತ್ನವ್ಯಾಪಾರಿಯೆಂಬುದು!"

"ಅಲ್ಲವೆಂದು ಈ ಪತ್ರವು ಸೂಚಿಸುತ್ತದೆ!"

"ಯಾವ ಪತ್ರ?"

"ನೋಡಿರಿ ಇದು! ಇದು ಅಮಾತ್ಯನಂದಿನಿಗಿರುವ ಓಲೆಯಾಗಿದೆ!

ಕುಳಿಂದ ರಾಜಪುತ್ರನು ಬರೆದದ್ದು! ನೀವು ಒಬ್ಬ ಪತ್ರವಾಹಕರಾಗಿ ಬಂದಿದ್ದೀರಿ!"

"ಹೌದು! ನಾನೊಬ್ಬ ಪತ್ರವಾಹಕನು!" ಎಂದು ಧೈರ್ಯವನ್ನು ತಾಳುವವನಂತೆ ನಟಿಸುತ್ತ, ನಾಗರಾಜನು ಅಂದನು: "ತಾವು ಅಮಾತ್ಯ ನಂದಿನಿಯ ಗೆಳತಿಯಿರುವದರಿಂದ ತಮ್ಮಲ್ಲಿಗೇ ಬಂದೆನು. ಅವಳ ಮಾಹಿತಿಗಳನ್ನು ತಿಳಿಸುವಿರಾ?"

"ತಮ್ಮ ಹೆಸರೇನು?" "ನಾಗರಾಜ!"

"ಅಸಾಮಾನ್ಯ ಬುದ್ಧಿಶಕ್ತಿಯ ನಾಗರಾಜನನ್ನು ನಿನ್ನ ರಕ್ಷಣೆಗಾಗಿ ಕಳುಹಿಸಿರುವೆನೆಂದು ಪತ್ರದಲ್ಲಿ ಉಲ್ಲೇಖಿತವಾದ ನಾಗರಾಜರು ತಾವೇ ಇರುವಿರೇನು?"

"ಆಹುದು."

"ಆದರೆ ತಮ್ಮ ಸಹಾಯವು ಬಂದುದು ಕಾಲವಿಳಂಬವಾಯಿತು."

"ಅದನ್ನು ನಾನು ಅರಿತೆನು." ಎನ್ನುತ್ತ ನಾಗರಾಜನು ಬೇರೊಂದು ಓಲೆಯನ್ನು ಮಾಲಿನಿಗೆ ಕೊಟ್ಟನು. "ಇದನ್ನು ತಮ್ಮ ಅಣ್ಣರು ಕೊಟ್ಟಿದ್ದಾರೆ!"

ಮಾಲಿನಿಯು ತನ್ನ ಪತಿದೇವನು ಕಳುಹಿಸಿದ ಓಲೆಯನ್ನು ತೆಗೆದು ಓದಿ ನೋಡಿದಳು. ಅದು ಪ್ರಧಾನವಾದುದೇನೂ ಅಲ್ಲ. ತನ್ನ ಪ್ರೇಮವನ್ನೂ ಕ್ಷೇಮವಾರ್ತೆಯನ್ನೂ ಅರುಹಿ, ನಾಗರಾಜನಿಗೆ ಬೇಕಾದ ಸಹಾಯ-ಸಲಕರಣೆಗಳನ್ನು ನೀಡಬೇಕೆಂದು ಭುವನವಿಕ್ರಮನು ಉಲ್ಲೇಖಿಸಿದ್ದನು. ಓಲೆಯನ್ನು ಓದಿದ ಮೇಲೆ ಸ್ವಲ್ಪ ಹರ್ಷದಿಂದ ಮಾಲಿನಿಯು: "ರಾಜಧಾನಿಯಲ್ಲುಂಟಾದ ಗಂಡಾಂತರವು ರಣರಂಗಕ್ಕೆ ತಲುಪಿರಲಿಕ್ಕಿಲ್ಲಲ್ಲವೆ?"

"ಇಲ್ಲ, ನಾನು ಅದನ್ನು ಇಲ್ಲಿಗೆ ತಲುಪಿದ ಮೇಲೆ ತಿಳಿದೆನು." ಎನ್ನುತ್ತ ತಾನು ಸಮ್ಮತಪತ್ರವಿಲ್ಲದೆ ದಂಡನಾಯಕನನ್ನು ವಂಚಿಸಿ ನಗರಪ್ರವೇಶ ಮಾಡಿದುದನ್ನು ತಿಳಿಸಿದನು. ಮಾಲಿನಿಯು ಈ ತಂತ್ರವನ್ನು ಕೇಳಿ ನಕ್ಕಳು.

"ನಗರದಲ್ಲೆಲ್ಲ ಈ ಗಂಡಾಂತರಕ್ಕೆ ಕಾರಣವು ಶತ್ರುಗಳ ತಂತ್ರಜಾಲವೆಂಬು ಹಬ್ಬಿದೆ; ಆದರೆ ನನಗೆ ಹಾಗೆ ತೋರುವುದಿಲ್ಲ. ಅಧಿಕಾರ ಪ್ರಾಪ್ತಿಗಾಗಿ ಒಬ್ಬ ರಾಜತಂತ್ರಜ್ಞನು ಹೂಡಿದ ಕಾರಸ್ಥಾನವೆಂದು ನನ್ನ ಊಹೆಯು!"

"ಅದಕ್ಕೆ ಸಂಶಯವಿಲ್ಲ; ಅಮಾತ್ಯನ ತಂತ್ರಗಳಿವು ಎಂಬುದನ್ನು ನಾನು ಬಲ್ಲೆನು. ಇಲ್ಲದಿದ್ದರೆ, ಕೂದಲು ಹಣ್ಣು ಆಗುವವರೆಗೆ ರಾಜಸೇವೆಯನ್ನು ಮಾಡಿ, ಈ ಮುಪ್ಪಿನ ಮಯಸ್ಸಿನಲ್ಲಿ ರಣಾಂಗಣಕ್ಕೆ ತೆರಳಿದ ನನ್ನ ತಂದೆಯವರನ್ನೂ, ನನ್ನ ಭಾಗ್ಯ ಪ್ರದೀಪಕರನ್ನೂ ರಾಜದ್ರೋಹಿಗಳೆಂದು ಆರೋ

ಪಿಸಿ, ಅವರಿಬ್ಬರನ್ನೂ ವಧಿಸುವುದಕ್ಕಾಗಿ ಯತ್ನಿಸುತ್ತಿರುವದು ಅಮಾತ್ಯನ ಕೃಷ್ಣಹೃದಯದ ತಂತ್ರವಲ್ಲವೇ?" ಎಂದು ಮಾಲಿನಿಯು ಕಣ್ಣೀರಿನ ಮಳೆಯನ್ನು ಸುರಿಸಲಾರಂಭಿಸಿದಳು. ಅವಳು ಬುದ್ಧಿಶಾಲಿನಿಯಾದರೂ ಸರಳ ಹೃದಯಳು. ತನ್ನ ಸಂಕಟಗಳಲ್ಲಿ ಸಹತಾಪವನ್ನು ಪ್ರದರ್ಶಿಸತಕ್ಕವರಿದ್ದರೆ, ಅವರೊಡನೆ ಎದೆ ಬಿಚ್ಚಿ ಮಾತಾಡುವ ಸ್ವಭಾವವು ಅವಳದು ಇದರಂತೆಯೇ ತಾನು ತಿಳಿದ ಹಲವು ರಾಜಕಾರಣ ರಹಸ್ಯಗಳನ್ನು ನಾಗರಾಜನು ಆಪ್ತನೆಂದು ನಂಬಿ ಅವನಿಗೆ ಉಸುರಿದಳು

"ಅರಮನೆಯ ಸ್ಥಿತಿಯು ಹೇಗಿದೆ, ಎಂಬುದನ್ನು ಬಲ್ಲಿರಾ?" ಎಂದನು ಚಿಂತಾಯುಕ್ತನಾದ ನಾಗರಾಜನು. ಈ ಗಂಡಾಂತರವು ಅಮಾತ್ಯನ ಕುತಂತ್ರಗಳ ಫಲವಾಗಿದ್ದರೆ, ಪ್ರಾಸಾದದಲ್ಲಿಯೂ ಹಲವು ಅನರ್ಥಗಳಿಗೆ ಎಡೆಯಿದೆ, ಎಂದು ಅವನು ಊಹಿಸಿದನು. ರಾಜನಂದಿನಿಯ ಮೇಲೆ ಕೈಮಾಡಲಿಕ್ಕೆ ಅಮಾತ್ಯನಂದನನು ಹೇಸಲಿಕ್ಕಿಲ್ಲವೆಂಬ ಮನವರಿಕೆಯೂ ಅವನಿಗೆ ಇತ್ತು.

"ಇಲ್ಲ, ನಾನು ಅರಿತಿಲ್ಲ; ಮಹಾರಾಜರು ಅದೃಶ್ಯರಾದ ಮೇಲೆ ಅರಮನೆಯಲ್ಲಿ ಯಾರಿಗೂ ಪ್ರವೇಶವಿಲ್ಲ. ಅಲ್ಲಿನ ಸಂಗತಿಗಳು ಹೊರಬೀಳುವಂತಿಲ್ಲ."

"ಹಾಗಾದರೆ ಅರಮನೆಯೊಳಗಿನ ವರ್ತಮಾನಗಳನ್ನು ತಿಳಿಯುವದು ಅತ್ಯಾವಶ್ಯಕವಾಗಿದೆ. ರಾಜಕುಟುಂಬವನ್ನು ವಿಪತ್ತುಗಳಿಂದ ರಕ್ಷಿಸಬೇಕು"

"ಆದರೆ ಹೇಗೆ? ಒಂದು ಇರುವೆಯು ಸಹಾ ಅಮಾತ್ಯನ ಸಮ್ಮತವಿಲ್ಲದೆ ಒಳಗೆ ಪ್ರವೇಶಿಸಲಾರದು."

"ಅದನ್ನೇ ನಾನು ಆಲೋಚಿಸುತ್ತಿರುವೆನು"

ಕೆಲವು ನಿಮಿಷಗಳ ವರೆಗೆ ಇಬ್ಬರೂ ಮೌನವನ್ನು ಅವಲಂಬಿಸಿದರು. ಇಬ್ಬರ ಮನಸ್ಸುಗಳಲ್ಲಿಯೂ ಗಾಢವಾದ ವಿಚಾರಗಳು ತಾಂಡವವಾಡುತ್ತಿದ್ದುವು. ಅನಂತರ ನಾಗರಾಜನು ಯಾವುದೋ ಒಂದು ದಾರಿಯನ್ನು ಕಂಡುಹಿಡಿದವನಂತೆ ಹರ್ಷಭರಿತನಾದನು: "ಅಮ್ಮಾ! ನಾನೀಗ ಹೋಗುತ್ತೇನೆ; ನಾಳೆ ಸಂಧ್ಯೆಯಾಗುವದರೊಳಗಾಗಿ ರಾಜಗೃಹದ ಎಲ್ಲ ಸಂಗತಿಗಳನ್ನೂ ತಿಳಿದುಕೊಂಡು ಬರುವೆನು. ತಮಗೆ ನನ್ನ ಸಹಾಯವು ಅವಶ್ಯವಿದ್ದರೆ ಅನ್ನವಿಕ್ರಯಿನಿಯ ಸದನಕ್ಕೆ ದಾಸರನ್ನು ಕಳುಹಿಸಿದರೆ ಸಾಕು!"

"ತಾವು ಬಂದುದು ನನಗೆ ಧೈರ್ಯವನ್ನು ನೀಡುತ್ತಿದೆ ವಿಪತ್ತುಗಳು ಯಾವಾಗ ಸಂಪ್ರಾಪ್ತವಾಗುವವು, ಎಂಬುದನ್ನು ಹೇಳಲಿಕ್ಕೆ ಬರುವಂತಿಲ್ಲ"

"ಭಯಕ್ಕೆ ಅವಕಾಶವಿಲ್ಲ; ಧೈರ್ಯವನ್ನು ಅವಲಂಬಿಸಿರಿ!" ಎಂದು

ನುಡಿದು ನಾಗರಾಜನು ಹೊರಟು ಹೋದನು.

ನಾಗರಾಜನು ತೆರಳಿ ಬಹಳ ವೇಳೆಯಾದ ನಂತರ ಅನ್ನವಿಕ್ರಯಿನಿಯ ವಸತಿಯಲ್ಲಿ ನಾಗರಾಜನಿಗೆ ದರ್ಶನವನ್ನು ಕೊಟ್ಟ ವಿಶ್ವಜಿತ್ತುವು ಮಾಲಿನಿಯ ಗೃಹಕ್ಕೆ ಬಂದನು. ಅವನು ಮಾಲಿನಿಯ ಪ್ರಫುಲ್ಲಿತ ವದನಮಂಡಲವನ್ನು ಕಂಡು:-"ಅಕ್ಕಾ! ಏನು, ಸ್ವಲ್ಪ ಹರ್ಷಯುಕ್ತಳಾಗಿರುವೆ?" ಎಂದನು.

"ಏನೂ ಇಲ್ಲ; ನಮಗೆ ಸಹಾಯವನ್ನು ನೀಡಲು ಹೊಸನೊಬ್ಬನು ಬಂದಿರುವನು" ಎಂದಳು ಮಾಲಿನಿ.

"ಯಾರು, ನಾಗರಾಜನಲ್ಲವೆ?"

"ಹೌದು. ಅದನ್ನು ನೀನು ಹೇಗೆ ಅರಿತೆ?"

"ಅವನನ್ನು ಅನ್ನವಿಕ್ರಯಿನಿಯ ವಸತಿಯಲ್ಲಿ ಕಂಡೆನು; ಅವನು ಇಲ್ಲಿಗೆ ಬರುವನೆಂದು ನಾನು ಗ್ರಹಿಸಿದ್ದೆನು. ಈಗ ಅವನೆತ್ತ ಹೋದನು?"

"ಅರಮನೆಗೆ."

"ಅರಮನೆಗೇನು? ಹಾಗಾದರೆ ತುರಂಗಕ್ಕೆ ತೆರಳಿದಂತೆಯೇ ಸರಿ!"

"ಏಕೆ, ಆ ರೀತಿ ಅನ್ನುತ್ತಿರುವೆ?"

"ಅಲ್ಲಿ ದಂಡಾಳುಗಳು ಎಷ್ಟು ಜಾಗ್ರತೆಯಿಂದ ನಿಂತಿರುವರೆಂಬುದನ್ನು ಬಲ್ಲೆಯಾ? ಅವನ ಸುಳಿವು ಅವರಿಗೆ ಸಿಕ್ಕಿದರೆ ಅವನ ಗತಿಯು ನೆಟ್ಟಗಾಗಲಿಕ್ಕಿಲ್ಲ!"

"ಆದರೆ ಅವನು ಬುದ್ಧಿಶಾಲಿಯು! ಕಾರ್ಯವನ್ನು ಸಾಧಿಸುವ ಎದೆಗಾರಿಕೆಯು ಅವನಿಗಿದೆ."

"ಅವನ ಚಾತುರ್ಯವೇ ಅವನನ್ನು ಮೋಸಗೊಳಿಸಬಹುದು."

"ನಿನಗಿಂತ ತೀಕ್ಷ್ಣಬುದ್ಧಿಯುವನು ಅವನೆಂಬುದು ನಿನ್ನ ಈ ಅಸೂಯೆಗೆ ಕಾರಣವಾಗಿರಬಹುದು!"

"ಅದೇನೂ ಅಲ್ಲ; ಅವನಿಗೆ ಈ ಪ್ರದೇಶಗಳ ಪರಿಚಯವಿಲ್ಲ. ನಗರದ ಎಲ್ಲ ಮೂಲೆಗಳನ್ನು ಅರಿತಿರುವ ನನಗೇ ಅರಮನೆಯೊಳಗೆ ಪ್ರವೇಶಿಸಲು ಸಾಧ್ಯವಿಲ್ಲದಿರುವಾಗ, ಅವನು ಹೇಗೆ ಯಶಸ್ವಿಯಾಗುವನು?"

"ಹೂಂ—ಏನೇ ಇರಲಿ! ಸತ್ಯವೇ ಅಂತ್ಯದಲ್ಲಿ ಜಯವನ್ನು ಹೊಂದುವುದು!"

"ಹಾಗೆ ನೆನೆಯೋಣ; ನಾನೀಗ ಅಂಬಿಕಾಗ್ರಾಮಕ್ಕೆ ತೆರಳುವೆನು. ಅಲ್ಲಿರುವ ಅರಸರ ಅವಸ್ಥೆಯು ಹೇಗಿದೆ, ಎಂಬುದನ್ನು ತಿಳಿಯಬೇಕು. ನೀನು ಜಾಗ್ರತೆಯಿಂದ ವರ್ತಿಸಬೇಕು; ಚಾರರ ಹಾವಳಿಯು ಬಹಳವಾಗಿದೆ"

"ಹೊಂ, ನೀನಾದರೂ ಎಚ್ಚರಿಕೆಯಿಂದಿರಬೇಕು!"

ವಿಶ್ವಜಿತ್ತುವು ಹೊರಟು ಹೋದನು; ಮಾಲಿನಿಯು ತನ್ನಷ್ಟಕ್ಕೆ ಆಲೋಚನಾಮಗ್ನಳಾಗಿ ಕುಳಿತಳು. ಸಂದರ್ಭವು ದೊರಕಿದರೆ ತನ್ನನ್ನು ಸೆರೆಮನೆಯಲ್ಲಿಡಲು ದುಷ್ಟಬುದ್ಧಿಯು ಹಿಂಜರಿಯನು, ಎಂಬ ಸಂಗತಿಯು ಅವಳಿಗೆ ವಿದಿತವಾಗಿದ್ದಿತು. ತನ್ನ ಪ್ರಾಣನಾಯಕನು ಸಮರಾಂಗಣದಲ್ಲಿ ಇರುವನು. ವಿಜಯಿಯಾಗಿ ಹಿಂದಿರುಗಿ ಬಂದರೆ, ಅವನ ಮೇಲೆ ರಾಜ ದ್ರೋಹದ ಅಪಾದನೆಯನ್ನು ಹೊರಿಸಿ ವಧಿಸಲು ದುಷ್ಟಬುದ್ಧಿಯು ಸಿದ್ಧ ನಾಗಿರುವನು ಏನು ಮಾಡಬೇಕು? ಈ ರೀತಿಯ ಬಿಕ್ಕಟ್ಟುಗಳಿಂದ ಪಾರಾ ಗುವದು ಹೇಗೆ? ಎಂದು ಅವಳು ಆಲೋಚಿಸಿದಳು.

ನಾಗರಾಜನನ್ನು ಬರಹೇಳುವುದಕ್ಕಾಗಿ ಅವಳು ಒಂದೆರಡು ಬಾರಿ ಭೃತ್ಯ ನನ್ನು ಅನ್ನವಿಕ್ರಯಿನಿಯ ವಸತಿಗೆ ಕಳುಹಿಸಿದಳು; ಆದರೆ ಅವನು ಅಲ್ಲಿಲ್ಲ ವೆಂದೂ ಎತ್ತ ತೆರಳಿರುವನೆಂಬುದು ಯಾರಿಗೂ ತಿಳಿದಿಲ್ಲವೆಂದೂ ಆಗಿದ್ದಿತು ಭೃತ್ಯನ ಮೂಲಕ ಅವಳು ಅರಿತ ವಾರ್ತೆಯು! ಬಹಳ ಮಾಡಿ ಅರಮನೆ ಯನ್ನು ಪ್ರವೇಶಿಸುವ ಕೃತ್ಯದಲ್ಲಿ ನಾಗರಾಜನು ಸೆರೆಗೆ ಗುರಿಯಾದನೇ? ಎಂಬ ಸಂಶಯವು ಮಾಲಿನಿಯನ್ನು ಬಾಧಿಸಿತು.

ಮರುದಿನ ಸಂಜೆಯ ಸಮಯದಲ್ಲಿ ಮಾಲಿನಿಯು ತನ್ನ ಮಹಡಿಯ ಮೇಲೆ ಕುಳಿತಿರುವಾಗ ಒಬ್ಬ ದಾಸಿಯು ಬಂದು ಹೇಳಿದಳು:—"ಭೂತ-ಭವಿಷ್ಯ-ವರ್ತಮಾನ ಸಂಗತಿಗಳನ್ನು ನುಡಿಯ ಬಲ್ಲ ಒಬ್ಬಳು ಹೆಂಗಸು ಬಾಗಿಲ ಬಳಿಯಲ್ಲಿ ನಿಂತಿರುವಳು" ಎಂಬುದಾಗಿ.

"ಅವಳನ್ನು ಕರೆದುಕೊಂಡು ಬಾ."

೨೦-೨೨ ವರ್ಷ ಪ್ರಾಯದ ಹೆಂಗಸಿನೊಡನೆ ದಾಸಿಯು ಬಂದಳು. ಸಾಧಾರಣ ಹೆಂಗಸರಲ್ಲಿ ಕಾಣುತ್ತಿರುವ ಭವಿಷ್ಯವನ್ನು ಅರಿಯಬೇಕೆಂಬ ಲಾಲಸೆಯು ಮಾಲಿನಿಗೂ ಇತ್ತು. ಅವಳು ಭವಿಷ್ಯವನ್ನು ನುಡಿಯುವ ಹೆಂಗುಸನ್ನು ನೋಡಿ:—"ನೀನು ಭವಿಷ್ಯವನ್ನು ಸರಿಯಾಗಿ ಹೇಳಬಲ್ಲೆಯೊ?" ಎಂದ ನುಡಿದಳು.

"ಧಾರಾಳವಾಗಿ! ನಾನು ಹೇಳುವ ಮಾತುಗಳು ಎಂದಿಗೂ ಸುಳ್ಳಾಗ ಲಿಕ್ಕಿಲ್ಲ!"

"ಹಾಗಾದರೆ ನೋಡೋಣ. ನಾನು ಯಾರೆಂಬುದನ್ನು ಊಹಿಸಿ ಹೇಳು!"

ಹೆಂಗಸು ಅವ್ಯಕ್ತವಾದ ಕೆಲವು ಸಂಸ್ಕೃತಪದಗಳನ್ನು ಉಸುರುತ್ತ

ಹೇಳಿದಳು:—"ತಾಯಿ, ನೀವು ನನ್ನನ್ನು ಪರೀಕ್ಷಿಸಲು ಹೊರಟಿರುವ ಹಾಗೆ ಕಾಣುತ್ತದೆ; ಆದರೆ ನಾನು ಎಲ್ಲವನ್ನೂ ಬಲ್ಲೆನು. ನೀವು ಈ ನಗರದ ಪ್ರಧಾನ ಸೇನಾಪತಿಗಳ ಮಕ್ಕಳಲ್ಲವೆ? ಇನ್ನೊಬ್ಬ ಸೇನಾಪತಿಗಳ ಪತ್ನೀಪದವನ್ನು ಸ್ವೀಕರಿಸಿರುವಿರಿ! ನಿಮ್ಮ ಹೆಸರು ಮಾಲಿನಿ!" ಎನ್ನುತ್ತ ಆ ಹೆಂಗಸು ನಗಲು ಪ್ರಾರಂಭಿಸಿದಳು.

"ಏಕೆ, ನಗುತ್ತಿರುವೆ?"

"ನಾನು ಹೇಳಿದುದು ಸತ್ಯವಲ್ಲವೇ? ಇನ್ನೂ ಹೇಳಬಲ್ಲೆ; ಒಂದು ಪ್ರಧಾನವಾದ ಕೆಲಸವನ್ನು ಜರುಗಿಸಲು ಹೋದ ಒಬ್ಬ ವ್ಯಕ್ತಿಯನ್ನು ಕುರಿತು ನೀವು ಚಿಂತಿಸುತ್ತಿರುವಿರಿ. ಅವನು ಈಗಲೇ ಹಿಂದಿರುಗಿ ಬರಬಹುದು!"

ಮಾಲಿನಿಯು ಆಶ್ಚರ್ಯಭರಿತಳಾದಳು. ಅವಳು ಪ್ರಶ್ನಿಸಿದಳು:— "ನೀನು-ಅಲ್ಲಲ್ಲ-ನೀವು ಯಾರು?"

ಹೆಂಗುಸು ಮಾತಾಡಲಿಲ್ಲ. ದೊಡ್ಡದಾದ ಒಂದು ನಗುವನ್ನು ಅವಳು ಹೊರಚೆಲ್ಲಿದಳು. ಆಕೆಯು ಹೆಂಗುಸಾಗಿರಲಿಲ್ಲ; ಹೆಂಗುಸಿನ ವೇಷವನ್ನು ಧರಿಸಿದ ನಾಗರಾಜನಾಗಿದ್ದನು.

"ತಮಗೇಕೆ ಈ ವೇಷ?" ಎಂದಳು ಮಾಲಿನಿ.

"ಕಾರ್ಯವನ್ನು ಸಾಧಿಸಲು ಈ ವೇಷವನ್ನು ಧರಿಸಬೇಕಾಯಿತು."

"ಕಾರ್ಯವು ಸಫಲವಾಯಿತೆ?"

"ವಿಚಾರಿಸಿದುದಕ್ಕಿಂತ ಹೆಚ್ಚು ಸಫಲವಾಯಿತು!"

"ರಾಜಗೃಹಕ್ಕೆ ಪ್ರವೇಶನವು ಲಭಿಸಿತೇ?"

"ಓಹೋ! ಲಭಿಸಿತು!"

"ಹೇಗೆ?"

"ಬಹಳ ತೃಷೆಯಾಗುತ್ತಿದೆ; ಸ್ವಲ್ಪ ನೀರು ಕೊಡಿರಮ್ಮಾ! ಅನಂತರ ಹೇಳುವೆನು" ಎಂದನು ನಾಗರಾಜನು.

ಮಾಲಿನಿಯು ಅವನಿಗೆ ನೀರನ್ನು ತಂದು ಕೊಡುವುದಕ್ಕಾಗಿ ಒಳಗೆ ಹೋದಳು. ಅವಳು ಒಂದು ತಂಬಿಗೆಯಲ್ಲಿ ನೀರನ್ನು ತಂದುಕೊಟ್ಟಳು. ನಾಗರಾಜನು ಅದನ್ನು ಪಾನಮಾಡಿದ ನಂತರ ಉಸ್ಸೆಂದು ಒಂದು ನಿಟ್ಟುಸಿರನ್ನು ಬಿಟ್ಟು ಹೇಳತೊಡಗಿದನು: "ಇಲ್ಲಿಂದ ನಾನು ರಾಜಗೃಹದಲ್ಲಿ ಪ್ರವೇಶವನ್ನು ಹೊಂದಬೇಕೆಂದು ಹೋದೆನಷ್ಟೆ! ಆದರೆ ಯಾವ ರೀತಿಯಲ್ಲಿ ಕಾರ್ಯವನ್ನು ಸಾಧಿಸಬೇಕೆಂಬುದು ನನಗೆ ಹೊಳೆಯಲಿಲ್ಲ. ಅಂತ್ಯದಲ್ಲಿ ಈ ವೇಷವನ್ನು

ಧರಿಸಿ ಏಕೆ ಪ್ರಯತ್ನಿಸಬಾರದು? ಎಂಬ ಆಲೋಚನೆಯು ತೋರಿತು. ಅದ ರಂತೆಯೇ ಭವಿಷ್ಯವನ್ನು ನುಡಿಯುವ ಹೆಂಗಸಿನ ವೇಷವನ್ನು ಧರಿಸಿಕೊಂಡು ಅಮಾತ್ಯನಂದನನ ಬಳಿಗೆ ಹೋದೆನು.''

''ಅಮಾತ್ಯನಂದನ ಮದನಕುಮಾರನಲ್ಲಿಗೇನು?''

''ಹೌದು. ನಾನು ವಿಚಾರಿಸಿದೆನು, ಇತರರನ್ನು ವಂಚಿಸಿ ಅರಮನೆ ಯೊಳಗೆ ಪ್ರವೇಶಿಸುವದಕ್ಕಿಂತ ಅಮಾತ್ಯನಂದನನನ್ನೇ ಸೋಲಿಸಿ ಅರಮನೆ ಯೊಳಗೆ ಪ್ರವೇಶಿಸುವದು ಸುಲಭವೆಂದು ಅಮಾತ್ಯನಂದನನ ಬಳಿಗೆ ತೆರಳಿ ನಾನು ಭೂತ ಭವಿಷ್ಯವನ್ನು ನುಡಿಯುವ ಹೆಂಗುಸೆಂದೂ, ಅವನ ಕರಗಳನ್ನು ತೋರಿಸಿದರೆ ಅವನ ಭಾಗ್ಯವನ್ನು ಆ ಕೈಗಳಲ್ಲಿ ಓದಿ ಅವನಿಗೆ ಹೇಳಬಲ್ಲೆ ನೆಂದೂ ನುಡಿದೆನು. ಅವನಿಗೆ ನನ್ನ ಮಾತುಗಳಲ್ಲಿ ನಂಬಿಕೆ ಬರಲಿಲ್ಲ. ಭೂತ ಕಾಲದ ಒಂದೊಂದು ಸಂಭವಗಳನ್ನೂ, ಸ್ವಲ್ಪಕಾಲದಲ್ಲಿಯೇ ಮಹಾರಾಜರ ಮಗಳನ್ನು ಮದುವೆಯಾಗುವ ಯೋಗವಿದೆಯೆಂದೂ ನಾನು ನುಡಿಯಲು, ಅವನು ವಿಸ್ಮಯಭರಿತನಾಗಿ ನನ್ನ ಮಾತುಗಳನ್ನು ಪೂರ್ಣವಾಗಿ ನಂಬತೊಡ ಗಿದನು.''

''ಆ ಕಾರ್ಯವು ಪೂರ್ಣವಾಗಿ ವಿಜಯವಾಗುವುದೇ?'' ಎಂದು ಅವನು ಕೇಳದನು.

''ತಮ್ಮ ಹಸ್ತಗಳಲ್ಲಿರುವ ರೇಖೆಗಳು ಅದನ್ನು ವ್ಯಕ್ತಪಡಿಸುತ್ತಿರು ವವು! ಆದರೆ........''

''ಏಕೆ? ಆದರೆ ಎಂದು ಅನ್ನುತ್ತಿರುವೆ?'' ಎಂದು ಮಂತ್ರಿನಂದನನು ಪ್ರಶ್ನಿಸಿದನು.

''ಅದನ್ನು ಪೂರ್ಣವಾಗಿ ಹೇಳಬೇಕಾದರೆ, ರಾಜನಂದಿನಿಯ ಹಸ್ತ ರೇಖೆಗಳನ್ನೂ ತಿಳಿಯಬೇಕು. ತಮ್ಮ ಈ ರೇಖೆಗಳು ತಮಗೆ ಬಹಳ ಭಾಗ್ಯ ವಿದೆಯೆಂಬುದನ್ನು ಸೂಚಿಸುತ್ತಲಿರುವವು; ಆದರೆ ರಾಜನಂದಿನಿಯ ಕೈಗಳ ರೇಖೆಗಳು ಇವುಗಳಿಗೆ ಪ್ರತಿಕೂಲವಾಗಿದ್ದರೆ ತಮ್ಮ ರೇಖೆಗಳು ಫಲಿಸ ಲಾರವು'' ಎಂದು ಹೇಳಿದೆನು ನಾನು.

ಆಗ ಅಮಾತ್ಯನಂದನನು ಚಿಂತಾನಿಬಿಡನಾದನು. ಅವನಿಗೆ ತನ್ನ ಭಾಗ್ಯವು ಎಷ್ಟರ ಮಟ್ಟಿಗೆ ಇದೆಯೆಂಬುದನ್ನು ತಿಳಿಯಬೇಕೆಂಬ ಕುತೂಹಲ ವಿದ್ದಿತು. ಆದುದರಿಂದ ಅವನು ನುಡಿದನು:—''ರಾಜನಂದಿನಿಯ ದರ್ಶನ ವನ್ನು ನಿನಗೆ ಮಾಡಿಸುವೆನು. ಅವಳ ಸಾಮುದ್ರಿಕಾ ಲಕ್ಷಣಗಳನ್ನು ನೋಡಿ ಕಂಡುಬರುವ ಫಲಗಳನ್ನು ಹೇಳುವೆಯಾ?''

"ಅಪ್ಪಣೆಯಂತೆ ವರ್ತಿಸುವೆನು ಮಹಾಪ್ರಭೂ! ನನ್ನ ಶಾಸ್ತ್ರವು ಸತ್ಯವಾದರೆ, ನನಗೆ ಬಹುಮಾನಗಳನ್ನು ನೀಡಬೇಕು."

"ನಿನ್ನ ಮಾತುಗಳು ವಾಸ್ತವವಾಗಿ ಪರಿಣಮಿಸಿದರೆ, ನಿನ್ನ ದಾರಿದ್ರ್ಯವನ್ನು ಪರಿಹರಿಸುವೆನು."

"ಪ್ರಭುಗಳ ಅನುಗ್ರಹ!" ಎಂದೆನು ನಾನು.

ಅವನು ಅನಂತರ ನನ್ನನ್ನು ಅರಮನೆಗೆ ಕರೆದುಕೊಂಡು ಹೋದನು; ಅಲ್ಲಿರುವ ಪಹರೆಯವರು ಅಮಾತ್ಯಸುತನ ಅಪ್ಪಣೆಯಂತೆ ನನ್ನನ್ನು ಒಳಗೆ ಪ್ರವೇಶಿಸಲು ಬಿಟ್ಟರು. ಅಮಾತ್ಯಪುತ್ರನಾದರೂ ನನ್ನ ಹಿಂದೆಯೇ ಬರಬೇಕೆಂದು ಇದ್ದನು; ಆದರೆ ಅವನು ನನ್ನೊಡನೆ ಬಂದರೆ, ನನ್ನ ಪರಿಚಯವನ್ನು ರಾಜಕುಟುಂಬಕ್ಕರುಹಿ ಅವರ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲದುದರಿಂದ ನಾನು ಒಂದು ಯುಕ್ತಿಯನ್ನು ಪ್ರಯೋಗಿಸಿದೆನು."

"ಏನು ಆ ಯುಕ್ತಿ?" ಎಂದು ಮಾಲಿನಿಯು ಪ್ರಶ್ನಿಸಿದಳು.

"ಅದನ್ನೇ ವಿವರಿಸುತ್ತೇನೆ" ಎಂದು ತನ್ನ ಸಾಹಸಗಳನ್ನು ವಿವರಿಸಲು ನಾಗರಾಜನು ಪ್ರಾರಂಭಿಸಿದನು. ಅಮಾತ್ಯನಂದನನೊಡನೆ ನಾನು ಆಗ ಹೇಳಿದೆ: "ಪ್ರಭೂ, ತಾವು ನನ್ನೊಂದಿಗೆ ಬರುವದು ಅಷ್ಟು ಒಳ್ಳೆಯದಲ್ಲ!"

"ಅದೇಕೆ?' ಎಂದು ಅಮಾತ್ಯನಂದನನು ನನ್ನನ್ನು ಸಂಶಯದೃಷ್ಟಿಯಲ್ಲಿ ನೋಡಿದನು.

"ನಾನು ಹೇಳಿದೆ: 'ಪ್ರಭುಗಳು ನನ್ನ ಬಗ್ಗೆ ಸಂದೇಹವನ್ನು ತಾಳಬೇಕಾದುದಿಲ್ಲ. ಗಂಡಸರು ತಮ್ಮ ಮುಂದೆ ಇದ್ದರೆ ಹೆಂಗಸರು ಎಂದಿಗೂ ಎದೆಬಿಚ್ಚಿ ಮಾತಾಡಲಾರರು. ತಾವೂ ನನ್ನ ಸಂಗಡವಿದ್ದರೆ, ರಾಜನಂದಿನಿಯು ಸಂಕೋಚಭರಿತಳಾಗಿ ತನ್ನ ಕರಗಳನ್ನು ತೋರಿಸಲು ಹಿಂದೆಗೆಯಬಹುದು; ಆದುದರಿಂದ ತಾವು ಬರುವದು ಒಳ್ಳೆಯದಲ್ಲವೆ'ಂದೆನು."

"ಮದನಕುಮಾರನಿಗೆ ನನ್ನ ಈ ಸಲಹೆಯು ಸಮಂಜಸವಾಗಿ ತೋರಿತು; ಅವನು ನನ್ನ ಮಾತುಗಳಿಗೆ ಒಪ್ಪಿದನು. ಹೌದು, ನೀನು ಹೇಳುವದು ವಾಸ್ತವವು; ಹೆಂಗಸರು ಗಂಡಸರ ಮುಂದೆ ಮಾತಾಡಲು ನಾಚುತ್ತಾರೆ. ನೀನು ಹೋಗಿ ಅವಳ ಹಸ್ತರೇಖೆಗಳನ್ನು ಪರೀಕ್ಷಿಸಿ, ಅವುಗಳ ಫಲವನ್ನು ನನಗೆ ಬಂದು ತಿಳಿಸು! ನಾನಿಲ್ಲಿಯೇ ಕಾದು ನಿಂತಿರುವೆನು."

"ಹಾಗೆಯೇ ಆಗಲಿ!" ಎಂದು ನಾನು ಒಳಗೆ ಪ್ರವೇಶಿಸಿದೆನು. ರಾಜನಂದಿನಿಯ ವಸತಿಯನ್ನು ಕಂಡುಹಿಡಿಯಲು ಹೆಚ್ಚಿನ ಪ್ರಯಾಸವೇನೂ ಆಗಲಿಲ್ಲ. ತನ್ನ ತಂದೆಯ ವಿಯೋಗದಿಂದ ಅರಸುಮಗಳು ಬಹಳ ಕಂಗಾ

ಲಾಗಿರುವಳು. ಅರಮನೆಯು ಅವಳಿಗೆ ಸೆರೆಮನೆಯಾಗಿ ತೋರುತ್ತಿದೆ, ಎಂದು ನಾನು ಊಹಿಸಿಕೊಂಡೆನು. ಅವಳ ಮುಖವು ಅತ್ಯಂತ ಮ್ಲಾನ ಭಾವವನ್ನು ಹೊಂದಿದ್ದಿತು; ಕಣ್ಣುಗಳು ಕಾಂತಿಶೂನ್ಯವಾಗಿದ್ದುವು. ಅವಳು ಅಪಾರವಾದ ಸಂಕಟದಲ್ಲಿರುವಳೆಂಬುದನ್ನು ನಾನು ತಿಳಿದುಕೊಂಡೆನು.''

''ನನ್ನನ್ನು ಕಂಡೊಡನೆಯೇ ಪ್ರಾರಂಭದಲ್ಲಿ ಅರಸುಕುಮಾರಿಯು ಭಯ ಮತ್ತು ಆಶ್ಚರ್ಯವನ್ನು ತೋರಿಸಿದಳು. ಅವಳಿಗೆ ಸಹಾಯವನ್ನು ನೀಡುವದಕ್ಕಾಗಿ ಬಂದವನು ನಾನೆಂದು ನನ್ನ ಪರಿಚಯವನ್ನು ನೀಡಿದೆನು.''

''ಅಂದು ಘಾತುಕರ ಕರಗಳಿಂದ ನನ್ನನ್ನು ರಕ್ಷಿಸಿ ಪಾಲಿಸಿದವರೇ ತಾವು!'' ಎಂದು ಕೃತಜ್ಞತೆಯನ್ನು ಸೂಚಿಸುತ್ತ ಅವಳು: ''ನಮಗೆ ಬಂದೊದಗಿದ ವಿಪತ್ತುಗಳನ್ನು ತಿಳಿದು ರಕ್ಷಿಸಲು ತಾವು ಬಂದಿರುವಿರಾ?''

''ರಾಜನಂದಿನಿ! ನಿನ್ನನ್ನು ಕಾಣುವಾಗ ಶೋಕದಿಂದ ನೀನು ಬಾಡಿ ಹೋಗಿರುವಿ, ಎಂಬುದು ಗೋಚರವಾಗುತ್ತಿರುವದರ ಕಾರಣವೇನು? ಎಂಬುದನ್ನು ದಯವಿಟ್ಟು ತಿಳಿಸು!''

''ತಂದೆಯವರನ್ನು'' ಎಂದು ಅಳುತ್ತ ರಾಜಕುಮಾರಿಯು: ''ಅಮಾತ್ಯರು ನಮ್ಮಿಂದ ಅಗಲಿಸಿದರು.''

''ಯಾರು, ಅಮಾತ್ಯರೇ? ಶತ್ರುಗಳಾದ ಲಾಟರ ತಂತ್ರಜಾಲವೆಂದು ನಗರದಲ್ಲೆಲ್ಲ ಸುದ್ದಿ ಹರಡಿರುವದು'' ಎಂದು ನಾನು ಹೇಳಿದೆನು.

''ಅದು ಸುಳ್ಳು! ಇದು ಅಮಾತ್ಯರ ತಂತ್ರವಾಗಿದೆ'' ಎಂದಳು ಅರಸು ಮಗಳು ''ತಾವು ಹೇಗಾದರೂ ನಮ್ಮನ್ನು ಈ ಬಲೆಯಿಂದ ರಕ್ಷಿಸಿರಿ!''

''ಏನು ರಾಜಕುಮಾರಿ?'' ಎಂದೆನು ನಾನು. ''ನಿನಗೆ ಯಾವ ಸಂಕಟವು ಪ್ರಾಪ್ತವಾಗಿದೆ?''

''ಇದು ಅರಮನೆಯಲ್ಲ; ಕಾರಾಗೃಹವಾಗಿದೆ. ಪ್ರತಿದಿನವೂ ಮದನನು ಬಂದು ನನ್ನನ್ನು ಹಿಂಸಿಸುತ್ತಿರುವನು. ಆ ನರರಾಕ್ಷಸನ ಪಾಶಗಳಿಂದ ಪಾರಾಗುವದು ಹೇಗೆ?''

''ಮದನನೇನು ಮಾಡಿದನು?''

''ಅಯ್ಯೋ! ನಿತ್ಯವೂ ಇಲ್ಲಿಗೆ ಬಂದು ಅವನ ಪತ್ನೀಪದವನ್ನು ಸ್ವೀಕರಿಸಬೇಕೆಂದು ನನ್ನನ್ನು ನಿರ್ಬಂಧಿಸುತ್ತಲಿರುವನು. ನಾನು ಒಪ್ಪದಿದ್ದರೆ....'' ಎಂದು ನುಡಿದು ಸುಮ್ಮನಾದಳು.

''ನೀನು ಒಪ್ಪದಿದ್ದರೆ....?''

''ತನ್ನ ಪೈಶಾಚಿಕ ಬಲವನ್ನು ಅವನು ಪ್ರಯೋಗಿಸುವನಂತೆ! ಅಂಥ

ಯಾವ ವ್ಯಗೀಯ ಪ್ರಯತ್ನಕ್ಕೂ ಮದನನು ಹಿಂಜರಿಯಲಾರನು."

"ಏನು? ರಾಜಕುಮಾರಿಯ ಮೇಲೆಯೂ ಕೈಮಾಡತೊಡಗಿದನೇ ಆ ದುಷ್ಟನು! ಎಂದು ಕ್ರೋಧಯುಕ್ತವಾಣಿಯಲ್ಲಿ ಮಾಲಿನಿಯು ಕೇಳಿದಳು."

"ಆ ನರಪಿಶಾಚಿಯು ಯಾವುದಕ್ಕೂ ಹೇಸದು." ಎಂದನು ನಾಗರಾಜ.

"ತಾವು ರಾಜಕುಮಾರಿಯೊಡನೆ ಏನಂದಿರಿ?"

"ಅದನ್ನೇ ಹೇಳುತ್ತೇನೆ; ಅವಳು ಅಮಾತ್ಯನಂದನನ ಸಲಹೆಗಳಿಗೆ ಒಪ್ಪಿದವಳಂತೆ ನಟಿಸಬೇಕೆಂದು ಹೇಳಿದೆನು."

"ಹಾಗಾದರೆ ಸರ್ವನಾಶವಾಗುವುದಿಲ್ಲವೆ?"

"ಇಲ್ಲ, ಅಮಾತ್ಯನಂದನನ ಸಲಹೆಗಳಿಗೆ ಒಡಂಬಟ್ಟವಳಂತೆ ನಟಿಸಿ, ಅವಳು ಕಾಲಹರಣೆಯನ್ನು ಮಾಡಬೇಕೆಂದು ನಾನು ರಾಜನಂದಿನಿಗೆ ಸೂಚಿಸಿದೆನು. ಮೂರುತಿಂಗಳು ಅವಳಿಗೆ ಕಂಟಕಕಾಲವಿರುವದರಿಂದ ಅದರ ಪರಿಹಾರಕ್ಕಾಗಿ ವ್ರತವನ್ನು ಅನುಷ್ಠಿಸುತ್ತಿರುವೆನೆಂದೂ, ಅದು ಕಳೆದ ನಂತರ ಅವನನ್ನೇ ವಿವಾಹವಾಗುವುದಾಗಿ ವಾಗ್ದತ್ತವನ್ನು ಮದನನಿಗೆ ನೀಡಬೇಕೆಂದೂ ನಾನು ರಾಜನಂದಿಗೆ ಉಪದೇಶಿಸಿದನು."

"ಅವಳು ತಮ್ಮ ನುಡಿಗಳಿಗೆ ಒಪ್ಪಿದಳೇ?"

"ಅದು ಅವಳಿಗೆ ಅಷ್ಟು ಸೊಗಸಾಗಿ ತೋರದಿದ್ದರೂ ಒಪ್ಪಿದಳು. ಅದಿಲ್ಲದೆ ಬೇರೆ ದಾರಿಯಿಲ್ಲ. ಚಾರರು ಸದಾ ಹೊಂಚು ಹಾಕುತ್ತಿರುವಾಗ ಅರಮನೆಯಿಂದ ಪಾರಾಗುವದಂತೂ ಅಶಕ್ಯವಾದ ಕೆಲಸವೇ ಸರಿ."

"ಈ ಮಾತುಗಳಿಗೆ ಅಮಾತ್ಯನಂದನನು ಒಪ್ಪುದಿದ್ದರೆ?" ಎಂದಳು ಮಾಲಿನಿಯು.

"ಅವನು ನಿಶ್ಚಯವಾಗಿಯೂ ಒಪ್ಪುವನು. ತಾನಾಗಿಯೇ ಅವನ ಪಾಣಿಗಳನ್ನು ಗ್ರಹಿಸುವದಕ್ಕೆ ಒಪ್ಪಿದಾಗ-ಮದನನು ಅವಳ ಮಾತುಗಳನ್ನು ಸ್ವೀಕರಿಸದಿರುವನೆ? ಅದಲ್ಲದೆ ನಾನು ಅರಮನೆಯಿಂದ ಹಿಂದಿರುಗಿ ಬರುವಾಗ ಅಮಾತ್ಯನಂದನನ ಕಿವಿಗಳಲ್ಲಿ ಈ ಮೂರು ತಿಂಗಳು ಕಾಲ ರಾಜಕುಮಾರಿಗೆ ಕಂಟಕವಿದೆಯೆಂತಲೂ ಈ ದುಷ್ಕಾಲದಲ್ಲಿ ಅವಳು ವಿವಾಹವಾಗುವುದಾದರೆ, ಮಹತ್ತಾದ ದುಃಖಗಳನ್ನು ಅನುಭವಿಸಬೇಕಾಗಿ ಬರುವುದೆಂದೂ ನಾನು ಭವಿಷ್ಯವನ್ನು ಉಸುರಿ, ಅವನ ಹೃದಯದಲ್ಲಿ ಭೀತಿಯನ್ನು ಹುಟ್ಟಿಸಿರುವೆನು. ಅವನು ಈ ಮಾತುಗಳನ್ನು ನಂಬುವನು."

"ಆದರೆ ಮೂರು ತಿಂಗಳ ನಂತರ?"

"ಅದರೊಳಗಾಗಿ ದುಷ್ಟಬುದ್ಧಿಯ ರಾಜ್ಯಭಾರವು ಪೂರ್ತಿಗೊಳ್ಳುವುದು."

"ಅದು ಹೇಗೆ?"

"ರಾಜಭಕ್ತಸೈನಿಕರೂ ದಂಡನಾಯಕರೂ ಲಾಟರೊಡನೆ ಹೋರಾಡುತ್ತಿರುವರಷ್ಟೆ? ಅವರು ಹಿಂದಿರುಗಿ ಬಂದೊಡನೆಯೇ ದುಷ್ಟಬುದ್ಧಿಯ ಪ್ರತಾಪವು ಸಮಾಪ್ತಿಯನ್ನು ಕಾಣಲೇಬೇಕಾಗುವದು."

—

## ಚಂದ್ರಹಾಸನಿಗೊಂದು ಆಪತ್ತು.

ಲಾಟರೊಡನೆ ಇರುವ ಕಾಳಗವು ಸಮಾಪ್ತಿಯನ್ನು ಹೊಂದಿತು; ಕುಳಿಂದರ ಪ್ರಬಲವಾದ ಸೈನ್ಯದ ಮುಂದೆ ಲಾಟರ ಕೈಗಳು ಮುಂದೆ ಸಾಗಲಿಲ್ಲ. ಹಲವು ತಿಂಗಳುಗಳ ಕಾಳಗದ ನಂತರ ಲಾಟರ ಬಾಹುಗಳ ಬಲವು ಅವನತಿಯನ್ನು ಹೊಂದಲಾರಂಭಿಸಿತು ಪ್ರತಿಯೊಂದು ಪ್ರಯತ್ನದಲ್ಲಿಯೂ ಅವರು ಪರಾಜಯವನ್ನೇ ಹೊಂದಿದರು. ಸೇನೆಗಳು ಛಿನ್ನಭಿನ್ನವಾದುವು; ಹೆಚ್ಚು ಮಂದಿ ಭಟರು ಮೃತ್ಯುಪಾಶಕ್ಕೆ ಬಲಿಯಾದರು. ಆಯುಧ ಸಾಮಗ್ರಿಗಳು ಶತ್ರುಗಳ ಕರಗತವಾದವು. ಅಂತ್ಯದಲ್ಲಿ ತಮ್ಮ ಪ್ರಾಣರಕ್ಷಣೆಗಾಗಿ ಅವರು ಯುದ್ಧಭೂಮಿಯಿಂದ ಹಿಂಜರಿದು ಪಲಾಯನ ಸೂಕ್ತವನ್ನು ಪಠಿಸಿದರು.

ಕುಂತಳದ ದಂಡನಾಯಕರು ಅವರನ್ನು ಹಿಂಬಾಲಿಸಿ ಲಾಟರ ರಾಜಧಾನಿಯನ್ನು ಆಕ್ರಮಿಸಬೇಕೆಂದು ಬಗೆದಿದ್ದರು; ಆದರೆ ಕುಂತಳದ ರಾಜಧಾನಿಯಿಂದ ಲಭಿಸಿದ ವಾರ್ತೆಯು ಈ ಉದ್ಯಮವನ್ನು ನೆರವೇರಿಸಲು ಪ್ರತಿಬಂಧಕವಾಗಿ ನಿಂತಿದ್ದಿತು ದುಷ್ಟಬುದ್ಧಿಯು ತಾನು ಅರಸನನ್ನು ಸೆರೆಮನೆಯಲ್ಲಿರಿಸಿರುವ ಸಂಗತಿಯು ಯುದ್ಧರಂಗದಲ್ಲಿರುವ ಸೇನಾನಾಯಕರಿಗೆ ತಿಳಿಯಬಾರದೆಂದು ಎಷ್ಟು ವಿಧದಲ್ಲಿ ಪ್ರಯತ್ನಿಸಿದರೂ ಅದು ಫಲಕಾರಿಯಾಗಲಿಲ್ಲ. ರಾಜಧಾನಿಯಲ್ಲಿ ಒದಗಿದ ಗಂಡಾಂತರದ ಸುದ್ದಿಯು ಯುದ್ಧರಂಗಕ್ಕೆ ತಲುಪಿತು.

ಅರಸನು ತುರಂಗವಾಸಿಯಾದ ವಾರ್ತೆಯನ್ನು ಮಾಲಿನಿಯಿಂದ ನಿಯುಕ್ತನಾದ ಚಾರನೊಬ್ಬನು ವಹಿಸಿಕೊಂಡು ರಣಾಂಗಣಕ್ಕೆ ಬಂದನು. ಸಮರ ಭೂಮಿಯಲ್ಲಿ ತಮ್ಮ ಮುಂದಿನ ಕಾರ್ಯಪದ್ಧತಿಗಳೇನೆಂಬುದನ್ನು ಕುರಿತು ಚಿಂತಿಸಲು ಚಂದ್ರಹಾಸ, ಭುವನವಿಕ್ರಮ ಮೊದಲಾದ ದಂಡನಾಯಕರು ಮಾರ್ತಂಡವರ್ಮನ ಗೂಡಾರದಲ್ಲಿ ನೆರೆದಿದ್ದರು. ಲಾಟರು ಪುನಃ ತಲೆಯೆತ್ತದಂತೆ ಮಾಡಲು ಯಾವ ರೀತಿ ವರ್ತಿಸಬೇಕೆಂಬುದನ್ನು,

ಕುರಿತು ಎಲ್ಲರೂ ಚಿಂತಿಸುತ್ತಿದ್ದರು. ಈ ಸಂದರ್ಭದಲ್ಲಾಗಿತ್ತು ರಾಜಧಾನಿಯಿಂದ ದೂತನು ಬಂದುದು.

ದೂತನನ್ನು ಕಂಡೊಡನೆಯೇ "ಎಲ್ಲಿಂದ ಬಂದೆ?" ಎಂದು ಭುವನವಿಕ್ರಮನು ಪ್ರಶ್ನಿಸಿದನು.

"ರಾಜಧಾನಿಯಿಂದ ಒಂದು ಮಹತ್ತಾದ ವಾರ್ತೆಯೊಡನೆ ಬಂದಿರುವೆನು. ಭಯಂಕರವಾದ ಗಂಡಾಂತರವು ಪ್ರಾಪ್ತವಾಗಿದೆ!"

"ಏನದು? ಏನದು?" ಎಂದು ಆಶ್ಚರ್ಯ, ಭಯ, ವಿಸ್ಮಯಗಳಿಂದ ಕೂಡಿದ ಸ್ವರಗಳಲ್ಲಿ ಎಲ್ಲಾ ದಂಡನಾಯಕರೂ ಏಕಕಾಲದಲ್ಲಿ ಪ್ರಶ್ನಿಸಿದರು.

"ಮಹಾರಾಜರು ಬಂಧನಸ್ಥರಾದರು!"

"ಹೇಗೆ? ಯಾರು ಬಂಧಿಸಿದುದು?"

"ಈ ಓಲೆಯಿಂದ ತಮಗೆ ವಿದಿತವಾಗಬಹುದು!" ಎಂದು ಹೇಳಿ ಆ ದೂತನು ತಾನು ತಂದಿದ್ದ ಓಲೆಯನ್ನು ಭುವನವಿಕ್ರಮನ ಕರಗಳಲ್ಲಿ ನೀಡಿದನು. ಭುವನವಿಕ್ರಮನು ಆ ಪತ್ರವನ್ನು ತೆಗೆದು ಓದಿ ನೋಡಿದನು ಅವನನ್ನು ನೋಡುತ್ತ ಮಾರ್ತಂಡವರ್ಮನು, "ಏನು ಸಮಾಚಾರವು? ಆ ಗಂಡಾಂತರವು ಹೇಗೆ ಸಂಭವಿಸಿತು?" ಎಂಬುದಾಗಿ ಪ್ರಶ್ನಿಸಿದನು.

"ದುಷ್ಟಬುದ್ಧಿಯು ಕಾರಸ್ಥಾನವು!"

"ಅಮಾತ್ಯನು ರಾಜದ್ರೋಹವನ್ನು ಬಗೆದನೆ?"

"ಹೌದು; ಅವನು ಮಹಾರಾಜರನ್ನು ಬಂಧಿಸಿ ಅಂಬಿಕಾಗ್ರಾಮದಲ್ಲಿ ಸೆರೆಯಲ್ಲಿಟ್ಟಿರುವನು"

"ನಾನು ಈ ಮೊದಲೇ ಬಗೆದಿದ್ದನು ಆ ತಂತ್ರಶಾಲಿಯು!" ಎಂದು ಮಾರ್ತಂಡವರ್ಮನು, "ಮಹಾರಾಜರಿಗೆ ದ್ರೋಹವನ್ನು ಬಗೆಯುವನೆಂದು. ಅದನ್ನು ಮಹಾರಾಜರಿಗೆ ಈ ಮೊದಲೇ ತಿಳಿಸಿದ್ದೆನು; ಆದರೆ ನನ್ನ ಮಾತುಗಳಲ್ಲಿ ಅವರಿಗೆ ನಂಬಿಕೆಯಾಗಲಿಲ್ಲ!'

"ಎಂದು ಮಾತ್ರವಲ್ಲ, ಅಮಾತ್ಯನು ನಬ್ಬಿಬ್ಬರ ಮೇಲೆಯೂ ರಾಜದ್ರೋಹದ ಅಪಾದನೆಯನ್ನು ಹೊರಿಸಿರುವನಂತೆ!"

"ಏನು, ನಾನು ರಾಜದ್ರೋಹಿಯೇ!" ಎಂದು ನಿಟ್ಟುಸಿರೊಂದನ್ನು ಬಿಟ್ಟು ಮಾರ್ತಂಡವರ್ಮನು ತನ್ನ ನೆರೆತು ಹೋದ ತಲೆಗೂದಲುಗಳನ್ನು ತೋರಿಸುತ್ತ: "ಸ್ವಾಮಿನಿಷ್ಠೆಯಲ್ಲಿ ನನ್ನ ತಲೆಗೂದಲುಗಳು ನೆರೆತು ಹೋಗಿವೆ! ನನ್ನ ಶರೀರದಲ್ಲಿ ಕಾಣುವ ಪ್ರತಿಯೊಂದು ಕಲೆಯೂ ನಾನು ಮಹಾರಾಜರ ಸಿಂಹಾಸನವನ್ನು ರಕ್ಷಿಸುವದಕ್ಕಾಗಿ ನನ್ನ ದೇಹದಿಂದ ನೆತ್ತ

ರನ್ನು ಯಾವ ಪರಿಯಿಂದ ಸುರಿಸಿದೆನೆಂಬುದನ್ನು ಸೂಚಿಸುತ್ತಲಿದೆ!"

"ದುಷ್ಟಬುದ್ಧಿಯ ಕಾರಸ್ಥಾನವು ಜಯಪ್ರದವಾಯಿತು! ಆದರೆ ನಾವೇನು ಮಾಡುವದು?" ಎಂದು ನಿರಾಶೆಯನ್ನು ಸೂಚಿಸುತ್ತ ಭುವನ ವಿಕ್ರಮನು ಕೂಗಿದನು.

ಇದುವರೆಗೆ ಮೌನವನ್ನು ಅವಲಂಬಿಸಿದ್ದ ಚಂದ್ರಹಾಸನು ನಡುವೇ ಬಾಯಿಹಾಕಿ "ಮಾಡುವದೇನು? ಅಮಾತ್ಯನ ರಾಜ್ಯಭಾರವನ್ನು ಸಮಾಪ್ತಿ ಗೊಳಿಸುವದು. ರಾಜಧಾನಿಯಲ್ಲಿ ಗಂಡಾಂತರವು ಪ್ರಾಪ್ತವಾಗಿರುವಾಗ ನಾವು ಲಾಟರ ರಾಜಧಾನಿಯನ್ನು ಹಿಡಿಯುವದಕ್ಕೆ ಪ್ರಯತ್ನಿಸುವದು ಹುಚ್ಚುತನವಾಗಿದೆ!"

"ಹೌದು! ದುಷ್ಟಬುದ್ಧಿಯ ಅವತಾರವನ್ನು ಸಮಾಪ್ತಿಗೊಳಿಸಬೇಕು! ಆದರೆ ಹೇಗೆ? ಬೊಕ್ಕಸ, ಕೋಟೆ, ಸೈನ್ಯ ಇವುಗಳೆಲ್ಲವೂ ಅವನ ವಶದಲ್ಲಿ! ನಾವು ಸೈನ್ಯದೊಡನೆ ಆರು ತಿಂಗಳು ಮುತ್ತಿಗೆ ಹಾಕಿದರೂ ಕೋಟೆಯು ಕೈವಶ ವಾಗಲಾರದು. ರಾಜಧಾನಿಯಿಂದ ನಾವು ತೆಗೆದುಕೊಂಡು ಬಂದ ಧನವು ತೀರಲಿಕ್ಕೆ ಬಂದಿದೆ. ಧವಸ-ಧಾನ್ಯಗಳು ಕಡಿಮೆಯಾಗಿವೆ ಸಹಸ್ರಾರು ಮಂದಿ ಸೈನಿಕರು ಯುದ್ಧದಲ್ಲಿ ಮಡಿದಿರುವರು. ಇನ್ನುಳಿದ ಸೈನಿಕರೊಡನೆ ಕಾದಾ ಡುವದೆಂದರೆ, ಆರೇಳು ತಿಂಗಳಿಗೆ ಹಿಟ್ಟುಬೇಡವೇ?"

"ತಾವು ಹೇಳುವದೂ ಸಮಂಜಸವೇ; ಆದರೆ ರಾಜನಿಷ್ಠರೆಂದು ಹೇಳಿಸಿ ಕೊಳ್ಳುತ್ತಿರುವ ನಾವುಗಳು ಅರಸುವಂಶವನ್ನು ಈ ವಿಪತ್ತಿನಿಂದ ರಕ್ಷಿಸ ಬೇಡವೆ? ರಾಜಕುಟುಂಬವು ಸೆರೆಮನೆಯಲ್ಲಿ; ಪ್ರಜೆಗಳು ದುಷ್ಟಬುದ್ಧಿಯ ಸ್ವೇಚ್ಛಾವರ್ತನೆಯಿಂದ ನರಳುತ್ತಲಿದ್ದಾರೆ. ಈ ಸಂದರ್ಭದಲ್ಲಿ ನಾವು ಮಾಡುವದೇನು? ಅರಸನು ಅಂಬಿಕಾಗ್ರಾಮದಲ್ಲಿ ಸೆರೆಯಲ್ಲಿರುವನೆಂಬುದು ತಿಳಿಯಬಂದಿದೆ. ನಮ್ಮ ಪ್ರಥಮ ಕರ್ತವ್ಯವು ಅರಸನನ್ನು ಸೆರೆಯಿಂದ ವಿಮುಕ್ತನನ್ನಾಗಿ ಮಾಡುವದಾಗಿದೆ. ಯುಕ್ತಿಯಿಂದ ಕೋಟೆಯೊಳಗೆ ಪ್ರವೇಶವನ್ನು ಹೊಂದಿ, ದುಷ್ಟಬುದ್ಧಿಯ ಅವತಾರವನ್ನು ಸಮಾಪ್ತಿಗೊಳಿಸ ಬೇಕು.'

"ಚಂದ್ರಹಾಸರೆ! ನಿಮ್ಮ ಸಲಹೆಯು ಸಮಂಜಸವಾಗಿದೆ; ಆದರೆ ಲಾಟರನ್ನು ಏನು ಮಾಡುವುದು?"

"ಲಾಟರಂತೂ ಪರಾಜಯವನ್ನು ಹೊಂದಿರುವರು. ಅವರಿಂದ ನಮಗೆ ಹೆಚ್ಚಿನ ತೊಂದರೆಗಳು ಲಬಿಸಲಾರವು. ರಾಜಧಾನಿಯಲ್ಲಿ ದುಷ್ಟಬುದ್ಧಿಯ ಶಾಸನವು ಸುಸಂಘಟಿತವಾದರೆ, ಅದನ್ನು ಅಡಿಮೇಲು ಮಾಡುವದು ಶ್ರಮ

ಸಾಧ್ಯವಾಗಬಹುದು. ಈಗ ಅದಿನ್ನೂ ಸುಸಂಘಟಿತವಾಗಿರುವದಿಲ್ಲ. ಪ್ರಜೆಗಳ ಹೃದಯದಲ್ಲಿ ಕುಂತಳೇಂದ್ರನ ಮೇಲಿರುವ ಭಕ್ತಿ-ವಿಶ್ವಾಸಗಳು ಆರುವ ಮುಂಚೆಯೇ ನಾವು ಶ್ರಮಿಸಬೇಕು. ಹಾಗಾದರೆ ಪ್ರಜೆಗಳ ಬೆಂಬಲವೂ ನಮಗೆ ಸಿಗುವದು."

ಚಂದ್ರಹಾಸನ ಈ ವಚನಗಳಲ್ಲಿ ಆಸಕ್ತಿತೋರಿದುದರಿಂದ ಭುವನವಿಕ್ರಮನು ನುಡಿದನು: "ಹೌದು! ಆದಷ್ಟು ಬೇಗನೆ ನಾವು ರಾಜಧಾನಿಗೆ ತೆರಳಬೇಕು! ದುಷ್ಟಬುದ್ಧಿಗೆ ಯೋಗ್ಯ ಶಾಸನವನ್ನು ಮಾಡಬೇಕು!"

"ಹೌದು! ಹೌದು! ನಾವು ರಾಜಧಾನಿಗೆ ತೆರಳೋಣ!" ಎಂದು ಎಲ್ಲರೂ ಏಕಕಂಠದಲ್ಲಿ ನುಡಿದರು.

ಅಂತ್ಯದಲ್ಲಿ ಎಲ್ಲರೂ ರಾಜಧಾನಿಗೆ ತೆರಳಬೇಕೆಂದು ನಿರ್ಧರಿಸಿದರು. ಇದು ಎಲ್ಲ ಭಟರಿಗೂ ಬಹು ಹರ್ಷದಾಯಕ ವಾರ್ತೆಯಾಗಿದ್ದಿತು. ನಾಲ್ಕೆಂಟು ತಿಂಗಳುಗಳವರೆಗೆ ನೆಲೆ ನಿಂತ ಭಯಂಕರವಾದ ಸಂಗ್ರಾಮದಿಂದ ಅವರು ಬಳಲಿದ್ದರು. ನಿತ್ಯವೂ ನಡೆಯುತ್ತಿರುವ ನರಹತ್ಯೆಯು ಅವರ ಹೃದಯಗಳನ್ನು ಅಳಕುವಂತೆ ಮಾಡಿದ್ದಿತು. ತಮ್ಮ ಗೃಹಗಳಿಗೆ ತೆರಳಿ, ತಮ್ಮ ಮಡದಿ-ಮಕ್ಕಳ ಮೊಗಗಳನ್ನು ನೋಡಿ ಆನಂದಿಸುವ ಕನಸುಗಳನ್ನು ಅವರು ಕಾಣುತ್ತ ಇದುವರೆಗೆ ಸಂತೃಪ್ತಿಯನ್ನು ತಾಳುತ್ತಲಿದ್ದರು; ಆದರೆ ತಾವು ಗೃಹಗಳನ್ನು ಸೇರಿರುವೆವು, ಎಂಬ ನಂಬಿಕೆಯು ಯಾರಿಗೂ ಇರಲಿಲ್ಲ. ಮೃತ್ಯುವಿಗೆ ಯಾವಾಗ ಬಲಿಯಾಗುವುದೆಂಬ ನಿಶ್ಚಯವಿಲ್ಲ. ಸೈನಿಕನ ಬದುಕು ಅಂತಹದು. ಪ್ರತಿನಿಮಿಷವೂ ಮೃತ್ಯುವಿನ ಆಲಿಂಗನವನ್ನು ಹೊಂದಲು ಸನ್ನದ್ಧನಾಗಿರಲೇ ಬೇಕು ಪ್ರಾಣವನ್ನು ಬಲಿಯರ್ಪಿಸಲು ಸಿದ್ಧತೆಯನ್ನು ಮಾಡುತ್ತಿರಬೇಕು. ಮುಂಜಾನೆ ಮಡದಿಯನ್ನು ಆಲಂಗಿಸಿ ಗೃಹದಿಂದ ಹೊರಬಿದ್ದ ಭಟನು ಸಂಜೆಗೆ ಮಡದಿಯನ್ನು ಪುನಃ ಕಂಡೇನು, ಎಂಬ ಭರವಸೆಯಿಲ್ಲ.

ರಾಜಧಾನಿಗೆ ಹಿಂದಿರುಗಲು ದಂಡನಾಯಕರ ಆಜ್ಞೆಯು ಲಭಿಸಿದುದನ್ನು ಕಂಡು ಭಯಂಕರವಾದ ಸಮರದಿಂದ ಬೆಂಡಾದ ಸೈನಿಕರ ಹೃದಯಗಳಲ್ಲಿ ಹರ್ಷವು ಬೆಳಗಿತು. ಪ್ರತಿಯೊಬ್ಬರೂ ಪ್ರಯಾಣಕ್ಕೆ ಬೇಕಾದ ಸಿದ್ಧತೆಪಡಿಸತೊಡಗಿದರು ಈಟಿ, ಭಲ್ಲೆ, ಕಠಾರ, ಖಡ್ಗ ಮೊದಲಾದ ಆಯುಧಗಳನ್ನು ಕಟ್ಟು ಕಟ್ಟತೊಡಗಿದರು. ರಕ್ತದಿಂದ ತೊಯ್ದು ಹೋದ ತಮ್ಮ ವಸ್ತ್ರಗಳನ್ನು ಕ್ಷಾಲಿಸಿ ಶುಭ್ರ ಮಾಡಿದರು. ಸತ್ತುಹೋದ ಗೆಳೆಯರನ್ನು ಅವರು ಸ್ಮರಿಸಿದರು.

ದಂಡು ತನ್ನ ಪಾಳಯಗಳನ್ನು ಕಿತ್ತು ಯುದ್ಧರಂಗದಿಂದ ತನ್ನ

ಪ್ರಯಾಣವನ್ನು ಬೆಳೆಸಿತು; ಸಾವಿರಾರು ಮಂದಿ ಯಾತ್ರೆ ಮಾಡುವುದೆಂದರೆ, ಅದೊಂದು ಆಶ್ಚರ್ಯಕರವಾದ ದೃಶ್ಯವು! ಅನೇಕ ಹುದ್ದಾರಿಗಳ ಉದ್ದವಿರುವ ಒಂದೊಂದು ಸಾಲುಗಳಾಗಿ ಭಟರು ಒಬ್ಬರ ಹಿಂದೆ ಒಬ್ಬರು ನಡೆದರು. ಹಯ ಮೊದಲಾದ ವಾಹನಗಳ, ಕಾಲಾಳುಗಳ ಚಲನದಿಂದ ಎದ್ದ ಕೆಂಧೂಳು ಹಲವು ಹರದಾರಿಗಳ, ವರೆಗೆ ಗಗನದಲ್ಲಿ ವ್ಯಾಪಿಸಿತು ಈ ಧೂಳಿನ ರಾಶಿಯನ್ನು ದೂರದಿಂದಲೇ ಕಂಡು ಪ್ರಚಂಡವಾದ ಸೇನೆಗಳು ಬರುತ್ತಿವೆ, ಎಂಬ ಸೂಚನೆ ಯನ್ನು ದೂರದಲ್ಲಿರುವ ಹಳ್ಳಿವಾಸಿಗಳಿಗೆ ನೀಡುತ್ತಿತ್ತು.

ಈ ರೀತಿ ಪಯಣವು ಮುಂದುವರಿದಿತು; ನಾಲ್ಕಾರು ದಿನಗಳು ಕಳೆ ಯಲು ಒಂದು ನದಿಯ ತೀರಕ್ಕೆ ದಂಡು ಮುಟ್ಟಿತು. ನದಿಯನ್ನು ಕಂಡೊಡ ನೆಯೇ ತಮ್ಮ ಗೂಡಾರಗಳನ್ನು ಹೊಡೆದು ಸೈನಿಕರು ತಮ್ಮ ಆ ದಿನದ ಪಯಣವನ್ನು ನಿಲ್ಲಿಸಿದರು. ನದಿಯ ತಿಳಿಯಾದ ನೀರಿನಲ್ಲಿ ಸ್ನಾನವನ್ನು ಮಾಡಿ ತಮ್ಮ ಆ ದಿನದ ಆಯಾಸವನ್ನು ಅವರು ಪರಿಹರಿಸಿಕೊಂಡರು. ಕೆಲ ವರು ತಮ್ಮ ಆಹಾರಗಳನ್ನು ಪಾಕಮಾಡಲು ಪ್ರಾರಂಭಿಸಿದರು. ಇನ್ನು ಕೆಲ ವರು ನದಿಯ ತೀರದಲ್ಲಿ ಕುಳಿತು ಸ್ವೈರ ಸಲ್ಲಾಪಗಳನ್ನು ಮಾಡತೊಡಗಿ ದರು. ಅಂತು ಭಟರೆಲ್ಲರೂ ತಮಗೆ ಉಚಿತವೆಂದು ತೋರಿದ ರೀತಿಯಲ್ಲಿ ನದಿಯ ತೀರದಲ್ಲಿ ಕಾಲಹರಣ ಮಾಡಲು ಪ್ರಾರಂಭಿಸಿದರು

ಚಂದ್ರಹಾಸನಾದರೂ ಭುವನವಿಕ್ರಮನೊಡನೆ ನದಿಯ ದಂಡೆಯಲ್ಲಿ ಹಲವು ವಿನೋದಗಳನ್ನಾಡುತ್ತ ಸಂಚರಿಸಲಾರಂಭಿಸಿದನು. ಅವರು ಹಾಸ್ಯ ಪ್ರಧಾನವಾದ ಮಾತುಗಳಿಗಾರಂಭಿಸಿದ್ದರೂ ಅದು ಅಂತ್ಯದಲ್ಲಿ ಕುಂತಳದ ರಾಜಕಾರಣದಲ್ಲಿ ಸಮಾಪ್ತಿಯನ್ನು ಹೊಂದಿತು. ದುಷ್ಟಬುದ್ಧಿಯ ಕಪಟ ಕಾರಸ್ಥಾನವನ್ನು ದೂಷಿಸುತ್ತಲೂ, ಅದನ್ನು ನಿವಾರಿಸುವ ಬಗೆಯನ್ನು ಚಿಂತಿಸುತ್ತಲೂ ಅವರಿಬ್ಬರು ಹೊತ್ತನ್ನು ಕಳೆದರು. ಈ ರೀತಿ ಸಂಚರಿಸು ತ್ತಿರುವಾಗ ಒಂದು ಹುಲ್ಲುಗಾವಲು ಅವರಿಗೆ ಗೋಚರವಾಯಿತು. ಗೆಳೆಯ ರಿಬ್ಬರೂ ಅಲ್ಲಿಗೆ ತೆರಳಿ ಮೃದುವಾದ ಹುಲ್ಲುರಾಶಿಗಳ ಮೇಲೆ ಆಸೀನರಾದರು.

ಭುವನ ವಿಕ್ರಮನು ಚಂದ್ರಹಾಸನಿಗಿಂತ ಎರಡು ಮೂರು ವರ್ಷಗಳಿಗೆ ದೊಡ್ಡವನು. ಅವನು ಸುಂದರನೂ ಗುಣಾಢ್ಯನೂ ಆಗಿದ್ದನು. ಅವನು ಚಂದ್ರ ಹಾಸನಂತೆಯೇ ರಣಧೀರನಾಗಿದ್ದನು. ಅವನೆಂದರೆ ಕುಂತಳದ ಸೈನಿಕರ ಹೃದಯದಲ್ಲಿ ಹೊಸ ಆವೇಶವು ಹುಟ್ಟುತ್ತಿತ್ತು ಇಂಥ ಒಬ್ಬ ವೀರ ತರು ಣನು ಚಂದ್ರಹಾಸನ ಗೆಳೆಯನಾದುದರಲ್ಲಿ ಅತಿಶಯವೇನೂ ಇಲ್ಲ. ಚಂದ್ರ ಹಾಸನ ಗುಣಗಳಿಗೂ ಪರಾಕ್ರಮಕ್ಕೂ ಭುವನವಿಕ್ರಮನು ಮನಸೋತಿ

ದ್ದನು. ಕುಳಿಂದದ ಭಾವೀ ಮಾಂಡಲಿಕನ ಪರಿಚಯವು ಲಭಿಸಿದುದರಿಂದ ಅವನು ತಾನು ಭಾಗ್ಯಶಾಲಿಯಾದೆನೆಂದು ಭಾವಿಸುತ್ತಲಿದ್ದನು.

"ಅಮಾತ್ಯನಂದಿನಿಯ ಪರಿಸ್ಥಿತಿಯೇನೆಂಬುದು ತಿಳಿಯಲಿಲ್ಲವಲ್ಲ!" ಎಂದನು ಭುವನವಿಕ್ರಮನು.

"ನಾಗರಾಜನ ಸಹಾಯದಿಂದ ಅವಳು ಈ ಗಂಡಾಂತರದಿಂದ ಪಾರಾಗಿರಬಹುದು." ಎಂದು ಆ ಸಂಗತಿಯಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರಿಸದೆ ಚಂದ್ರಹಾಸನು ನುಡಿದನು.

"ಅಮಾತ್ಯನಂದಿನಿಯಲ್ಲಿ ತಮಗೆ ಆಸಕ್ತಿಯಿಲ್ಲವೆಂದು ತೋರುತ್ತದೆ."

"ಊಂ ಹೂಂ-ಇಲ್ಲವೆಂದೇ ಹೇಳಬಹುದು."

"ಮಾಂಡಲಿಕರೇ, ಅಮಾತ್ಯನಂದಿನಿಯ ಮೇಲೆ ತಾವು ದಯಾಪೂರ್ಣರಾಗಬೇಕು" ಎಂದು ಮಂದಹಾಸವೊಂದನ್ನು ಬೀರುತ್ತ ಭುವನವಿಕ್ರಮನಂದನು.

"ಏನು ದಯೆ?"

"ತಮ್ಮ ಹೃದಯದಲ್ಲಿ ಅವಳಿಗೊಂದು ಸ್ಥಾನವನ್ನು ನೀಡತಕ್ಕದ್ದು; ಅವಳಂತೂ ನಿಮ್ಮನ್ನೇ ಪ್ರಾಣೇಶ್ವರರನ್ನಾಗಿ ಸ್ವೀಕರಿಸಿದ್ದಾಳೆ! ಉತ್ತಮ ಗುಣಗಳ ಕಡಲೆಂದರೆ ಅವಳೇ ಸರಿ; ಅವಳಷ್ಟು ಗುಣಪರಿಪೂರ್ಣಳಾದ ಲಲನೆಯು ಬೇರೊಬ್ಬಳು ಕುಂತಳದಲ್ಲಿ ಇಲ್ಲ"

"ಆದರೆ" "ಏಕೆ, ಆದರೆ ಎಂದು ಹೇಳಿ ನಿಲ್ಲಿಸಿದಿರಿ?"

"ನನ್ನ ಹೃದಯವನ್ನು ಬೇರೊಬ್ಬಳಿಗೆ ನೀಡಿರುವೆನು!"

"ತಾವು ಬೇರೊಬ್ಬಳಿಗೆ ಹೃದಯವನ್ನು ನೀಡಿರುವಿರಾ? ಅವಳಾರು?"

"ಅಹುದು, ಅವಳ ಹೆಸರನ್ನೇ ನಾನು ಸದಾ ಸ್ಮರಿಸುತ್ತಿರುವೆನು; ಅವಳಿಲ್ಲದಿದ್ದರೆ ನನ್ನ ಬಾಳು ವ್ಯರ್ಥವಾಗುವದೆಂದು ನನ್ನ ನಂಬಿಕೆ!"

"ತಮ್ಮ ಹೃದಯವನ್ನು ಸೂರೆ ಮಾಡಿದ ಆ ಕಾಮಿನಿಯು ಯಾರು?"

"ತಮಗೆ ತಿಳಿದಿರಲೇ ಬೇಕೆ?"

"ತಮ್ಮ ಗೆಳೆಯನೊಡನೆ ಅದನ್ನು ಮರೆಮಾಜುವದೇಕೆ?"

"ಇಲ್ಲ, ನಾನು ಹೇಳುವೆನು. ಅವಳು ರಾಜನಂದಿನಿ!"

"ಯಾರು, ಕುಂತಳ ರಾಜನಂದಿನಿ, ಚಂಪಕಮಾಲಿನಿಯೇ!" ಎಂದನು ಭುವನವಿಕ್ರಮನು ವಿಸ್ಮಯದಲ್ಲಿ. "ಹೂಂ-ಅಹುದು!"

ಆತನು ಈ ಮಾತುಗಳನ್ನು ಮುಗಿಸಲಿಲ್ಲ. ಅಷ್ಟರಲ್ಲಿ ಹತ್ತೆಂಟು ಮಂದಿ ಭೀಮಕಾಯರು ಬಂದು ಚಂದ್ರಹಾಸನ ಕೊರಳನ್ನು ಹಿಡಿದರು. ಅವನಿಗೆ

ಅವನಿಗೆ ತಿರುಗಿ ನೋಡಲು ಅವಕಾಶವಿಲ್ಲ ಅವನ ಕೈಕಾಲುಗಳನ್ನು ಕ್ಷಣಾರ್ಧದಲ್ಲಿ ಬಂಧಿಸಿದರು ಅವನಿಗೆ ತನ್ನ ಹತ್ತಿರವಿದ್ದ ಖಡ್ಗವನ್ನು ಸಹ ತೆಗೆದುಕೊಳ್ಳಲು ಅವಕಾಶ ದೊರೆಯಲಿಲ್ಲ. ಅನಿರೀಕ್ಷಿತವಾಗಿ ಬಂದ ಈ ಅತ್ಯಾಪತ್ತನ್ನು ಕಂಡು ತಾನೇನು ಮಾಡಬೇಕೆಂದು ತಿಳಿಯದೆ ಭುವನವಿಕ್ರಮನು ದಿಙ್ಮೂಢನಾಗಿ ಹೋದನು; ಆದರೆ ಈ ಅವಸ್ಥೆಯಲ್ಲಿ ಅವನು ಬಹಳ ಹೊತ್ತಿರಲಿಲ್ಲ. ತನ್ನ ಕತ್ತಿಯನ್ನು ತೆಗೆದುಕೊಂಡು ಅಕ್ರಮಿಗಳ ಸಂಗಡ ಹೋರಾಡುವುದಕ್ಕಾಗಿ ಅವನು ಎದ್ದುನಿಂತನು; ಆದರೆ ನಾಲ್ಕೈದು ಮಂದಿ ಅಕ್ರಮಿಗಳು ಅವನ ಮೇಲೆ ಬಿದ್ದು ಕತ್ತಿಯನ್ನು ಕಸಿದುಕೊಂಡರು. ಅಕ್ರಮಿಗಳು ಅವನನ್ನೂ ಬಂಧಿಸಿ ಎಳೆದೊಯ್ಯತಕ್ಕವರೇ ಆಗಿದ್ದರು

"ಗೆಳೆಯ, ಸೇನಾಪತಿ! ಇದೇನು ವಿಪತ್ತು? ಇವರೇಕೆ ನನ್ನನ್ನು ಬಂಧಿಸುತ್ತಲಿರುವರು?" ಎಂದು ತನ್ನ ದೇಹದ ಕಟ್ಟುಗಳನ್ನು ಬಿಡಿಸಿಕೊಳ್ಳಲು ಪ್ರಯತ್ನಿಸುತ್ತ ಚಂದ್ರಹಾಸನು ನುಡಿದನು.

"ಮಾಂಡಲಿಕರೇ, ಇದು ಶತ್ರುಗಳ ಭಯಂಕರ ತಂತ್ರವಾಗಿರಬಹುದು; ತಮ್ಮಂತೆಯೇ ನಾನಾದರೂ ಬಂಧನಕ್ಕೆ ಒಳಗಾದವನಿರುತ್ತೇನೆ. ಹತ್ತಿರ ದಂಡಾಳುಗಳು ಯಾರೂ ಇಲ್ಲವಲ್ಲ!" ಎಂದು ಹತಾಶನಾಗಿ ಭುವನವಿಕ್ರಮನು ನುಡಿದನು.

ಅಸಹಾಯ ಶೂರನಾದ ಚಂದ್ರಹಾಸ, ಲಾಟರ ಹೃದಯಗಳನ್ನು ತನ್ನ ಪರಾಕ್ರಮದಿಂದ ಬಿರಿಯುವಂತೆ ಮಾಡಿದ ಆ ಧೀರ ಪುರುಷ, ದುಷ್ಟರ ಕರಗಳಲ್ಲಿ ಸಿಲುಕಿ ಸಹಾಯವಿಲ್ಲದೆ ನರಳುತ್ತಿರುವನು. ಮಾಡುವುದೇನು?

"ನೀವು ಯಾರು? ನನ್ನನ್ನೇಕೆ ಬಂಧಿಸುತ್ತಿದ್ದೀರಿ?' ಎಂದು ಚಂದ್ರಹಾಸನು ಅಕ್ರಮಿಗಳನ್ನು ಪ್ರಶ್ನಿಸಿದನು.

"ನಾವು ಯಾರೆಂಬುದು ನಿಮಗೆ ಆ ಮೇಲೆ ತಿಳಿಯುವುದು" ಇದು ಆ ದುಷ್ಟರಿಂದ ಲಭಿಸಿದ ಉತ್ತರವು!

"ನನ್ನನ್ನೇಕೆ ಈ ರೀತಿ ಬಂಧಿಸಿದಿರಿ?"

"ನೀವು ಗೈದ ಅಪಕಾರಕ್ಕೆ!" ಎಂದು ಉಗ್ರಸ್ವರೂಪಿಯಾದ ಘಾತುಕನೊಬ್ಬನು ನುಡಿದನು.

ಇಷ್ಟರಲ್ಲಿ ಮೈದಾನದಲ್ಲಿ ಆಯುಧಪಾಣಿಗಳಾದ ಹಲವು ಮಂದಿ ಭಟರು ಬರುತ್ತಿರುವದನ್ನು ಘಾತುಕರು ವೀಕ್ಷಿಸಿದರು. ಭುವನವಿಕ್ರಮನನ್ನು ಅಲ್ಲಿಯೇ ತ್ಯಜಿಸಿ, ಅವರು ಚಂದ್ರಹಾಸನನ್ನು ಹೊತ್ತುಕೊಂಡು ಫಲಾಯನ ಮಂತ್ರವನ್ನು ಪಠಿಸಿದರು. ಆ ಭಟರು ಕುಂತಳ ದಂಡಿನ ಪಾಳಯದಿಂದ

ಬಂದವರಾಗಿದ್ದರು. ಅವರು ಆ ಆಕ್ರಮಿಗಳನ್ನು ಹಿಂಬಾಲಿಸಿ ಚಂದ್ರಹಾಸನನ್ನು ಭಂಧವಿಮುಕ್ತನನ್ನಾಗಿ ಮಾಡಲು ಯತ್ನಿಸಿದರು; ಆದರೆ ಅವರ ಉದ್ಯಮವು ಫಲಕಾರಿಯಾಗಲಿಲ್ಲ. ಸೈನಿಕರು ಅಲ್ಲಿಗೆ ತಲುಪುವದಕ್ಕೆ ಮುಂಚೆಯೇ ಸ್ವಲ್ಪ ದೂರದಲ್ಲಿ ಒಂದು ಮರಡಿಯಲ್ಲಿ ತಮ್ಮ ಕುದುರೆಗಳ ಮೇಲೇರಿ ಆ ದುಷ್ಟರು ಮಾಯವಾದರು. ಅವರು ಅತ್ಯಂತ ವೇಗವಾಗಿ ತೆರಳಿದುದರಿಂದ, ಸೈನಿಕರಿಗೆ ಅವರನ್ನು ಹಿಂಬಾಲಿಸಲು ಸಾಧ್ಯವಾಗಲಿಲ್ಲ ಅವರೊಡನೆ ಬಂದಿದ್ದ ಒಬ್ಬ ತರುಣನು ನುಡಿದನು: "ನಾವು ಅವರನ್ನು ಹಿಂಬಾಲಿಸಿ ಪ್ರಯೋಜನವಿಲ್ಲ ಕುಳಿಂದ ಕುಲಚಿತ್ರಭಾನುವಿಗೆ ಪ್ರಾಣಾಪಾಯಕ್ಕೆ ಎಡೆಯಿಲ್ಲ. ಆದುದರಿಂದ ನಾವು ಹಿಂದಿರುಗುವುದೇ ಒಳ್ಳೆಯದು"

ಭಟರಿಗಾದರೂ ಇದು ಸಮಂಜಸವಾಗಿ ತೋರಿತು ಅವರು ಆ ಹೊಸ ತರುಣನೊಡನೆ ತಮ್ಮ ಗೂಡಾರಗಳಿಗೆ ಹಿಂದಿರುಗಿದರು. ಭುವನವಿಕ್ರಮನಿಗೆ ಸೈನಿಕರ ಸಹಾಯವು ಲಭಿಸಿದುದರಿಂದ ಆಕ್ರಮಿಗಳ ಬಂಧನಕ್ಕೆ ಸಿಲುಕದೆ ಪಾರಾದನು; ಆದರೆ ತನ್ನ ಆಪ್ತನಾದ ಚಂದ್ರಹಾಸನು ಸಿಲುಕಿದ ವಿಪತ್ತು ಅವನಲ್ಲಿ ಗಾಢವಾದ ಶೋಕವು ಸಂಜಾತವಾಗುವಂತೆ ಮಾಡಿತು. ಸಮರಾಂಗಣದಲ್ಲಿ ಶತ್ರುಗಳ ಕರದಿಂದ ತಮ್ಮ ಪ್ರಾಣಗಳನ್ನು ರಕ್ಷಿಸಿದ ವೀರಕುಳಿಂದ ರಾಜಪುತ್ರನಿಗೆ ತನ್ನಿಂದ ಕಿಂಚಿತ್ತಾದರೂ ಉಪಕಾರವನ್ನು ಮಾಡಲು ಸಾಧ್ಯವಾಗಲಿಲ್ಲವೆಂಬ ಚಿಂತೆಯು ಅವನ ಮನೋಮಂಡಲವನ್ನು ಆವರಿಸಿತು. ಆತನು ಮೌನದಲ್ಲಿ ತನ್ನ ಶಿರವನ್ನು ತಗ್ಗಿಸಿಕೊಂಡು ಗೂಡಾರಕ್ಕೆ ತೆರಳಿದನು.

ಭಟರು ಹಿಂದಿರುಗಿ ಬಂದೊಡನೆಯೇ ದಂಡನಾಯಕನಾದ ಮಾರ್ತಂಡವರ್ಮನು "ಚಂದ್ರಹಾಸನೆಲ್ಲಿ?" ಎಂದು ಉತ್ಕಂಠೆಭರಿತನಾದ ಸ್ವರದಲ್ಲಿ ಪ್ರಶ್ನಿಸಿದನು.

"ಘಾತುಕರು ಬಂಧಿಸಿ ಒಯ್ದರು!" ಎಂದು ನಿರಾಶಾಭರಿತವಾದ ಸ್ವರದಲ್ಲಿ ಭಟರ ಪ್ರತ್ಯುತ್ತರವು ಹೊರಟಿತು.

ಆ ವೃದ್ಧ ಸೇನಾಪತಿಯ ಮುಖವು ಚಿಂತಾಮಗ್ನವಾಯಿತು; ಶೋಕವನ್ನು ಸೂಚಿಸುವ ಹಲವು ಗೆರೆಗಳು ಆ ವಿಶಾಲವಾದ ಲಲಾಟದಲ್ಲಿ ತೋರಿಬಂದುವು. ಚಂದ್ರಹಾಸನ ಮೇಲೆ ಆ ವೃದ್ಧ ದಂಡನಾಯಕನಿಗೆ ಅಪಾರವಾದ ಮಮತೆಯಿದ್ದಿತು. ಚಂದ್ರಹಾಸನ ನಗುಮೊಗವು, ಅವನ ಧೀರೋದಾತ್ತಸ್ವಭಾವವು ಆ ವೃದ್ಧನ ಮನಸ್ಸನ್ನು ಆಕರ್ಷಿಸಿ, ಪರಾಧೀನ ಮಾಡಿದ್ದವು. ಇದಲ್ಲದೆ ರಣಭೂಮಿಯಲ್ಲಿ ಕುಂತಳಸೇನೆಯ ವಿಜಯಕ್ಕೆ ಕಾರಣಭೂತನು ಚಂದ್ರಹಾಸನೇ ಎಂಬುದನ್ನು ಮಾರ್ತಂಡವರ್ಮನು ಮರೆತಿರಲಿಲ್ಲ.

ಭುವನವಿಕ್ರಮನೂ ಮಾರ್ತಂಡವರ್ಮನೂ ಮುಂದೇನು ಮಾಡಬೇಕೆಂಬುದನ್ನು ತಿಳಿಯದೆ ಚಿಂತಾಮಗ್ನರಾದರು. ಚಂದ್ರಹಾಸನಿಲ್ಲದೆ ರಾಜಧಾನಿಗೆ ತೆರಳುವುದು ಹೇಗೆ? ಅಮಾತ್ಯನು ಸಿಂಹಾಸನವನ್ನು ಆಕ್ರಮಿಸಿರುವ ಈ ಸಂದರ್ಭದಲ್ಲಿ ಚಂದ್ರಹಾಸನ ಸಹಾಯವು ಅತ್ಯಾವಶ್ಯಕವೆಂಬುದನ್ನು ಅವರು ಚನ್ನಾಗಿ ಅರಿತಿದ್ದರು. ಎಲ್ಲರೂ ಮಾರ್ತಂಡವರ್ಮನ ಗೂಡಾರದಲ್ಲಿ ನೆರೆದು ಮುಂದೇನು ಮಾಡಬೇಕೆಂದು ಆಲೋಚಿಸಲಾರಂಭಿಸಿದರು. ಯಾರ ವದನಮಂಡಲಗಳಿಂದಲೂ ನುಡಿಗಳು ಹೊರಬೀಳುವಂತಿರಲಿಲ್ಲ.

“ಅಮಾತ್ಯನ ತಂತ್ರಗಳ ಬಲೆಯು ಇಲ್ಲಿಗೂ ವ್ಯಾಪಿಸತೊಡಗಿತು!” ಎಂದು ಭುವನವಿಕ್ರಮನು ಮೌನವನ್ನು ಭಂಜಿಸಿದನು

“ಹೂಂ!” ಎಂದು, ಏನೆಂದು ಕೇಳುವ ಅರ್ಥದಲ್ಲಿ ಮಾರ್ತಂಡವರ್ಮನು ತನ್ನ ಕಣ್ಣುಗಳನ್ನು ಹೊರಳಿಸಿದನು.

“ಚಂದ್ರಹಾಸನ ಬಂಧನದಲ್ಲಿ ದುಷ್ಟಬುದ್ಧಿಯ ಕರವಾಡವಿದೆ!”

“ಇಲ್ಲವೆನ್ನುವದಿಲ್ಲ; ಕಾರಣ?”

“ತನ್ನ ಪ್ರಬಲನಾದ ಶತ್ರುವು ಕುಳಿಂದನಂದನನೆಂದು ಅಮಾತ್ಯನು ಭಾವಿಸಿರುವನು”

“ಅದನ್ನು ನೀನು ಹೇಗೆ ಅರಿತೆ?” ಎಂಬುದಾಗಿ ಜಿಜ್ಞಾಸಭರಿತನಾದ ವೃದ್ಧದಳಪತಿಯು ಪ್ರಶ್ನಿಸಿದನು.

“ಸೇನಾಪತಿಗಳೇ! ಕುಂತಳಸಿಂಹಾಸನದ ಆಧಾರಸ್ತಂಭಗಳೇ! ಗತಿಸಿದ ಸಂಗತಿಗಳನ್ನು ಕುರಿತು ವಿವೇಚಿಸುತ್ತ ಕುಳಿತುಕೊಳ್ಳುವ ಸಮಯವು ಇದಲ್ಲ. ಕುಂತಳಸಿಂಹಾಸನವು ಅಡಿಮೇಲಾಗುವ ಸಂದರ್ಭವು ಬಂದೊದಗಿದೆ! ರಾಜಭಕ್ತರು ಈಗ ರಾಜನನ್ನು ಬಂಧನದಿಂದ ರಕ್ಷಿಸಿ, ಸಿಂಹಾಸನವನ್ನು ಕಾಯಬೇಕಾಗಿದೆ ಕುಳಿಂದ ರಾಜಪುತ್ರರು ಅಮಾತ್ಯರ ಕಾರಸ್ಥಾನದ ಫಲವಾಗಿ ಇಂದು ಬಂಧನಕ್ಕೆ ಒಳಗಾಗಿರುವರು. ಅಮಾತ್ಯರ ತಂತ್ರಗಳನ್ನು ಬೈಲಿಗೆಳೆದು ಅಧಿಕಾರಭ್ರಷ್ಟರನ್ನಾಗಿ ಮಾಡುವದು ನಮ್ಮೆಲ್ಲರ ಕರ್ತವ್ಯವು!” ಎಂಬ ಆವೇಶಪರಿಪೂರ್ಣವಾದ ನುಡಿಗಳು ಮಾರ್ತಂಡವರ್ಮನ ಕರ್ಣೇಂದ್ರಿಯಗಳಲ್ಲಿ ಪತಿಸಿದುವು.

ಮಾರ್ತಂಡವರ್ಮನು ತನ್ನ ಶಿರಸ್ಸನ್ನು ಎತ್ತಿನೋಡಿದನು ಅತ್ಯಂತ ತೇಜಸ್ವಿಯಾದ ತರುಣನೋರ್ವನು ನಿಂತಿರುವದು ದಂಡನಾಯಕನಿಗೆ ಗೋಚರವಾಯಿತು. ಅವನೊಬ್ಬ ಅಪರಿಚಿತನು; ತನ್ನೊಡನೆ ಇಷ್ಟು ಧೈರ್ಯದಿಂದ ಮಾತಾಡಿದ ತರುಣನು ಯಾರೆಂಬುದನ್ನು ತಿಳಿಯಲು ಕುತೂ

ಹಲನಾಗಿ “ನೀನು ಯಾರು?” ಎಂದು ಮಾರ್ತಂಡವರ್ಮನು ಪ್ರಶ್ನಿಸಿದನು.

“ಇವರೇ ಕುಳಿಂದ ಮಾಂಡಲಿಕರಿಗೆ ಬಂದೊದಗಿದ ವಿಪತ್ತಿನ ಸೂಚನೆಯನ್ನು ಕೊಟ್ಟು ನಮ್ಮನ್ನು ಕಳುಹಿದವರು” ಎಂದು ಒಬ್ಬ ಭಟನು ನುಡಿದನು: “ಆದರೆ ನಾವು ತೆರಳಲು ಸ್ವಲ್ಪ ವಿಳಂಬವಾದುದರಿಂದ ಈ ಅನರ್ಥವು ಬಂದೊದಗಿತು”

“ಶತ್ರುಗಳಿಂದ ಬಂದ ವಿಪತ್ತನ್ನು ಸೂಚಿಸಿದ ನೀನು ನಮ್ಮ ಹಿತಕಾಂಕ್ಷಿಯಾಗಿರುವೆಯೆಂಬುದರಲ್ಲಿ ಸಂದೇಹವಿಲ್ಲ!” ಎಂದನು ಮಾರ್ತಂಡವರ್ಮನು: “ನೀನು ಯಾರೆಂಬುದನ್ನು ನಮಗೆ ಅರುಹುವದರಿಂದ ಯಾವ ಪ್ರಮಾದವೂ ಸಂಭವಿಸಲಾರದು.”

“ನನ್ನ ಹೆಸರು ವಿಶ್ವಜಿತ್ತು!” ಎಂದು ಒಂದು ಎಳೆ ನಗೆಯನ್ನು ಬೀರುತ್ತ ತರುಣನು ನುಡಿದನು: “ಇಲ್ಲಿ ಕುಳಿಂದ ರಾಜಕುಮಾರರಿಗೆ ಬಂದೊದಗಬಹುದಾದ ವಿಪತ್ತಿನ ಸುಳಿವು ಹತ್ತಿದೊಡನೆಯೇ ಅದನ್ನು ಅರುಹುವುದಕ್ಕಾಗಿ ನಾನು ರಾಜಧಾನಿಯಿಂದ ಹೊರಟೆನು.”

“ನೀನು ಬರುವದು ರಾಜಧಾನಿಯಿಂದಲೇನು?” “ಹೌದು!”

“ಹಾಗಾದರೆ ರಾಜಧಾನಿಯ ಸ್ಥಿತಿ-ಗತಿಗಳನ್ನು ಅರುಹಬಲ್ಲೆಯಾ?”

“ಅಮಾತ್ಯರ ಶಾಸನವು ರಾಜಧಾನಿಯಲ್ಲಿ ನಿರಂಕುಶವಾಗಿ ಸಾಗುತ್ತಿದೆ!” ಎನ್ನುತ್ತ, ವಿಶ್ವಜಿತ್ತು ಅಮಾತ್ಯನ ರಾಜ್ಯಭಾರಕ್ರಮಗಳನ್ನು ವಿವರಿಸಿ ಹೇಳಿದನು.

“ನಿನ್ನ ನುಡಿಗಳಿಂದ ನೀನು ಕುಂತಳ ರಾಜವಂಶದ ಪಾಲನೆಗಾಗಿ ಯತ್ನಿಸುತ್ತಿರುವಿಯೆಂಬುದು ವ್ಯಕ್ತವಾಗುತ್ತದೆ. ನಿನ್ನ ಪರಿಚಯವನ್ನು ಸ್ವಲ್ಪ ಹೆಚ್ಚಾಗಿ ನೀಡುವದರಿಂದ ಪ್ರಮಾದವಾಗಲಾರದು.”

“ಸೇನಾಪತಿಗಳೇ! ಕ್ಷಮಿಸಿರಿ! ಸಮಯ ಬಂದಾಗ ನಾನಾರೆಂಬುದು ತಾನಾಗಿಯೇ ಪ್ರಕಾಶಕ್ಕೆ ಬರುವದು. ಕುಂತಳ ರಾಜಸಿಂಹಾಸನ ಸೇವೆಯಿಂದ ನನ್ನ ಉದ್ದೇಶವನ್ನೂ ನಾನಾರೆಂಬುದನ್ನೂ ವ್ಯಕ್ತಪಡಿಸುವೆನು ಅದಕ್ಕೆ ಮುಂಚೆಯೇ ಬಹಿರಂಗಪಡಿಸುವದರಿಂದ ಹಲವು ಪ್ರಮಾದಗಳು ಸಂಭವಿಸಬಹುದು! ನಾನು ಒಬ್ಬ ವಿಶ್ವಸ್ಥರಾಜಭಕ್ತನೆಂಬುದನ್ನು ನಂಬಿರಿ!”

“ನಿನಗೆ ಇಷ್ಟವಿಲ್ಲದಿದ್ದರೆ ಅದನ್ನು ಕುರಿತು ನಾನು ನಿರ್ಬಂಧಿಸುವದಿಲ್ಲ; ಚಂದ್ರಹಾಸನಂಥ ತರುಣನು ವಿಪತ್ತಿಗೊಳಗಾದುದನ್ನು ನೋಡಿ ನನಗೆ ಬಹಳ ಸಂಕಟವಾಗುತ್ತಿರುವದು. ಅವನ ಮೋಚನೆಗಾಗಿ ಏನು ಮಾಡಬೇಕೆಂಬುದು ನನಗೆ ತಿಳಿಯದಾಗಿದೆ”

"ಕುಳಿಂದಕುಲ ಚಿತ್ರಭಾನುವನ್ನು ಕುರಿತು ತಾವು ಚಿಂತಿಸಬೇಕಾದುದಿಲ್ಲ; ಅವನು ಬಂಧನಕ್ಕೊಳಗಾಗಿದ್ದರೂ ಯಾವ ಅಪಾಯವೂ ಸಂಭವಿಸಲಾರದು, ಎಂಬ ನಂಬಿಕೆಯು ನನಗಿದೆ." ಎಂದನು ವಿಶ್ವಜಿತ್ತು.

ವಿಶ್ವಜಿತ್ತು, ಇದನ್ನೆಲ್ಲ ನೀನು ಹೇಗೆ ಅರಿತೆ?"

"ಅಮಾತ್ಯನ ಕಾರಸ್ಥಾನದ ಪ್ರತಿಯೊಂದು ರಹಸ್ಯವನ್ನೂ ನಾನು ಬಲ್ಲೆನು. ಕುಂತಳೇಂದ್ರನು ಎಲ್ಲಿ ಬಂಧನಕ್ಕೊಳಗಾಗಿ ನರಳುತ್ತಿರುವನೆಂಬುದನ್ನೂ ಅರಿತಿರುವನು."

"ಈ ಮಾತುಗಳನ್ನು ಕೇಳಿ, ವೃದ್ಧ ಸೇನಾಪತಿಯ ಆಶ್ಚರ್ಯವು ಹೆಚ್ಚಿತು. ವಿಶ್ವಜಿತ್ತು ಒಬ್ಬ ಸಾಮಾನ್ಯ ತರಗತಿಯ ಮನುಷ್ಯನಲ್ಲವೆಂಬುದು ಹೊಳೆದಿತು. ಆ ತರುಣನ ರಾಜನಿಷ್ಠೆಯನ್ನು ವೀಕ್ಷಿಸಿ, ಅವನಲ್ಲಿ ಅಸಾಮಾನ್ಯ ಸ್ನೇಹವು ಜನಿಸಿತು. ಅದರೊಂದಿಗೇ ತಾನು ದಂಡಿನೊಡನೆ ರಾಜಧಾನಿಗೆ ತೆರಳಿ, ಸಿಂಹಾಸನವನ್ನು ಪಾಲಿಸಬೇಕೆಂಬ ಕರ್ತವ್ಯಬೋಧವೂ ಸಂಜಾತವಾಯಿತು ಅಪರಿಚಿತನಾದ ಒಬ್ಬ ಯಃಕಶ್ಚಿತ್ ತರುಣನು-ವಿಶ್ವಜಿತ್ತು-ಸಿಂಹಾಸನದ ಪಾಲನೆಗಾಗಿ ಬದ್ಧಕಂಕಣವನ್ನು ಧರಿಸಿ, ಆ ಉದ್ಯಮಗಳಲ್ಲಿ ನಿರತನಿರುವಾಗ ತಾನು-ಕುಂತಳದ ಸೇನಾಪತಿಯು-ಆಲಸನಾಗಿರುವದೆಂದರೆ, ಅದೊಂದು ಮಹತ್ತಾದ ಕರ್ತವ್ಯಲೋಪವೆಂದು ಅವನಿಗೆ ಕಂಡುಬಂದಿತು ಅವನ ಧಮನಿಗಳಲ್ಲಿ ಸ್ವಾಮಿನಿಷ್ಠೆಯು ಹರಿದಾಡಲಾರಂಭಿಸಿತು. ಅವನು ಉಚ್ಚಸ್ವರದಲ್ಲಿ ತನ್ನ ಕೈಕೆಳಗಿನ ದಂಡನಾಯಕರನ್ನು ನೋಡುತ್ತ ಹೀಗೆ ನುಡಿದನು:---"ಗೆಳೆಯರೇ, ಕುಂತಳ ಸಿಂಹಾಸನಕ್ಕೆ ವಿಪತ್ತು ಬಂದೊದಗಿದೆ. ಶತ್ರುಗಳ ಭಯಂಕರವಾದ ಪರಾಕ್ರಮವನ್ನು ಎದುರಿಸಿ ಕುಂತಳ ಸಾರ್ವಭೌಮನ ಕೀರ್ತಿಕೇತುವು ನಭದಲ್ಲಿ ಅತ್ಯುನ್ನತವಾಗಿ ಹಾರಾಡುವಂತೆ ಮಾಡಿದ ನಾವಿಂದು ಗೃಹಚ್ಛಿದ್ರದಿಂದ ನಡುಗುತ್ತಿರುವ ಸಿಂಹಾಸನವನ್ನು ರಕ್ಷಿಸಬೇಕಾಗಿದೆ! ಅಮಾತ್ಯನ ಬಂಧನದಲ್ಲಿ ಬಳಲುತ್ತಿರುವ ಸಾರ್ವಭೌಮರನ್ನು ನಮ್ಮ ಕೆಂಬಣ್ಣದ ನೆತ್ತರನ್ನು ಹರಿಸಿಯಾದರೂ ವಿಮುಕ್ತರನ್ನಾಗಿ ಮಾಡಬೇಕಾಗಿದೆ! ರಣಧೀರರೇ, ಎದ್ದೇಳಿ! ಎದ್ದೇಳಿ!"

ಆವೇಶಪರಿಪೂರ್ಣವಾದ ವೃದ್ಧಸೇನಾಪತಿಯ ಶೌರ್ಯಸಂಜೀವನದಿಂದ ನಿಬಿಡವಾದ ಈ ನುಡಿಗಳು ಅಲ್ಲಿ ನೆರೆದಿರುವ ಜನರ ಹೃದಯಗಳಲ್ಲಿ ಕಲಿತನವು ಸೂಸುವಂತೆ ಮಾಡಿದುವು! ಎಲ್ಲರಲ್ಲಿಯೂ ರಾಜನಿಷ್ಠೆಯ ಕಿಡಿಗಳು ಹೊರಸೂಸಲಾರಂಭಿಸಿದುವು. 'ಕುಂತಳೇಂದ್ರನಿಗೆ ಜಯವಾಗಲಿ!' ಎಂಬ ವೀರನಾದವು ಆಗಸದಲ್ಲಿ ವ್ಯಾಪಿಸಿತು.

## ರಾಜನಂದಿನಿಯು ಅರಮನೆಯಿಂದ ಪಾರಾದಳು.

ತನ್ನ ಕನಕವರ್ಣದ ಕಿರಣಗಳನ್ನು ಹೊರಸೂಸುತ್ತ, ಭಗವಾನ್ ಸೂರ್ಯ ನಾರಾಯಣನು ತನ್ನ ನಗುಮೊಗವನ್ನು ಪ್ರಾಚ್ಯದಿಶೆಯಲ್ಲಿ ತೋರಿಸಿದನು. ಅಂಧಕಾರದಲ್ಲಿ ಕೃಷ್ಣವರ್ಣವನ್ನು ತಾಳಿದ್ದ ತರುಲತಾದಿ ಚಲನಶೂನ್ಯ ಸಸ್ಯ ಜೀವಿಗಳು ಭಾಸ್ಕರನ ಪ್ರಕಾಶದಿಂದ ಬಗೆಬಗೆಯ ಬಣ್ಣಗಳನ್ನು ತಾಳಿ ನೇತ್ರ ಗಳಿಗೆ ಆನಂದವನ್ನು ನೀಡತೊಡಗಿದುವು

ಅರಮನೆಯ ಮಹಡಿಯಲ್ಲಿ ನಿಂತು ಚಂಪಕಮಾಲಿನಿಯು ಆ ಪ್ರಭಾತದ ವೇಳೆಯಲ್ಲಿ ಚಿತ್ರಭಾನುವಿನ ದರ್ಶನವನ್ನು ಹೊಂದುವುದಕ್ಕಾಗಿ ಪ್ರಾಚ್ಯ ದಿಶೆಯನ್ನು ವೀಕ್ಷಿಸಿದಳು. ತನ್ನ ಕಿರಣಗಳನ್ನು ಒಂದೊಂದಾಗಿ ಬೀರುತ್ತ ಪ್ರಾಚ್ಯದಿಶೆಯ ಕಡಲಿನಿಂದ ಶಿರವನ್ನು ಮೇಲಕ್ಕೆತ್ತುತ್ತಿರುವ ವಿಭಾವಸುವಿನ ರೂಪವು ವಿಚಾರಾಂಧಕಾರಾವೃತವಾದ ಅವಳ ಮನೋಮಂಡಲದಲ್ಲಿ ಬೆಳಕನ್ನು ಪಸರಿಸಲು ಪರ್ಯಾಪ್ತವಾಗಲಿಲ್ಲ. ಅವಳು ಅಲ್ಲಿ ಸಂಚರಿಸುತ್ತ, ಭೂತಕಾಲದ ಚಿತ್ರಗಳನ್ನು ಮನೋದರ್ಪಣದಲ್ಲಿ ಅವಲೋಕಿಸಿ, ತನ್ನ ಭಾವೀ ಜೀವನವು ಮಂಗಳಪ್ರದವಾಗಲೆಂದು ಆಶಿಸುತ್ತಿದ್ದಳು. ಎಂದಿಗೂ ಅವಳ ಕನಸುಗಳು ಶುಭಪ್ರದವಾಗಿರಲಿಲ್ಲ. ಶೋಕ, ಭಯ, ಚಿಂತೆ ಇವುಗಳಿಂದ ನಿಬಿಡವಾದ ಆ ಹೆಣ್ಣಿನ ಹೃದಯವು ಶೋಭಾಯಮಾನವಾದ ಭಾವೀ ಜೀವನದ ಚಿತ್ರವನ್ನು ಬರೆಯಲು ಹೇಗೆ ಶಕ್ತವಾಗುವುದು? ಇಲ್ಲ, ಎಂದಿಗೂ ಇಲ್ಲ; ಆ ಸಂತಪ್ತವಾದ ಮನಸ್ಸು ಅಂಧಕಾರಮಯವಾದ ಪಾತಳವನ್ನಲ್ಲದೆ ಇನ್ನಾವುದನ್ನೂ ಕಾಣಲಾರದು!

ಕೋಮಲ ಬಾಹುದ್ವಯಯುಕ್ತವಾದ ಆ ಮಲ್ಲಿಕಾಲತೆಗೆ, ವಿಕಾಸವನ್ನು ಹೊಂದಿರುವ ಆ ಸುಂದರವಾದ ತಾವರೆಯ ಹೂವಿಗೆ, ದಾರುಣವಾದ ಚಿಂತೆಯ ಬೆಂಕಿಯು ಸ್ಪರ್ಶಿಸಲು ಪ್ರಾರಂಭಿಸಿದರೆ, ಅದು ಬಾಡದಿರುವುದೇ? ಬಾಡುತ್ತದೆ; ಮ್ಲಾನಭಾವವನ್ನು ಹೊಂದುತ್ತದೆ. ಇದಾಗಿದೆ, ವಿಧಾತನ ದೃಷ್ಟಿಯಲ್ಲಿರುವ ಒಂದು ಅಲಿಖಿತ ನಿಯಮವು!

ಚಂಡಿಕಾಲಯಕ್ಕೆ ದೇವಿಯ ದರ್ಶನಕ್ಕಾಗಿ ತೆರಳಿದ ವಾತ್ಸಲ್ಯಪರಿಪೂರ್ಣನಾದ ಜನಕನು ಹಿಂದಿರುಗಿ ಬರಲಿಲ್ಲ. ತನ್ನ ಮನೋನಾಯಕನಾದ ಕುಳಿಂದಕುಲ ಚಿತ್ರಭಾನುವು ನೂರಾರು ಹರದಾರಿಗಳ ದೂರದಲ್ಲಿರುವ ಒಂದು ಭೀಷಣದ ಆಹವ ಭೂಮಿಯಲ್ಲಿ ಕಾದುತ್ತಲಿರುವನು! ರಾಜಕುಮಾರಿಗೆ-ಕುಂತಳದ ಪುಣ್ಯಸಂಚಯದ ಭಾವೀ ಭಾಗ್ಯದೇವತೆಯಾಗಿ ವಿರಾಜಿಸ

ಬೇಕಾದ ಚಂಪಕಮಾಲಿನಿಗೆ-ವೈಭವ ಪರಿಪೂರ್ಣವಾದ ಅರಮನೆಯು ಇಂದು ಅರಮನೆಯಲ್ಲ! ಅದೊಂದು ಕಾರಾಗೃಹ! ದಿವ್ಯವಾದ ರೇಶ್ಮೆಯ ವಸ್ತ್ರಗಳಿಂದ ಅಲಂಕೃತವಾಗಿದೆ ಆ ಹೆಣ್ಣುದೇಹ! ಆದರೆ ಆ ಗೂಡಿನಲ್ಲಿರುವ ಆತ್ಮಪಕ್ಷಿಗೆ ಭಿಕ್ಷೆಯನ್ನು ಬೇಡುತ್ತ ಬೀದಿಯಲ್ಲಿ ಸಂಚರಿಸುತ್ತಿರುವ ಓರ್ವ ಚಂಡಾಲಿನಿಯು ಅನುಭವಿಸುತ್ತಿರುವ ಪ್ರಶಾಂತಚಿತ್ತವೃತ್ತಿಯು ಕೂಡ ಲಭಿಸಲಿಲ್ಲ! ಅವಳನ್ನು ಸೇವಿಸಲು, ರಾಜನಂದಿನಿಯ ಆಜ್ಞೆಗಳನ್ನು ಶಿರಸಾವಹಿಸಲು, ನೂರಾರು ಮಂದಿ ದಾಸಿಯರು ರಾಜಗೃಹದಲ್ಲಿರುವರು; ಆದರೆ ಓರ್ವ ಅರ್ಧನಗ್ನ ಭಿಕ್ಷುಕಿಗಿರುವ ಆಹ್ಲಾದವು ಸಹ ಅವಳಿಗಿಲ್ಲ!

ಅಮಾತ್ಯನಂದನನ ಪೈಶಾಚಿಕ ಸ್ವಭಾವದ ನೆನಪು ಅವಳ ಸ್ಮೃತಿ ಪಥದಲ್ಲಿ ಬರುತ್ತಲೆ ರಾಜನಂದಿನಿಯು ಪ್ರಾಚ್ಯದಿಶೆಯಲ್ಲಿ ಬೆಳಗುತ್ತಿರುವ ವಿಭಾವಸುವಿನ ಕಡೆಗೆ ಒಂದು ಬಾರಿ ನೋಡಿ ದೀರ್ಘವಾದ ನಿಟ್ಟುಸಿರು ಒಂದನ್ನು ಬಿಡುತ್ತಿರುವಳು. ಒಂದು ವೇಳೆ ಅವಳ ಹೃದಯವು ವಿಶ್ವವ್ಯಾಪಿಯನ್ನು ಪ್ರಾರ್ಥಿಸುತ್ತಿರಬಹುದು:—“ಹೇ, ಜಗನ್ನಾಯಕಾ! ಈ ಪಿಶಾಚದ ಕರಗಳಿಂದ ನನ್ನನ್ನು ಪಾರುಮಾಡು!” ಎಂಬುದಾಗಿ.

ದಿನಗಳು ಉರುಳಿ ಗತಿಸಿದುವು; ಇನ್ನುಳಿದಿರುವುದು ಎರಡು ಸೂರ್ಯೋದಯಗಳು ಮಾತ್ರ! ತಾನು ವ್ರತಾನುಷ್ಠಾನ ಮಾಡುತ್ತಿರುವೆನೆಂಬ ನಂಬಿಕೆಯಿಂದ ದೂರ ಸರಿದು ನಿಂತಿರುವ ಅಮಾತ್ಯನಂದನನು ಈ ಎರಡು ದಿನಗಳು ಕಳೆದ ನಂತರ ತನ್ನನ್ನು ಉಪದ್ರವಿಸಲು-ಆತನಲ್ಲಿರುವ ವಿಷಯಲಾಲಸೆಯೆಂಬ ಕರಾಳಭೂತವನ್ನು ಪ್ರದರ್ಶಿಸಲು-ಹಿಂಜರಿಯುವನೆ? ನಾಗರಾಜನ ಬುದ್ಧಿ ಶಕ್ತಿಯ ಫಲವಾಗಿ ಈ ಮೂರುತಿಂಗಳವರೆಗೆ ಅವಳಿಗೆ ಈ ನರಪಿಶಾಚದ ಬಾಧೆಯಿರಲಿಲ್ಲ; ಆದರೆ ಅನಂತರ-ಅನಂತರ ತಾನೇನು ಮಾಡುವುದು? ಅಬಲೆಯು ಕಾಯಬಲವಿರುವ ಪುರುಷನ ಮೃಗೀಯ ಸ್ವಭಾವವನ್ನು ಎದುರಿಸಲು ಹೇಗೆ ಶಕ್ತಳಾಗುವಳು? ತಾನು-ಈ ಜೀವನದ ಹೂ, ಈ ನವ ವಿಕಸಿತ ಸುಮವು-ಪ್ರಯೋಜನಶೂನ್ಯವಾಗಿ ಬಾಡಿ ಹೋಗಬೇಕೆಂಬುದಾಗಿಯೇ ಆ ವಿಶ್ವವ್ಯಾಪಿಯ ಸಂಕೇತವು!

ಈ ವಿಚಾರಗಳು ಆ ಹುಡುಗಿಯ ಮನೋಮಂಡಲದಲ್ಲಿ ಪ್ರವೇಶಿಸಲು ಅವಳ ಹೃದಯವೊಂದು ಬಾರಿ ಕಂಪಿಸಿತು. ದುಷ್ಟನಾದ ಅಮಾತ್ಯನಂದನನ ಸ್ಮರಣೆಯು ಬರಲು ಅವಳ ಶರೀರವು ಬೆವರಿತು. ಮನಸ್ಸೆಂಬ ದೋಣಿಯು ನಿರಾಶೆಯೆಂಬ ಬಿರುಗಾಳಿಯಲ್ಲಿ ಸಿಲುಕಿ ಹೊಯ್ದಾಡತೊಡಗಿತು; ಆದರೆ ಎಂಥ ಭಯಂಕರ ಅವಸ್ಥೆಯಲ್ಲಿಯೂ ಆಶೆಯನ್ನು ತಾಳುವದು ಮನುಷ್ಯನ

ಸ್ವಭಾವವಾಗಿದೆ. ಈ ಸ್ವಭಾವವು ಮನುಷ್ಯನಿಗಿರದಿದ್ದರೆ, ಅವನ ಬಾಳು ಮಸಣಜೀವನವಾಗುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ. ಆ ಕಾರುಣ್ಯವಾರಿಧಿಯಾದ ವಿಶ್ವಗಳ ಅರಸು, ಹೊಸ ಹುರುಪನ್ನು ಪಡೆದು, ಎಂಥ ಭಯಂಕರ ವಿಪತ್ತುಗಳು ಸಂಪ್ರಾಪ್ತವಾದರೂ ಮುಂದೆ ತನ್ನ ಹೆಜ್ಜೆಗಳನ್ನಿಡುವಂತೆ ಪ್ರೇರೇಪಿಸಲು ಆಶೆ ಎಂಬ ಒಂದು ಕಿಡಿಯನ್ನು ಮನುಷ್ಯನ ಆತ್ಮದಲ್ಲಿ ಮಡಗಿರುವನು. ಆ ಕಿಡಿಯ ಪ್ರಭಾವದಿಂದ ಹಿಂಜರಿಯುವದರ ಬದಲು ಮಾನವನು ತನ್ನ ಹೆಜ್ಜೆಗಳನ್ನು ಮುಂದೆ ಮುಂದೆಯೇ ಇಡುತ್ತಾನೆ

ಇದರಂತೆ ಶೂನ್ಯವಾದ ರಾಜನಂದಿನಿಯ ಹೃದಯದಲ್ಲಿ ಒಂದು ಹೊಸ ಆಶೆಯ ಬೆಳಕು ಚಿಮ್ಮಿತು; ತನ್ನ ಜೀವಿತೇಶ್ವರನ ಆಪ್ತಮಿತ್ರನಾದ ನಾಗರಾಜನು ಈ ವಿಪತ್ತಿನಿಂದ ತನ್ನನ್ನು ಸಲಹುವದಕ್ಕಾಗಿ ಬೇಕಾದ ತಂತ್ರಗಳನ್ನು ಪ್ರಯೋಗಿಸದೆ ಇರಲಾರನು. ಇನ್ನೆರಡು ದಿನಗಳು ಗತಿಸುವದರೊಳಗಾಗಿ ತನಗೆ ಬರುವ ವಿಪತ್ತನ್ನು ಆ ಕುಶಾಗ್ರಬುದ್ಧಿಶಾಲಿಯು ಊಹಿಸಿ ತಿಳಿದುಕೊಂಡು ತನ್ನ ಸಹಾಯಕ್ಕೆ ಬಾರದೆ ಇರನು. ಎಂಬೀ ರೀತಿ ರಾಜನಂದಿನಿಯು ವಿಚಾರ ಲೋಕದಲ್ಲಿ ವಿಹರಿಸುತ್ತ ಸಂತಪವನ್ನು ತಾಳಲು ಪ್ರಯತ್ನಿಸಿದಳು.

"ರಾಜನಂದಿನಿ!" ಎಂಬ ಶಬ್ದವು ಅವಳ ಕರ್ಣೇಂದ್ರಿಯಗಳಲ್ಲಿ ಪ್ರವೇಶಿಸಿತು. ಅವಳು ಮಹಡಿಯ ಕೆಳಗೆ ನೋಡಿದಳು. ಓರ್ವ ವೃದ್ಧನಾರಿಯು ತನ್ನನ್ನು ಆ ರೀತಿ ಸಂಬೋಧಿಸಿದಳೆಂಬುದು ರಾಜಕುಮಾರಿಗೆ ವ್ಯಕ್ತವಾಯಿತು. ರಾಜಕುಮಾರಿಯು ತನ್ನ ಮೊಗದಲ್ಲಿ ಹೊಳೆಯುತ್ತಿರುವ ಚಿಂತೆಗಳನ್ನು ಮರೆಮಾಜಲು ಪ್ರಯತ್ನಿಸುತ್ತ: "ನೀನು ಯಾರು?" ಎಂದಳು.

"ತಾಯಿ, ನಾನೋರ್ವ ಯಾಚಕಿಯು; ಕುಂತಳ ರಾಜನಂದಿನಿಯಲ್ಲಿ ಯಾಚಿಸಿದರೆ ನನ್ನ ದಾರಿದ್ರ್ಯವು ನಾಶವಾಗುವುದೆಂದು ವಿಚಾರಿಸಿ ಇಲ್ಲಿಗೆ ಬಂದೆನು." "ಮೇಲೆ ಬಾ ಹಾಗಾದರೆ."

ರಾಜನಂದಿನಿಯ ನಿರ್ದೇಶದಂತೆ ಆ ಭಿಕ್ಷುಕಿಯು ಮಹಡಿಯನ್ನೇರಿದಳು. ಅವಳಿಗೆ ಭಿಕ್ಷೆಯನ್ನು ನೀಡಿ ಉಪಚರಿಸುವದಕ್ಕಾಗಿ ಓರ್ವ ದಾಸಿಯನ್ನು ಕರೆಯಬೇಕೆಂದು ರಾಜನಂದಿನಿಯು ವಿಚಾರಿಸಿದಳು.

ಇಲ್ಲಿ ಒಂದು ಮಾತು. ನಮ್ಮ ನಾಡಿನಲ್ಲಿ ದೀನದರಿದ್ರರಿಗೆ ಭಿಕ್ಷೆಯನ್ನು ನೀಡಿ ಅವರ ಸಂಕಟವನ್ನು ಪರಿಹರಿಸುವದು ಅನಾದಿಕಾಲದಿಂದಲೂ ನಡೆದು ಬಂದ ಒಂದು ಪದ್ಧತಿಯಾಗಿದೆ. ಯಾಚಕರಿಗೆ ಮನ್ನಣೆಯನ್ನು ನೀಡುವುದು ನಮ್ಮ ಆಧ್ಯಾತ್ಮಿಕ ಜೀವನದ ಒಂದು ಅಂಗವಾಗಿದೆ, ಎಂಬುದು

ಮಾತ್ರವಲ್ಲ; ಭಾರತೀಯನಾದ ಗೃಹಸ್ಥನು ಭಿಕ್ಷುಕರನ್ನು ಉಪಚರಿಸವದು ತನ್ನ ಒಂದು ಕರ್ತವ್ಯವಾಗಿದೆ ಎಂದು ಭಾವಿಸುತ್ತಾನೆ. ಈ ೨೦ನೇ ಶತಮಾನದಲ್ಲ ಪಡುವಣ ಸಂಸ್ಕೃತಿ, ನಾಗರಿಕತೆಗಳು ನಮ್ಮನ್ನು ಬಹಳ ಮಟ್ಟಿಗೆ ಬಾಧಿಸಿ, ನಮ್ಮ ಪ್ರಾಚೀನ ಆಚಾರ-ವಿಚಾರಗಳಿಗೆ ಧಕ್ಕೆಯು ತಗಲುವಂತೆ ಮಾಡಿದ್ದರೂ, 'ದಾನ'ವೆಂಬ ಶಬ್ದವಿನ್ನೂ ನಮ್ಮ ಶಬ್ದಕೋಶಗಳಿಂದ ಮಾಯವಾಗಿರುವದಿಲ್ಲ. ಹಸಿದು ಬಂದವರಿಗೆ ಅನ್ನವನ್ನು ಹಾಕದ ಗೃಹಸ್ಥರು ನಮ್ಮ ನಾಡಿನಲ್ಲಿ ದುರ್ಲಭವು!

ಈ ಔದಾರ್ಯ ಗುಣವನ್ನು ಕುರಿತು ಪರ್ಯಾಲೋಚಿಸಲು ಹೊರಟರೆ, ಅದೊಂದು ಮಹಾ ಗ್ರಂಥವೇ ಆಗಬಹುದು. ಸದ್ಯಕ್ಕೆ ಅದನ್ನು ಕುರಿತು ವಿವೇಚಿಸುವ ಬಯಕೆಯೂ ನನಗಿಲ್ಲ; ಆದರೆ ಎರಡು ಮಾತುಗಳನ್ನು ಇಲ್ಲಿ ಹೇಳುವದು ಅಸಂಗತವಾಗದೆಂದು ನನ್ನ ಊಹೆಯು! ಈ ದಾನಶೀಲತೆಯು ಭಾರತಭೂಮಿಯಲ್ಲಿ ಬಹು ಪುರಾತನ ಕಾಲದಿಂದಲೇ ನಡೆದು ಬಂದಿದೆ. ತನ್ನಲ್ಲಿ ಬೇಡಿದುದನ್ನು ದಾನಮಾಡುವದು ಗೃಹಸ್ಥನ ಕರ್ತವ್ಯವೆಂದು ಶಾಸ್ತ್ರಗಳು ನುಡಿಯುತ್ತಿರುವವು! ಅತಿಥಿಗಳನ್ನು ಸಂತೃಪ್ತಿಪಡಿಸುವದಕ್ಕಾಗಿ ತಮ್ಮ ಪ್ರಾಣಗಳನ್ನೇ ಬಲಿಯಾಗಿ ಅರ್ಪಿಸಿದ ತ್ಯಾಗಕೇಸರಿಗಳನ್ನು ಪುರಾಣೇತಿಹಾಸಗಳಲ್ಲಿ ನಾವು ಧಾರಾಳವಾಗಿ ನೋಡಬಹುದು. ಶಿಬಿ, ಮಯೂರಧ್ವಜ, ದಧೀಚಿ ಎಂಬಿತ್ಯಾದಿ ಹೆಸರುಗಳು ನಮ್ಮ ನಾಡಿನಲ್ಲ ಆಚಂದ್ರಾರ್ಕವಾಗಿ ಬೆಳಗುತ್ತಿರುವವು! ಆ ಕಾಲದ ಸಾಧಾರಣ ಜನರು ಮಾತ್ರವಲ್ಲ; ಅರಸರು, ರಾಜಕನ್ಯೆಯರು ಸಹ ಅತಿಥಿಸತ್ಕಾರವನ್ನು ತಮ್ಮ ಕರ್ತವ್ಯವೆಂದು ಬಗೆದಿದ್ದರು

ಈ ಸಂಪ್ರದಾಯದಂತೆ ಆ ದಿನದ ಪ್ರಭಾತದಲ್ಲಿ ಜರಾಪೀಡಿತಳಾದ ಆ ನಾರಿಯನ್ನು ಉಪಚರಿಸಲು ರಾಜನಂದಿನಿಯು ಸನ್ನದ್ಧಳಾದಳು. ಚಂಪಕಮಾಲಿನಿಯನ್ನು ನೋಡುತ್ತ ಮುದುಕಿಯು ಹೀಗೆ ಹೇಳಿದಳು: "ತಾಯೀ, ಹಸಿವು; ಸ್ವಲ್ಪ ಆಹಾರವನ್ನು ನೀಡಿದ್ದರೆ ಉಪಕಾರವಾಗುತ್ತಿತ್ತು" ರಾಜನಂದಿನಿಯು ಮುದುಕಿಯ ಕ್ಷುಧೆಯನ್ನು ಪರಿಹರಿಸಲು ಸ್ವಲ್ಪ ಹಾಲನ್ನೂ ಹಣ್ಣುಗಳನ್ನೂ ತಂದು ಕೊಟ್ಟಳು. ಆ ವೃದ್ಧೆಯು ಅವುಗಳನ್ನು ಭಕ್ಷಿಸುತ್ತ :"ಇನ್ನೆರಡು ದಿನಗಳಲ್ಲವೇ ಅವಶೇಷವು?" ಎಂದಳು.

"ಏಕೆ?" ಎಂದಳು ರಾಜನಂದಿನಿ ಭಯಕಂಪಿತ ಸ್ವರದಲ್ಲಿ.

"ನಿನ್ನ ವ್ರತಸಮಾಪ್ತಿಗೆ!" ಎಂದು ಒಂದು ನಗುವನ್ನು ಹೊರಚೆಲ್ಲುತ್ತ ಮುದುಕಿಯು ನುಡಿದಳು. ರಾಜಕುಮಾರಿಯ ವದನವು ಭಯದಿಂದ ಕೆಂಪು ಬಣ್ಣವನ್ನು ತಾಳಿತು. ವೃದ್ಧೆಯು ಹೇಳಿದಳು :"ಮಗೂ, ಭಯಪಡಬೇಡ!

ನಿನ್ನ ಮಿತ್ರಳು ನಾನು!"

"ಹಾಗಾದರೆ ನೀವು ನಾಗರಾಜರೇ!"

"ಅಲ್ಲ, ಅವರ ಸಂದೇಶವನ್ನು ವಹಿಸಿಕೊಂಡು ಬಂದ ಚಾರನು!"

"ನೀವು ಯಾರು?"

"ನನ್ನ ಹೆಸರು ವಿಶ್ವಜಿತ್ತು; ನಾಗರಾಜಶರ್ಮರಿಗೆ ಕಾರ್ಯಾಂತರ ದಿಂದ ಇಲ್ಲಿಗೆ ಬರಲು ಸಾಧ್ಯವಾಗಲಿಲ್ಲ. ನಾನೇ ಅವರ ನುಡಿಗಳನ್ನು ತಿಳಿಸು ವಕ್ಕಾಗಿ ಬಂದೆನು."

"ಅವರು ಏನೆಂದು ಹೇಳಿಕಳುಹಿಸಿರುವರು?"

"ನಾಡದ್ದು ನಿನ್ನ ವ್ರತಸಮಾಪ್ತಿಯಾಗುವುದರಿಂದ, ಅನಂತರ ಅ-ಮಾತ್ಯನಂದನನ ಹಾವಳಿಯು ಹೆಚ್ಚಬಹುದು. ಅವನ ಬಂಧನದಿಂದ ಪಾರಾ ಗಲು ಅವರೊಂದು ಉಪಾಯವನ್ನು ಸೂಚಿಸಿರುವರು. ಅದನ್ನು ಅನುಸರಿಸ ಬೇಕಾದರೆ ನೀನು ಹೆಚ್ಚು ಜಾಗರೂಕಳಾಗಿರಬೇಕು. ಈ ಬಿಕ್ಕಟ್ಟಿನಿಂದ ಪಾರಾಗಬೇಕಾದರೆ ಮುಳ್ಳುಗಳನ್ನು ತುಳಿಯದೆ ನಿರ್ವಾಹವಿಲ್ಲವೆಂಬುದನ್ನು ನೀನು ಬಲ್ಲೆಯಷ್ಟೆ!"

"ಹೇಗೆ ಪಾರಾಗುವದು?" ಎಂದಳು ರಾಜನಂದಿನಿ ಹರ್ಷಭರಿತಳಾಗಿ.

"ಅದನ್ನೇ ಹೇಳುತ್ತೇನೆ. ನಿನ್ನಲ್ಲಿರುವ ನಟನಾಕೌಶಲ್ಯವನ್ನೆಲ್ಲ ಪ್ರಯೋಗಿಸಿ, ಅಮಾತ್ಯಸುತನು ಬರುವಾಗ ಅವನನ್ನು ಮುಗ್ಧನನ್ನಾಗಿ ಮಾಡಬೇಕು. ನೀನು ಎಷ್ಟು ತೀವ್ರವಾಗಿ ಅವನನ್ನು ವಿರೋಧಿಸುತ್ತಿದ್ದರೂ ಅವನಲ್ಲಿ ಗಾಢವಾದ ಅನುರಾಗವಿದೆ, ಎಂಬುದನ್ನು ತೋರ್ಪಡಿಸಬೇಕು. ಅವನ ಪಾಣಿಗ್ರಹಣವನ್ನು ಮಾಡಿಕೊಳ್ಳಲು ಅತ್ಯಾತುರಳಾಗಿರುವೆ, ಎಂಬು ದನ್ನು ತೋರ್ಪಡಿಸಬೇಕು. ಅನಂತರ ನಾಡದ್ದು ಬೃಹಸ್ಪತಿವಾರ ಅರ ಮನೆಯ ಹೊರಗಿರುವ ಮಂಗಳದೇವಿಯ ಗುಡಿಗೆ ಅರ್ಚನೆಗಾಗಿ ನಿನ್ನ ತಾ-ಯಿಯೊಡನೆ ತೆರಳಲು ಅನುವಾದವನ್ನು ಪಡೆದರೆ ಸಾಕು!"

"ಅವನು ಅದಕ್ಕೆ ಒಪ್ಪುವನೇ?"

"ಅದು ನಿನ್ನ ನಟನೆಯ ಕೌಶಲ್ಯವನ್ನು ಅವಲಂಬಿಸಿರುವದು."

"ಅನಂತರ?"

"ಅನಂತರವೇನು? ಹೇಗಾದರೂ ಅಮಾತ್ಯನಂದನನ ಕಣ್ಣುಗಳಿಗೆ ಬೂದಿಯನ್ನೆರಚಿ ಮಂಗಳದೇವಿಯ ಗುಡಿಯನ್ನು ನೀನೂ ನಿನ್ನ ತಾಯಿಯೂ ಸೇರಿದರೆ ಸಾಕು! ಅಲ್ಲಿಂದ ನಿಮ್ಮನ್ನು ಸಲಹುವ ಭಾರವು ನಮ್ಮದು!"

"ಪ್ರಯತ್ನವು ವಿಫಲವಾದರೆ?"

"ದಕ್ಷತೆಯಿಂದ ಕೆಲಸವನ್ನು ನಿರ್ವಹಿಸಿದರೆ ಉದ್ಯಮವು ವಿಫಲವಾಗಲಾರದು."

"ಹೂಂ, ನಿಮ್ಮ ನುಡಿಗಳಂತೆ ಪ್ರಯತ್ನಿಸುವೆನು."

"ಒಳ್ಳೆಯದು; ಇನ್ನು ಕಾಣುವದು ಬೃಹಸ್ಪತ್ಯವಾರ!"

ಎಂದು ನುಡಿದು, ವೃದ್ಧ ಯಾಚಕಳು ತೆರಳಿದಳು; ಅವಳು ಯಾಚಕಳಾಗಿರಲಿಲ್ಲ. ಭಿಕ್ಷುಕಿಯ ವೇಷವನ್ನು ಧರಿಸಿದ ನಮ್ಮ ಚಿರಪರಿಚಿತ ವಿಶ್ವಜಿತ್ತುವಾಗಿದ್ದನು.

ಸಮಯವು ಯಾರನ್ನೂ ಕಾದು ನಿಂತಿರುವದಿಲ್ಲ; ಭಾಸ್ಕರನು ತನ್ನ ಪ್ರವಾಸವನ್ನು ನಿಲ್ಲಿಸಿ ವಿಶ್ರಾಮವನ್ನು ಹೊಂದುವದಿಲ್ಲ. ಪ್ರಭಾತವು ಕಳೆದೊಡನೆಯೇ ಮಧ್ಯಾಹ್ನವು ಬಂದಿತು. ಮದನಕುಮಾರನು ಎಂದಿನಂತೆ ರಾಜನಂದಿನಿಯ ದರ್ಶನಕ್ಕಾಗಿ ಅರಮನೆಗೆ ಬಂದನು. ಇನ್ನೆರಡು ದಿನಗಳು ಗತಿಸಿದರೆ ರಾಜನಂದಿನಿಯು ತನ್ನವಳಾಗುವಳಲ್ಲ, ಎಂಬ ಅಪಾರವಾದ ಹರ್ಷವು ಅವನ ಎದೆಯಲ್ಲಿ ತುಳುಕುತ್ತಲಿತ್ತು. ಚಂಪಕಮಾಲಿನಿಯ ಸೌಂದರ್ಯವನ್ನು ಆಸ್ವಾದಿಸುವ ಹಂಬಲದಲ್ಲಿ ಹಲವು ಸಾರೆ ಅವನು ಗಾಳಿಯ ಗೋಪುರಗಳನ್ನು ಕಟ್ಟುತ್ತಲಿದ್ದನು. ಚಂಪೆಗೆ ತನ್ನ ಮೇಲೆ ಅನುರಾಗವಿದೆಯೇ? ಎಂಬುದನ್ನು ತಿಳಿಯಲು ಅವನಲ್ಲಿರುವ ಪ್ರಣಯದ ವಾಸನೆಯು ಒಪ್ಪಲಿಲ್ಲ; ಅವಳಿಗೂ ಒಂದು ಆತ್ಮವಿದೆ, ಎಂಬುದನ್ನು ತಿಳಿಯಲು ಅವನು ಅಗ್ರಹಿಸಲಿಲ್ಲ. ಅಜ್ಞಾನ, ಅವಿವೇಕ, ವ್ಯಾಮೋಹಗಳಿಂದ ನಿಬಿಡವಾದ ಅವನ ಲೋಚನಗಳು ಪರಿಶುದ್ಧವಾದ ಪ್ರೇಮದ ಉಜ್ವಲ ಸ್ವರೂಪವನ್ನು ಕಾಣಲು ಶಕ್ಯವಾಗಲಿಲ್ಲ ಅನುರಾಗವೆಂದರೆ ಮನುಷ್ಯನ ಎದೆಯಲ್ಲಿ ತುಂಬಿತುಳುಕುತ್ತಿರುವ ಪ್ರಣಯವಾದ ವಿಷಯವಾಸನೆಯಾಗಿದೆ ಎಂದಾಗಿತ್ತು ಅವನ ವಿಚಾರವು! ಇಂಥ ಒಬ್ಬ ವ್ಯಕ್ತಿಯು ಚಂಪಕಮಾಲಿನಿಯೊಡನೆ ಯಾವ ರೀತಿ ವರ್ತಿಸಬಹುದು, ಎಂಬುದನ್ನು ನಾನು ವಿವರಿಸುವದಕ್ಕಿಂತ ನೀವು ಊಹಿಸಿಕೊಳ್ಳುವದೇ ಮೇಲು!

ಅಮಾತ್ಯನಂದನನು ರಾಜಕುಮಾರಿಯ ವದನವನ್ನು ಪಾಪಪರಿಪೂರ್ಣವಾದ ದೃಷ್ಟಿಯಲ್ಲಿ ನೋಡುತ್ತ ಅಂದನು: "ಇನ್ನೆರಡು ದಿನಗಳಲ್ಲಿ ಅಲ್ಲವೇ ನಿನ್ನ ವ್ರತವು ಸಮಾಪ್ತಿಯಾಗುವುದು?"

ತನ್ನ ಮೊಗವನ್ನು ತುಸ ತಿರುಗಿಸಿಕೊಂಡು ರಾಜನಂದಿನಿಯು: "ಅಹುದು, ನಾಡಿದ್ದು ಅದು ಸಮಾಪ್ತವಾಗುವದು"

"ಅನಂತರ?"

"ಅನಂತರವೇನು?" ಎಂದು ಕೆಂಪಾದ ವದನಮಂಡಲದೊಡನೆ ನುಡಿದಳು ರಾಜನಂದಿನಿ.

"ಈ ದಾಸನ ಆಗ್ರಹಗಳನ್ನು ಸಮಾಪ್ತಿಗೊಳಿಸುವದಿಲ್ಲವೇ?"

"ಅದಕ್ಕೆ ಇಷ್ಟು ತವಕಪಡುವದೇಕೆ? ಯಾವಾಗಲೂ ನಾನು ನಿಮ್ಮವಳಲ್ಲವೆ?" ಈ ಮಾತುಗಳನ್ನು ನುಡಿಯಲು ಚಂಪೆಗೆ ಎಷ್ಟು ಸಂಕಟವಾಯಿತೆಂಬದನ್ನು ವಿವರಿಸಲು ಅಸಾಧ್ಯವು!

"ರಾಜನಂದಿನಿ, ಹಾಗಾದರೆ ನಾನು ಅನುಗ್ರಹಿತನಾದೆನು; ನನ್ನ ಆತ್ಮವು ಹರ್ಷನಿಬಿಡವಾಯಿತು." ಎಂದು ಆಹ್ಲಾದದೊಡನೆ ನುಡಿದನು ಮದನಕುಮಾರನು.

"ಅಭ್ಯಂತರವಿಲ್ಲ; ಆದರೆ ನನ್ನದೊಂದು ಬಿನ್ನಹವಿದೆ!"

"ಏನದು?"

"ಬೃಹಸ್ಪತ್ಯವಾರ ಮಂಗಳದೇವಿಯ ಗುಡಿಗೆ ತಾಯಿಯೊಂದಿಗೆ ತೆರಳಿ, ದೇವಿಯನ್ನು ಅರ್ಚಿಸಿ, ದೇವಿಯ ಅನುಗ್ರಹವನ್ನು ಪಡೆಯಬೇಕೆಂದಿರುವೆನು. ಆ ಮೇಲೆ ನಿಮ್ಮ ಇಷ್ಟದಂತೆ ನಡೆಯುವುದರಲ್ಲಿ ವಿರೋಧವಿಲ್ಲ."

"ಆದರೆ ರಾಜನಂದಿನಿ, ನಗರದ ಹೊರಗೆ ಇರುವ ಗುಡಿಗೆ ತೆರಳುವುದು ಅಷ್ಟೊಂದು ಉಚಿತವಲ್ಲ; ಶತ್ರುಗಳ ಬಾಧೆಯು ಹೆಚ್ಚಿರುವುದರಿಂದ ವಿಪತ್ತುಗಳಿಗೆ ಅವಕಾಶವಿದೆ. ದೇವತಾರಾಧನೆಗೆ ಬೇಕಾದ ಸನ್ನಾಹಗಳನ್ನು ಅರ್ಚಕರಿಗೆ ಒದಗಿಸಿ ಕೊಟ್ಟರೆ ಸಾಲದೆ?"

"ಛೇ! ನಾವು ತೆರಳುವುದರಿಂದ ಯಾವ ಪ್ರಮಾದವೂ ಸಂಭವಿಸಲಾರದು. ನಾಲ್ಕಾರು ಮಂದಿ ಭಟರೊಡನೆ ತೆರಳಿದರೆ ಭಯಕ್ಕೆ ಅವಕಾಶವಿಲ್ಲ. ನನ್ನಲ್ಲಿ ಸಂದೇಹವಿದ್ದರೆ, ನಾನು ಪಾರಾಗದಂತೆ ನೋಡಿಕೊಳ್ಳಲು ನಾಲ್ಕಾರು ಮಂದಿ ಭಟರನ್ನು ಕಳುಹಿಸಿರಿ."

ರಾಜನಂದಿನಿಯ ನುಡಿಗಳು ಅಮಾತ್ಯನಂದನನ ಹೃದಯದಲ್ಲಿ ಅನುಕಂಪನೆಯು ಜನಿಸುವಂತೆ ಮಾಡಿದುವು ಹೀಗಿದ್ದರೂ ಇನ್ನೆರಡು ದಿನಗಳಲ್ಲಿ ಅವಳು ತನ್ನವಳಾಗುವವಳಾದ್ದರಿಂದ, ಅವಳ ಬೇಡಿಕೆಯನ್ನು ತಿರಸ್ಕರಿಸಿ, ಅವಳ ಹೃದಯದಲ್ಲಿ ತನ್ನನ್ನು ಕುರಿತು ನಿರಸನವು ಉದ್ಭವಿಸುವಂತೆ ಮಾಡುವುದು ಉಚಿತವಲ್ಲವೆಂದು ಅವನು ಬಗೆದನು. ಅವನು ಹೀಗೆ ನುಡಿದನು: "ರಾಜನಂದಿನಿ, ನಿನ್ನ ಅಪೇಕ್ಷೆಯನ್ನು ನಾನು ನೆರವೇರಿಸುವೆನು"

ತನ್ನ ಕಡೆಗಣ್ಣಿನ ನೋಟವನ್ನು ಒಂದು ಬಾರಿ ಅಮಾತ್ಯನಂದನನ ಕಡೆಗೆ ಚಲ್ಲಿ ಆ ಶರದಿಂದ ಅವನ ಹೃದಯವನ್ನು ಆಕರ್ಷಿಸಿದಳು. ಆ ಮೋಹ

ಸಾಸ್ತ್ರದ ತಾಡನದಿಂದ ಮದನಕುಮಾರನು ಪರವಶನಾಗಿ ಹೋದನು. ಅವನು ಎಷ್ಟು ಚಾಣಾಕ್ಷನಾಗಿದ್ದರೂ ಆ ಹಕ್ಕಿಯ ನೋಟದಲ್ಲಿ ಗೂಡಿನಿಂದ ಪಾರಾಗುವ ತಂತ್ರವು ಅಡಗಿದೆ ಎಂಬುದನ್ನು ತಿಳಿಯಲಿಲ್ಲ

"ತಮ್ಮ ಉದಾರಬುದ್ಧಿಗೆ ನಾನು ಕೃತಜ್ಞಳು!" ಎಂದಳು ಅರಸು ಮಗಳು. ಬೃಹಸ್ಪತ್ಯವಾರವು ಬಂದಿತು; ಮೊದಲಿನ ನಿರ್ಧರದಂತೆ ರಾಜನಂದಿನಿಯು ಮಂಗಳದೇವಿಯ ದರ್ಶನಕ್ಕಾಗಿ ತನ್ನ ಜನನಿಯೊಡನೆ ಅರಮನೆಯಿಂದ ಹೊರಬಿದ್ದಳು. ಅವಳೊಡನೆ ದಾಸಿಯರು-ಭಟರು ಮೊದಲಾದವರು ಬಂದಿದ್ದರು. ಅವಳು ಪಾರಾಗದಂತೆ ನೋಡಿಕೊಳ್ಳಲು ಅಮಾತ್ಯನಂದನನಿಂದ ನಿಯುಕ್ತರಾದ ಚಾರರು ಅವಳನ್ನು ಹಿಂಬಾಲಿಸಿದ್ದರು. ಬಹು ದಿನಗಳವರೆಗೆ ಅರಮನೆಯ ಕದಗಳನ್ನು ದಾಟಿ ಹೊರಗಿನ ಪ್ರಪಂಚಗಳಲ್ಲಿ ಹೆಜ್ಜೆಗಳನ್ನು ಇಡದಿದ್ದ ರಾಜನಂದಿನಿಯು ಈ ದಿನ ಹೊರಗೆ ಬಂದುದನ್ನು ಕಂಡು, ಪುರಜನರು ಆಶ್ಚರ್ಯಭರಿತರಾದರು. ಪೌರ ಪ್ರಧಾನಿಗಳು ಅವಳನ್ನು ನೋಡಿ ಬಹುಮಾನ ಸೂಚಕವಾಗಿ ತಮ್ಮ ವಂದನೆಗಳನ್ನು ಅರ್ಪಿಸುತ್ತಿದ್ದರು. ಮಂದಸ್ಮಿತವೊಂದನ್ನು ಬೀರಿ, ಪ್ರಜಾಸಂಚಯವು ಅರ್ಪಿಸುತ್ತಿರುವ ಪ್ರಣಾಮಗಳನ್ನು ಸ್ವೀಕರಿಸಿ, ತನ್ನ ಹೆಜ್ಜೆಗಳನ್ನು ಮುಂದೆ ಮಂದೆ ಇಡುತ್ತಾ ಅವಳು ದೇವಾಲಯದ ಬಳಿಗೆ ತೆರಳಲಾರಂಭಿಸಿದಳು.

ದೇಗುಲವು ದೃಗ್ಗೋಚರವಾಯಿತು. ಅರಸುಕುಮಾರಿಯು ದೇವತಾದರ್ಶನಕ್ಕಾಗಿ ಬಂದುದನ್ನು ಕಂಡು, ದೇಗುಲದಲ್ಲಿ ನೆರೆದಿದ್ದ ಜನರು ಗುಡಿಯನ್ನು ಬಿಟ್ಟು ತೆರಳಿದರು. ಅರ್ಚಕರು ಬಹುಮಾನಪುರಸ್ಸರವಾಗಿ ರಾಜಕುಟುಂಬವನ್ನು ಸ್ವಾಗತಿಸಿ, ಗುಡಿಯ ಅಂತಃರ್ಭಾಗಕ್ಕೆ ಒಯ್ದರು. ಅರಸುಮನೆತನದ ಹೆಣ್ಣುಮಕ್ಕಳೊಡನೆ ಗುಡಿಯೊಳಗೆ ಪ್ರವೇಶಿಸುವದು ವಿಹಿತವಲ್ಲವೆಂದು ಭಾವಿಸಿ, ಅವಳ ಸಂಗಡ ಬಂದಿದ್ದ ಭಟರೂ ಚಾರರೂ ದೇಗುಲದ ಹೊರಗೆ ನಿಂತರು.

ನೇರವು ಒಂದು ಗಳಿಗೆ ಗತಿಸಿತು; ಇಬ್ಬರು ಹೆಂಗಸರು ದೇಗುಲದ ಬಳಿಗೆ ಬಂದರು. ಅವರ ಶಿರಸ್ಸುಗಳಲ್ಲಿ ಫಲ-ಪುಷ್ಪಗಳಿಂದ ನಿಬಿಡವಾದ ಬುಟ್ಟಿಗಳಿದ್ದವು. ಅವರು ದೇಗುಲದೊಳಗೆ ಪ್ರವೇಶಿಸಲು ಉದ್ಯಮಿಸುತ್ತಿರುವುದನ್ನು ಅವಲೋಕಿಸಿ, ಅಲ್ಲಿ ನಿಂತಿದ್ದ ಭಟರು: "ನೀವು ಈಗ ದೇಗುಲದೊಳಗೆ ಹೊಗಕೂಡದೆ"ಂದು ಆಜ್ಞಾಪಿಸಿದರು.

"ಅದೇಕೆ? ನಾವು ದೇವತಾರಾಧನೆಗೆ ಅವಶ್ಯವಾಗಿರುವ-ಫಲ ಪುಷ್ಪಗಳನ್ನು ತೆಗೆದುಕೊಂಡು ಬಂದಿರುವೆವು."

“ರಾಜನಂದಿನಿಯು ದೇವಿಯ ದರ್ಶನವನ್ನು ಪಡೆಯುತ್ತಿರುವಳು; ಆದುದರಿಂದ ಈಗ ಒಳಗೆ ಹೋಗಕೂಡದು.”

“ರಾಜನಂದಿನಿಯು ಇಂದು ದೇವಿಯ ಆರಾಧನೆಗೆ ಬರುವಳೆಂದೂ, ಅರ್ಚನೆಗೆ ಅವಶ್ಯವಿರುವ ಪೂಜಾ ಸಾಮುಗ್ರಿಗಳನ್ನು ಗುಡಿಗೆ ತಲುಪಿಸಬೇಕೆಂದೂ ಅಮಾತ್ಯಪುತ್ರರು ಆಜ್ಞಾಪಿಸಿದುದರಿಂದ, ನಾವು ಈ ಸಾಧನಗಳನ್ನು ತೆಗೆದುಕೊಂಡು ಬಂದಿರುವೆವು.”

“ಆದರೆ ರಾಜಕುಮಾರಿಯು ತೆರಳಿದ ಅನಂತರವಲ್ಲದೆ ಮೊದಲು ನಿಮ್ಮನ್ನು ಒಳಗೆ ಬಿಡಲು ಸಾಧ್ಯವಿಲ್ಲ.”

“ರಾಜನಂದಿನಿಯ ದೇವತಾರ್ಚನೆಯು ಪೂರ್ತಿಯಾದ ನಂತರ ಈ ಪೂಜಾಸಾಮುಗ್ರಿಗಳಿಂದೇನು ಪ್ರಯೋಜನ?”

“ಅದು ನಮ್ಮಗೆ ತಿಳಿಯದು.” ಎಂದು ಹೇಳಿದರು ಭಟರು.

“ನೀವು ನಮ್ಮನ್ನು ಒಳಗೆ ಬಿಡದಿದ್ದರೆ, ನಾವೀಗ ತೆರಳಿ ಅಮಾತ್ಯ ನಂದನರಲ್ಲಿ ಈ ಸಂಗತಿಯನ್ನು ಅರುಹುವೆವು; ಅವರ ಆಜ್ಞೆಯ ಪ್ರಕಾರ ನಾವಿಂದು ಬಂದಿರುವೆವೆಂಬುದನ್ನು ತಿಳಿಯಿರಿ. ಅವರನ್ನು ಮೀರಿ ನಡೆದದ್ದರ ಫಲವಾಗಿ ದೊರಕುವ ದಂಡನೆಯನ್ನು ನೀವೇ ಅನುಭವಿಸಬೇಕಾಗಿ ಬರುವದು!”

ಎಂದು ಕೋಪವನ್ನು ನಟಿಸುತ್ತ, ಆ ವನಿತೆಯರು ತಮ್ಮ ಬುಟ್ಟಿಗಳನ್ನು ತಲೆಯ ಮೇಲೇರಿಸಿಕೊಂಡು ಹಿಂದಿರುಗಿದರು. ಅವರ ನಟನೆಯನ್ನು ಕಂಡು ಭಟರಿಗೆ ಏನು ಮಾಡಬೇಕೆಂಬದು ತಿಳಿಯದೆ ಹೋಯಿತು. ಈ ವನಿತೆಯರು ಮದನಕುಮಾರನ ನಿರ್ದೇಶದಂತೆ ಬಂದವರಾಗಿದ್ದರೆ, ತಾವು ಇವರನ್ನು ಒಳಗೆ ಬಿಡದೆ ಹೋದ ಅಪರಾಧಕ್ಕೆ ದಂಡನೆಯನ್ನು ಅನುಭವಿಸಬೇಕಾಗಿ ಬರುವುದೆಂಬ ಭೀತಿಯು ಅವರನ್ನು ಬಾಧಿಸದೆ ಇರಲಿಲ್ಲ.

“ಏನಪ್ಪಾ, ಅವರು ಅಮಾತ್ಯನಂದನರ ಬಳಿಯಿಂದ ಬಂದವರೇ ಇರಬೇಕು; ಆ ಹೆಂಗುಸರನ್ನು ಒಳಗೆ ಬಿಡುವುದು ಒಳ್ಳೆಯದು. ಸುಮ್ಮನೆ ಕಷ್ಟಗಳನ್ನು ಎಳೆದು ತಲೆಯ ಮೇಲೇಕೆ ಹಾಕಿಕೊಳ್ಳಬೇಕು?” ಎಂದು ಒಬ್ಬ ಭಟನು ಹೇಳಿದನು.

“ಆದರೆ ಅಮಾತ್ಯಕುಮಾರರು ಯಾರನ್ನೂ ಒಳಗೆ ಬಿಡಕೂಡದೆಂದು ಹೇಳಿರುವರಲ್ಲ!” ಎಂದನು ಇನ್ನೊಬ್ಬನು.

“ಆದರೆ ಆರಾಧನೆಗಿರುವ ಪೂಜಾಸಾಮುಗ್ರಿಗಳನ್ನು ತೆಗೆದುಕೊಂಡು ಬರುವವರನ್ನು ಬಿಡಕೂಡದೆಂದು ನುಡಿಯಲಿಲ್ಲವಷ್ಟೆ! ಒಂದುವೇಳೆ ಪೂಜಾಸಾಮುಗ್ರಿಗಳನ್ನು ತೆಗೆದುಕೊಂಡು ಬರುವವರನ್ನು ಒಳಗೆ ಬಿಡಬೇ

ಕೆಂದು ನುಡಿಯಲು ಅವರು ಮರೆತಿರಬಹುದು. ಇದಲ್ಲದೆ, ಇವರು ಹೆಂಗಸರು; ಇವರನ್ನು ಒಳಗೆ ಬಿಡುವುದರಿಂದ ಯಾವ ಪ್ರಮಾದವೂ ಘಟಿಸದು.''

ಈ ನುಡಿಗಳು ಇತರ ಸೈನಿಕರಿಗೂ ಸಮಂಜಸವಾಗಿ ತೋರಿದುವು; ಫಲಪುಷ್ಪಗಳನ್ನು ತೆಗೆದುಕೊಂಡು ಬಂದ ಈ ಹೆಂಗಸರನ್ನು ಒಳಗೆ ಬಿಡುವದರಿಂದ ಯಾವ ಅನರ್ಥವೂ ಬಂದೊದಗಲಾರದೆಂದು ಅವರು ನಿರ್ಧರಿಸಿದರು. ಅವರಲ್ಲಿ ಒಬ್ಬನು ಸ್ವಲ್ಪ ದೂರದಲ್ಲಿ ತೆರಳುತ್ತಲಿರುವ ಆ ವನಿತೆಯರನ್ನು ಕೂಗಿ ಹೀಗೆ ಹೇಳಿದನು :''ಬನ್ನಿರಿ! ನಿಮ್ಮ ಪೂಜಾಸಾಮಗ್ರಿಗಳನ್ನು ಅರ್ಚಕರಿಗೆ ಕೊಟ್ಟು ಬನ್ನಿರಿ!''

ಈ ನುಡಿಗಳನ್ನು ಶ್ರಾವಿಸಿದೊಡನೆಯೇ ಆ ಹೆಂಗಸರು ಹಿಂದಿರುಗಿ ಬಂದರು; ಭಟರು: ''ನೀವು ಈ ಫಲಪುಷ್ಪಗಳನ್ನು ಅರ್ಚಕರಿಗೆ ಕೊಟ್ಟು ಬನ್ನಿರಿ!'' ಎಂದರು.

''ಹಾಗೆಯೇ ಆಗಲಿ!''

ಹೆಂಗಸರು ದೇಗುಲದೊಳಗೆ ಪ್ರವೇಶಿಸಿದರು; ಒಳಗೆ ಅರ್ಚಕರು ಉಚ್ಚಸ್ವರದಲ್ಲಿ ಮಂತ್ರಗಳನ್ನು ಜಪಿಸುತ್ತ ದೇವಿಗೆ ಅಭಿಷೇಕವನ್ನು ಮಾಡುವದರಲ್ಲಿ ನಿರತರಾಗಿದ್ದರು. ರಾಜನಂದಿನಿಯು ನಿಂತು ಪೂಜಾವಿಧಿಗಳನ್ನು ನೋಡುತ್ತಿದ್ದಳು. ರಾಣಿಯು ಮಗಳ ಹಿಂದೆ ನಿಂತು ಕೈಜೋಡಿಸಿಕೊಂಡು ದೇವಿಯನ್ನು ಪ್ರಾರ್ಥಿಸುತ್ತಿದ್ದಳು. ರಾಜನಂದಿನಿಯು ಹೂ ಹಣ್ಣುಗಳನ್ನು ತಂದ ಹೆಂಗಸರನ್ನು ನೋಡಿ ''ಮಾಲಿನಿ!'' ಎಂದಳು.

ಆ ಹೆಂಗಸು ರಾಜಕುಮಾರಿಯ ಕಡೆಗೆ ನೋಡುತ್ತ :''ಮೆತ್ತಗೆ ಮಾತಾಡಿರಿ!'' ಎಂದಳು. ರಾಜಕುಮಾರಿಯು ಮಾಲಿನಿಯ ಕರವನ್ನು ಹಿಡಿದುಕೊಂಡು: ''ಮಾಲಿನಿ! ಮಾಲಿನಿ!'' ಎಂದು ನಡುಗುವ ಸ್ವರದಲ್ಲಿ ಕಂಬನಿ ಸುರಿಸುತ್ತ ಹೇಳಿದಳು.

''ರಾಜನಂದಿನಿ, ತಾವು ಪರಿಭ್ರಮಿಸಬೇಡಿರಿ! ಈಶ್ವರಾನುಗ್ರಹವಿದ್ದರೆ, ಎಲ್ಲವೂ ಶುಭಪ್ರದವಾಗುವದು. ಸತ್ಯಪಥದಲ್ಲಿ ಸಂಚರಿಸುವವರಿಗೆ ವಿಪತ್ತು ಸಂಭವಿಸಲಾರದು!''

''ಅದಾಗಿದೆ ನನ್ನ ಮನಸ್ಸಿಗೆ ಶಾಂತಿಯನ್ನು ನೀಡುವ ಸಂಗತಿಯು!'' ಎಂದು ದೀರ್ಘವಾದ ಒಂದು ನಿಶ್ವಾಸವನ್ನು ಹೊರಚೆಲ್ಲಿ ಚಂಪೆಯಂದಳು.

''ರಾಜನಂದಿನಿ! ಹೆಚ್ಚಿನ ಸಮಯವಿಲ್ಲ! ನನ್ನ ವಸ್ತ್ರಗಳನ್ನು ಧರಿಸಿ ಈ ಬುಟ್ಟಿಯನ್ನು ಶಿರಸ್ಸಿನ ಮೇಲಿಟ್ಟುಕೊಂಡು ಹೊರಗೆ ತೆರಳಿರಿ! ಅದರಂತೆಯೇ ಮಹಾರಾಣಿಯವರೂ ತಮ್ಮನ್ನು ಹಿಂಬಾಲಿಸಲಿ!'

"ಆದರೆ ಮಾಲಿನಿ ನಿನ್ನ ಗತಿ!"

"ರಾಜನಂದಿನಿ, ನನ್ನನ್ನು ಆ ವಿಶ್ವವ್ಯಾಪಿಯು ಸಲುಹಲಿ! ನನ್ನ ಜೀವಕ್ಕಿಂತಲೂ ಅಮೂಲ್ಯವಾದುವು ತಮ್ಮಿಬ್ಬರ ಪ್ರಾಣಗಳಾಗಿವೆ! ಕುಂತಳದ ರಾಜವಂಶವನ್ನು ರಕ್ಷಿಸಲು ನಾನು ಇಷ್ಟರವುಟ್ಟಿಗೆ ಶಕ್ತಳಾದೆನಲ್ಲ, ಎಂದು ಅಭಿಮಾನ ಪಡುವೆನು."

ಈ ನುಡಿಗಳನ್ನಾಡುವಾಗ ಮಂದಸ್ಮಿತವೊಂದು ಮಾಲಿನಿಯ ವದನ ಮಂಡಲದಲ್ಲಿ ಮೂಡಿದ್ದಿತು. ರಾಜನಂದಿನಿಯನ್ನು ರಕ್ಷಿಸಲು ಯಾವ ವಿಧದ ಸಂಕಟವನ್ನೂ ಅನುಭವಿಸಲು ಅವಳು ಸನ್ನದ್ಧಳೆಂಬ ದೃಢ ನಿಶ್ಚಯವು ಅಲ್ಲಿ ಹೊಳೆಯುತ್ತಿದ್ದಿತು.

ರಾಜನಂದಿನಿಯು ಮಾತಾಡಲಿಲ್ಲ; ಮಾಲಿನಿಯ ನಿರ್ದೇಶದಂತೆ ಗರ್ಭಗೃಹದ ಹಿಂದಿರುವ ಕತ್ತಲೆಯ ಪ್ರದೇಶಕ್ಕೆ ತೆರಳಿ ತನ್ನ ಬೆಲೆಯುಳ್ಳ ವಸ್ತ್ರಾಭರಣಗಳನ್ನು ಮಾಲಿನಿಗೆ ಕೊಟ್ಟು ಮಾಲಿನಿಯ ವಸ್ತ್ರಗಳಿಂದ ತನ್ನ ಶರೀರವನ್ನು ಆಚ್ಛಾದಿಸಿಕೊಂಡಳು. ರಾಣಿಯಾದರೂ ಅದರಂತೆಯೇ ಮಾಲಿನಿಯ ಸಂಗಾತಿನಿಯ ವಸ್ತ್ರಗಳನ್ನು ಧರಿಸಿದಳು. ಈ ರೀತಿಯ ವೇಷಪಲ್ಲಟವು ನಡೆದ ನಂತರ ರಾಣಿಯನ್ನಾಗಲೀ, ರಾಜನಂದಿನಿಯನ್ನಾಗಲೀ ಗುರುತಿಸುವದು ಸುಲಭದ ಕೆಲಸವಾಗಿರಲಿಲ್ಲ.

ಮಾಲಿನಿಯು ನುಡಿದಳು "ರಾಜನಂದಿನಿ, ಮಹಾರಾಣಿಯವರೊಡನೆ ತಾವು ನಿಶ್ಶಂಕೆಯಿಂದ ಹೊರಗಲಿನ ಬೀದಿಗೆ ತೆರಳಿರಿ. ಯಾವ ವಿಪತ್ತೂ ಸಂಭವಿಸಲಾರದು. ಪಶ್ಚಿಮದಿಕ್ಕಿಗೆ ತೆರಳಿದರೆ, ಅಲ್ಲಿ ತಮ್ಮ ಆಗಮನವನ್ನು ನಿರೀಕ್ಷಿಸುತ್ತ ಕುಳಿತಿರುವ ನಾಗರಾಜರನ್ನೂ ವಿಶ್ವಜಿತ್ತುವನ್ನೂ ಕಾಣಬಹುದು. ಅವರು ಏರ್ಪಡಿಸಿದ ಕುದುರೆಯ ಗಾಡಿಯನ್ನು ಹತ್ತಿದರೆ ಸಾಕು. ಸುರಕ್ಷಿತ ಸ್ಥಳಕ್ಕೆ ತಲುಪುವಿರಿ!"

"ಆದರೆ ಮಾಲಿನಿ, ನಿನ್ನ ಗತಿಯೇನು?"

"ರಾಜನಂದಿನಿ, ಕೆಲವು ದಿನಗಳ ಮಟ್ಟಿಗೆ ಅರಮನೆಯಲ್ಲಿ ಅರಸುಮಗಳಂತೆ ಬದುಕುವೆನು; ನನ್ನ ಈ ಸಂಗಾತಿನಿಯು ಮಹಾರಾಣಿಯಾಗುವಳು!"

"ಆದರೆ ಮಾಲಿನಿ, ಅಮಾತ್ಯನಂದನನು ಈ ತಂತ್ರವನ್ನು ಅರಿತರೆ, ಅದರಿಂದಾಗುವ ಪರಿಣಾಮವೇನೆಂಬುದನ್ನು ಬಲ್ಲೆಯಾ? ಓರ್ವ ದಾಸಿಯ ವೇಷವನ್ನು ಧರಿಸಿ ನೀನು ಇಲ್ಲಿಂದೇಕೆ ಪಾರಾಗಕೂಡದು?"

"ಆದರೆ ಆ ಪ್ರಯತ್ನದಿಂದ ತಮ್ಮ ಪ್ರಾಣವು ಸುರಕ್ಷಿತವಾಗಲಾರದು. ನಾಗರಾಜನ ಸಹಾಯದಿಂದ ತಾವು ಸುರಕ್ಷಿತ ಸ್ಥಳವನ್ನು ತಲುಪುವವರೆಗೆ

ಭಟರಿಗೂ ಅಮಾತ್ಯನಂದನನಿಗೂ ನಮ್ಮ ತಂತ್ರದ ಸುಳಿವು ಹತ್ತದಂತೆ ನೋಡಿಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದುದರಿಂದ ಸ್ವಲ್ಪ ಸಮಯದ ಮಟ್ಟಿಗೆ ತಮ್ಮ ಸ್ಥಾನವನ್ನು ನಾನು ಅಲಂಕರಿಸುವೆನು.''

ಮಾಲಿನಿಯ ಈ ಧೈರ್ಯವನ್ನೂ ತನ್ನನ್ನು ರಕ್ಷಿಸುವ ಸಲುವಾಗಿ ವಿಪತ್ತುಗಳನ್ನು ಎದುರಿಸಲು ಹೊರಟುದುದನ್ನೂ ನೋಡಿ ರಾಜನಂದಿನಿಯು ಕೃತಜ್ಞತಾಭರಿತಳಾದಳು. ಅವಳ ನೇತ್ರಗಳಿಂದ ಬಾಷ್ಪವು ಉಕ್ಕಿ ಹರಿಯ ಲಾರಂಭಿಸಿತು. ಮಾಲಿನಿಯನ್ನು ತಬ್ಬಿಕೊಂಡು ಅವಳು ಗದ್ಗದ ಕಂಠದಲ್ಲಿ: ''ಅಕ್ಕಾ, ಮಾಲಿನಿ! ನಿನ್ನ ಉಪಕಾರಗಳನ್ನು ಹೇಗೆ ಮರೆಯಲಿ? ಯಾವ ರೀತಿಯಿಂದ ಈ ಸಾಲವನ್ನು ತೀರಿಸಲಿ!'' ಎಂದಳು.

''ರಾಜನಂದಿನಿ, ತಾವು ತೆರಳಿರಿ. ನಾನು ನನ್ನ ಕರ್ತವ್ಯವನ್ನು ಮಾಡುತ್ತಿರುವೆನು. ಜೀವನದ ಉದ್ದೇಶವು ಪರೋಪಕಾರವಾಗಿದೆ. ಅನ್ಯರ ವಿಪತ್ತುಗಳನ್ನು ಪರಿಹರಿಸುವದಕ್ಕಾಗಿ ಮುಂದೆ ಬರುವದೇ ನಮ್ಮ ಧರ್ಮವು.''

ರಾಜನಂದಿನಿಯು ಮರುಮಾತಾಡಲಿಲ್ಲ; ತನ್ನ ಜನನಿಯೊಡನೆ ದೇಗುಲದಿಂದ ಹೊರಬಿದ್ದಳು. ಅಲ್ಲಿ ಕಾವಲು ನಿಂತಿದ್ದ ಭಟರಾದರೂ ಈ ಮೊದಲು ಪೂಜಾಸಾಮಗ್ರಿಗಳೊಡನೆ ದೇವಾಲಯದೊಳಗೆ ತೆರಳಿದ ವನಿತೆಯರೇ ಇವರೆಂಬ ಭಾವನೆಯಿಂದ ಈ ಹೆಂಗಸರ ಗಮನವನ್ನು ಆತಂಕ ಪಡಿಸಲಿಲ್ಲ.

ಒಂದು ಗಳಿಗೆ ಸಮಯವು ಗತಿಸಿತು. ರಾಜನಂದಿನಿಯ ವೇಷವನ್ನು ಧರಿಸಿದ್ದ ಮಾಲಿನಿಯು ತನ್ನ ಸಂಗಾತಿನಿಯೊಡನೆ ದೇಗುಲದಿಂದ ಹೊರಬಿದ್ದಳು. ಇವರಿಬ್ಬರ ಸುತ್ತಲೂ ದಾಸಿಯರಿದ್ದುದರಿಂದ ಅವರ ಮೊಗಗಳನ್ನು ನೋಡ-ಲು ಭಟರಿಗಾಗಲಿ ಚಾಕರರಿಗಾಗಲಿ ಸಾಧಿಸಲಿಲ್ಲ. ರಾಜನಂದಿನಿಯು ತಮ್ಮ ಬಲೆಯಿಂದ ಪಾರಾಗುವರೆಂಬ ಶಂಕೆಯು ಭಟರಿಗಿಲ್ಲದುದರಿಂದ ಅವರು ತಮ್ಮ ಕೆಲಸಗಳಲ್ಲಿ ಹೆಚ್ಚಿನ ದಕ್ಷತೆಯನ್ನು ತೋರಿಸಲಿಲ್ಲ.

ಯಾವ ವಿಪತ್ತೂ ಇಲ್ಲದೆ ಮಾಲಿನಿಯು ರಾಜಗೃಹವನ್ನು ಸೇರಿದಳು. ಈ ಮೊದಲೇ ಅರಮನೆಯ ಪರಿಚಯವು ಅವಳಿಗಿದ್ದುದರಿಂದ, ರಾಜನಂದಿನಿಯ ವಸತಿ ಯಾವುದೆಂಬುದನ್ನು ಬಹು ಸುಲಭದಲ್ಲಿ ಅವಳು ತಿಳಿದುಕೊಂಡಳು. ರಾಜನಂದಿನಿಯ ವಸತಿಯನ್ನು ಸೇರಿದ ನಂತರ, ಚಂಪೆಯ ವಿಶ್ವಸ್ಥದಾಸಿಯಾದ ಮಾಲತಿಯನ್ನು ಅವಳು ಕರೆದಳು

''ಏನು ತಾಯಿ?'' ಎಂದು ಆ ದಾಸಿಯು ಬಂದು ಕೈಮುಗಿದಳು.

''ಈ ದಿನ ನನ್ನ ದರ್ಶನಕ್ಕಾಗಿ ಅಮಾತ್ಯನಂದನನು ಬಂದರೆ, ಅವನನ್ನು

ಒಳಗೆ ಬಿಡಕೂಡದು. ತಿಳಿಯಿತೇ?"

"ಹೂಂ, ಅವರೊಡನೆ ಏನೆಂದು ಹೇಳಬೇಕು?"

"ನನಗೆ ಶಾರೀರಿಕ ಸೌಖ್ಯವಿಲ್ಲವೆಂದು ಹೇಳಿಬಿಡು."

"ಅವರು ನನ್ನ ನುಡಿಗಳನ್ನು ಕೇಳದೆ ಹೋದರೆ?"

"ಅದೇನು? ನನಗೆ ದೇಹಸೌಖ್ಯವಿಲ್ಲದುದರಿಂದ ಹಾಸಿಗೆಯನ್ನು ಹಿಡಿದಿರುವನೆಂದೂ ಆದುದರಿಂದ ಅವರನ್ನು ಕಾಣಲು ಶಕ್ಯವಿಲ್ಲವೆಂದೂ ತಿಳಿಸು."

"ಅಪ್ಪಣೆ ತಾಯಿ!" ಕೈಮುಗಿದು ಮಾಲತಿಯು ಹೊರಟು ಹೋದಳು.

ಆ ದಿನ ಸಂಜೆಯ ಸಮಯದಲ್ಲಿ ರಾಜನಂದಿನಿಯ ದರ್ಶನಕ್ಕಾಗಿ ಅಮಾತ್ಯನಂದನನು ಬರದೇ ಇರಲಿಲ್ಲ. ಮದನಕುಮಾರನ ದರ್ಶನಕ್ಕೆ ಅವಕಾಶವಿಲ್ಲದಂತೆ ಮಾಡಿ, ತಾನು ಸುರಕ್ಷಿತಳಾಗಿರುವದೇ ಮಾಲಿನಿಯ ಉದ್ದೇಶವಾಗಿದ್ದಿತು. ಆದುದರಿಂದಲೇ ಅವನನ್ನು ಒಳಗೆ ಬಿಡಕೂಡದೆಂದು ಅವಳು ಮಾಲತಿಗೆ ಆಜ್ಞಾಪಿಸಿದ್ದಳು. ರಾಜನಂದಿನಿಯ ದರ್ಶನಕ್ಕಾಗಿ ಅಮಾತ್ಯನಂದನನು ಬರಲು, ಮಾಲತಿಯು ವಿನಯಪೂರ್ವಕವಾಗಿ: "ಯಾರನ್ನೂ ಒಳಗೆ ಬಿಡಕೂಡದೆಂದು ರಾಜನಂದಿನಿಯವರು ಆಜ್ಞಾಪಿಸಿರುತ್ತಾರೆ" ಎಂದಳು.

"ಹೂಂ! ಅದೇನು?" ಎಂದು ಆಶ್ಚರ್ಯಭರಿತನಾಗಿ ಮದನಕುಮಾರನು ಪ್ರಶ್ನಿಸಿದನು.

"ರಾಜಕುಮಾರಿಯವರಿಗೆ ದೇಹ ಸೌಖ್ಯವಿಲ್ಲ. ಅವರು ಹಾಸಿಗೆಯನ್ನು ಹಿಡಿದಿರುವರು."

"ಯಾವ ಕಾಹಿಲೆ? ನನ್ನನ್ನೂ ಒಳಗೆ ಬಿಡಕೂಡದೆಂದು ಹೇಳಿದಳೆ?"

"ಕಾಹಿಲೆಯು ಯಾವುದೆಂಬುದು ನನಗೆ ತಿಳಿಯದು; ತಮಗೆ ಶರೀರ ಸೌಖ್ಯವಿಲ್ಲದುದರಿಂದ ವಿಶ್ರಾಮವು ಅವಶ್ಯವೆಂದೂ, ಯಾರೊಡನೆಯಾದರೂ ಮಾತಾಡುವದರಿಂದ ಶರೀರದ ಬಳಲಿಕೆಯು ವರ್ಧಿಸುವುದೆಂದೂ ಅವರು ಹೇಳಿದರು."

ಇಲ್ಲಿಯೂ ಮಂತ್ರೀಕುಮಾರನೇ ಪರಾಜಯವನ್ನು ಹೊಂದಿದನು; ಅರಸುಕುಮಾರಿಯು ಶಾರೀರಿಕ ಸೌಖ್ಯವಿಲ್ಲದೆ ಬಳಲುತ್ತಿದ್ದರೆ, ತಾನೀಗ ಅವಳ ದರ್ಶನವನ್ನು ಹೊಂದಿ ಅವಳಿಗೆ ಆವಶ್ಯವಿರುವ ವಿಶ್ರಾಂತಿಗೆ ಭಂಗವನ್ನು ತರುವದು ಅನುಚಿತವೆಂದು ಅವನು ಬಗೆದನು. ಅವನು ಮಾಲತಿಯೊಡನೆ ಹೇಳಿದನು: "ನಾಳೆಯ ದಿನ ಪ್ರಭಾತದಲ್ಲಿ ರಾಜನಂದಿನಿಯ ದರ್ಶನಕ್ಕಾಗಿ ಬರುವೆನೆಂಬುದನ್ನು ತಿಳಿಸು!"

"ಅಪ್ಪಣೆಯನ್ನು ಶಿರಸಾವಹಿಸಿದೆನು!" ಮಾಲಿನಿಯಂದಳು.

ಮದನನು ರಾಜನಂದಿನಿಯನ್ನು ನೋಡದೆ ಹಿಂದಿರುಗಿ ಹೋಗ ಬೇಕಾಗಿ ಬಂದಿತು. ತನ್ನ ತಂತ್ರವು ಜಯಪ್ರದವಾದುದನ್ನು ತಿಳಿದು ಮಾಲಿನಿಯು ಹರ್ಷವನ್ನು ತಾಳಿದಳು. ನಾಳೆ ಬೆಳಗಿನ ಹೊತ್ತು ಅಮಾತ್ಯ ನಂದನನು ಬರುವಾಗ ತಾನು ಅರಮನೆಯಲ್ಲಿ ಇದ್ದರಲ್ಲವೇ ಕಾಣುವದು? ಎಂದು ಅವಳು ತನ್ನೊಳಗೆ ತಾನೇ ನುಡಿದುಕೊಂಡಳು.

ರಾತ್ರಿಯಾಯಿತು. ಮಾಲಿನಿಯು ಮೆಲ್ಲನೆ ತನ್ನ ವಸತಿಯನ್ನು ತ್ಯಜಿಸಿ, ತನ್ನ ಸಂಗಾತಿನಿಯಿದ್ದಲ್ಲಿಗೆ ತೆರಳಿದಳು. ಅವಳು ತನ್ನ ಸಂಗಾತಿನಿಯ ಬೆನ್ನು ತಟ್ಟಿ: "ನಮಸ್ಕಾರ, ರಾಣೀಸಾಹೇಬರೇ!" ಎಂದಳು.

"ಅದೇಕೆ ಪರಿಹಾಸ! ನಾನೊಬ್ಬಳು ರಾಣಿಯಾಗಕೂಡದೇಕೆ?"

"ಹೂಂ, ಈ ದಿನವಾದರೂ ರಾಣಿಯಾಗಿ ಬಾಳುವ ಭಾಗ್ಯವು ನಿನ್ನ ಲಲಾಟದಲ್ಲಿ ಬರೆದಿದೆಯಲ್ಲ! ಸಾಕು, ನಾಳೆಯೇ ಮೃತಳಾದರೆ ಏನು ಕೊರತೆ?"

"ನಿನಗಾದರೂ ಶುಕ್ರದೆಶೆಯು ಬಂದಿದೆಯಷ್ಟೆ! ಇಲ್ಲದಿದ್ದರೆ ಅರಸು ಮಗಳಾಗುತ್ತಿದ್ದೆಯಾ?" ಎಂದು ಮೂದಲಿಸಿದಳು ಆ ಸಂಗಾತಿನಿ.

"ಸಾಕು, ನಮ್ಮ ಭಾಗ್ಯದೆಶೆಯು ಇಲ್ಲಿಗೇ ಅಂತ್ಯವಾಗಬೇಕಾದೀತು, ಎಂಬುದನ್ನು ತಿಳಿದುಕೋ! ನಾಳೆ ದಿನ ಕಾರಾಗೃಹದ ಅನ್ನವನ್ನು ತಿನ್ನ ಬೇಕಾಗಬಹುದು; ಆದುದರಿಂದ ನಾವೀಗಲೇ ಪಾರಾಗಬೇಕು!"

"ಆದರೆ ಹೇಗೆ? ಮಾಲಿನಿ, ಅಸಾಧ್ಯವಲ್ಲವೇ ಅದು?"

"ಅಸಾಧ್ಯವೆಂಬುದು ಅರಸರ ಮತ್ತು ಅವಿವೇಕಶಿರೋಮಣಿಗಳ ವೇದಮಂತ್ರವು! ಈ ಲೋಕದಲ್ಲಿ ಉತ್ಸಾಹಶಾಲಿಗೆ ಅಸಾಧ್ಯವೆಂಬ ಮಾತೇ ಇಲ್ಲ."

"ಹೂಂ-ಪ್ರಾರಂಭವಾಯಿತು, ತತ್ವಜ್ಞಾನ. ಓರ್ವ ಸೇನಾಪತಿಯ ಕರವನ್ನು ಹಿಡಿಯುವದರ ಬದಲು, ಒಬ್ಬ ತತ್ವಜ್ಞನ ಮಡದಿಯಾಗಿದ್ದರೆ ಚೆನ್ನಾಗುತ್ತಿತ್ತು."

"ಈಗ ಇರುವುದರಲ್ಲಿ ಏನು ಕೊರತೆ? ತತ್ವಶಾಸ್ತ್ರದ ತಳಹದಿ ಇಲ್ಲದ ಜೀವನವು ವ್ಯರ್ಥ! ಪ್ರತಿಯೊಂದು ಕೆಲಸದ ಹಿಂದೆಯೂ ತತ್ವಜ್ಞನ ದೃಷ್ಟಿಯಿಲ್ಲದಿದ್ದರೆ, ಜೀವನವು ಫಲಶೂನ್ಯವಾಗಿ ಹೋಗುವುದು, ಅದೇನೇ ಇರಲಿ. ಹೊರಡು; ನಮ್ಮ ಈಗಲಿನ ವೇಷಧಾರಣೆಯನ್ನು ಬೇಗನೆ ತ್ಯಜಿಸಬೇಕು."

ಅವಳ ಸಂಗಾತಿನಿಯು ಮಾತಾಡಲಿಲ್ಲ; ಅವಳು ಮಾಲಿನಿಯನ್ನು ಹಿಂಬಾಲಿಸಿದಳು. ಇಬ್ಬರೂ ಮೌನವನ್ನವಲಂಬಿಸಿ ರಾಜಗೃಹದಿಂದ ಹೊರಬಿದ್ದರು. ಸುತ್ತಲೂ ಕತ್ತಲೆಯು ವ್ಯಾಪಿಸಿದ್ದಿತು. ಆಕಾಶದಲ್ಲಿ ಅಲ್ಲಲ್ಲಿ

ನಕ್ಷತ್ರಗಳು ನಿಂತು ಮೌನದಲ್ಲಿ ವಿಶ್ವರಂಗವನ್ನು ವೀಕ್ಷಿಸುತ್ತಲಿದ್ದುವು. ಮೂಡಣದ ಗಗನಸಾಗರದಲ್ಲಿ ಒಂದೆರಡು ಮುಗಿಲ ಹಡಗುಗಳು ತೇಲುತ್ತಲಿದ್ದವು. ದೂರದ ಒಂದು ಗುಡಿಯ ಗೋಪುರದ ತುದಿಯಲ್ಲಿ ಬೆಳಗುತ್ತಿರುವ ದೀಪವು 'ಮಿಣಿ ಮಿಣಿ' ಎಂದು ಉರಿಯುತ್ತಲಿದ್ದಿತು. ಮೌನದಲ್ಲಿ ಈ ದೃಶ್ಯವನ್ನು ನೋಡುತ್ತ, ಆ ವನಿತೆಯರು ರಾಜಗೃಹದಿಂದ ಹೊರಬಿದ್ದು, ತೆಂಕಣದ ಭಾಗಕ್ಕೆ ತೆರಳಿದರು.

ಎತ್ತರವಾದ ಗೋಡೆಯು ಮಹಾಭೂತದಂತೆ ನಿಂತಿದೆ; ಈ ಗೋಡೆಯನ್ನು ದಾಟದೆ ಹೊರಗೆ ತೆರಳಲು ನಿರ್ವಾಹವಿಲ್ಲ. ಹೆಬ್ಬಾಗಿಲಿಗಾಗಿ ತೆರಳುವದೆಂದರೆ, ಪ್ರಯಾಸದ ಕೆಲಸ. ಯಮದೂತರಂತಿರುವ ಕಾವಲುಗಾರರು ಅಲ್ಲಿ ನಿಂತಿರುವಾಗ ಅವರ ಕಣ್ಣುಗಳಿಗೆ ಬೀಳದೆ ಪಾರಾಗುವುದೆಂದರೆ, ಅತ್ಯಂತ ಸಾಹಸದ ಕೆಲಸವೇ ಸರಿ! ಆ ದಾರಿಯಲ್ಲಿ ತೆರಳುವದೆಂದರೆ, ಕಟುಕನ ಕರಗಳಿಗೆ ಕೊರಳನ್ನು ಕೊಟ್ಟ ಹಾಗಾಗುವದು, ಎಂಬದನ್ನು ಮಾಲಿನಿಯು ತಿಳಿದುದರಿಂದ, ಆ ಮಾರ್ಗವನ್ನು ಅವಳು ಅವಲಂಬಿಸಲಿಲ್ಲ.

ಮೌನದಲ್ಲಿ ಅವರಿಬ್ಬರೂ ಗೋಡೆಯ ಸಮೀಪಕ್ಕೆ ತೆರಳಿದರು. ಗೋಡೆಯ ಆಚೆಯ ಭಾಗದಿಂದ ಒಂದು ಸಪ್ಪಳವು ಕೇಳಿ ಬಂದಿತು. ಆ ಶಬ್ದವು ಮಾಲಿನಿಯ ಹೃದಯದಲ್ಲಿ ಉತ್ಸಾಹವನ್ನು ಹೆಚ್ಚಿಸಿತು. ಇನ್ನೊಂದು ನಿಮಿಷದಲ್ಲಿಯೇ ಗೋಡೆಯ ಆಚೆಯ ಬದಿಯಿಂದ ಒಂದು ರಜ್ಜುವು ಬಂದಿತು. ಆ ಹಗ್ಗವನ್ನು ಕಂಡೊಡನೆಯೇ ಮಾಲಿನಿಯು ಹೇಳಿದಳು ತನ್ನ ಸಂಗಾತಿನಿಯೊಡನೆ: "ನೀನು ಈ ಹಗ್ಗವನ್ನು ಹಿಡಿದುಕೊಂಡು ಪಾರಾಗು!"

"ಆದರೆ ನೀನು?" ಎಂದಳು ಅವಳು.

"ನೀನು ಮೊದಲು ತೆರಳು; ನಾಗರಾಜ ಮತ್ತು ವಿಶ್ವಜಿತ್ತು ಇವರಿಬ್ಬರ ನುಡಿಗಳಲ್ಲಿ ನಂಬಿಕೆಯನ್ನಿಟ್ಟು, ಈ ಉದ್ಯಮವನ್ನು ನೆರವೇರಿಸಿದ ನಿನ್ನನ್ನು ಈ ಬಂಧನದಿಂದ ಪಾರು ಮಾಡುವುದು ನನ್ನ ಆದ್ಯ ಕರ್ತವ್ಯವಾಗಿದೆ. ನೀನು ಸುರಕ್ಷಿತವಾಗಿ ಆ ಭಾಗವನ್ನು ತಲುಪಿದ ಅನಂತರ ನಾನು ಬರುವೆನು"

ಮಾಲಿನಿಯ ನುಡಿಗಳನ್ನು ಅವಳ ಸಂಗಡಿಗಳು ಅನುಸರಿಸಿದಳು; ಅವಳು ಹಗ್ಗವನ್ನು ಹಿಡಿದೆಳೆದಳು; ಆದರೆ ಆ ಭಾಗದಲ್ಲಿ ಯಾರೋ ಅದರ ಇನ್ನೊಂದು ತುದಿಯನ್ನು ಹಿಡಿದುದರಿಂದ ಆ ಹಗ್ಗವು ಬರಲಿಲ್ಲ. ಅವಳು ಆ ರಜ್ಜುವನ್ನು ಹಿಡಿದುಕೊಂಡು ತನ್ನ ಪಾದಗಳಿಂದ ಗೋಡೆಯನ್ನು ಒತ್ತಿ ಮೆಲ್ಲಮೆಲ್ಲನೆ ಮೇಲಕ್ಕೆ ಹತ್ತಲಾರಂಭಿಸಿದಳು. ಹತ್ತು ಹನ್ನೆರಡು ನಿಮಿಷಗಳು ಕಳೆಯುವದರೊಳಗಾಗಿ ಗೋಡೆಯ ಮೇಲಕ್ಕೆ ಅವಳು ತಲುಪಿದಳು.

ಆ ಗೋಡೆಯ ಇನ್ನೊಂದು ಭಾಗದಲ್ಲಿ ಇಬ್ಬರು ಪುರುಷರು ಆ ಹಗ್ಗವನ್ನು ಭದ್ರವಾಗಿ ಹಿಡಿದುಕೊಂಡು ನಿಂತಿರುವದು ದೃಗ್ಗೋಚರವಾಯಿತು. ಆ ಕಡೆಯ ಗೋಡೆಗೆ ಅವರು ಮಡಗಿದ್ದ ಏಣಿಯ ಮೂಲಕ ಅವಳು ಕೆಳಗಿಳಿದಳು.

ಇನ್ನೇನು? ಮಾಲಿನಿಯು ಪಾರಾಗಬೇಕು. ತನ್ನ ಸಂಗಡಿಗಳು ಹತ್ತಿದಂತೆಯೇ ಅವಳೂ ಹಗ್ಗವನ್ನು ಕೈಗಳಲ್ಲಿ ಹಿಡಿದುಕೊಂಡು ಗೋಡೆಯನ್ನು ತನ್ನ ಪಾದಗಳಿಂದ ಒತ್ತಿ ಹಿಡಿದು ಮೆಲ್ಲಮೆಲ್ಲನೆ ಮೇಲಕ್ಕೆ ಹತ್ತಿದಳು. ಗೋಡೆಯ ಮೇಲೇರಿದ ನಂತರ, ಏಣಿಯ ಸಹಾಯದಿಂದ ಸುರಕ್ಷಿತವಾಗಿ ಆ ಕಡೆಯ ಭೂಮಿಯನ್ನು ಸೇರಿದಳು. ಅವರ ಸಹಾಯಕ್ಕಾಗಿ ಆ ಭಾಗದಲ್ಲಿ ನಿಂತಿದ್ದ ಪುರುಷರು ನಾಗರಾಜನೂ ವಿಶ್ವಜಿತ್ತೂ ಆಗಿದ್ದರು. ಹೆಂಗಸರಿಬ್ಬರೂ ಪಾರಾದ ನಂತರ, ನಾಗರಾಜನು ಹೇಳಿದನು:—"ಈ ಓರ್ವ ಅನ್ನವಿಕ್ರಯಿಣಿಯು ಇಷ್ಟು ಸಾಹಸವನ್ನು ಮಾಡುವಳೆಂದು ನಾನು ನಂಬಿರಲಿಲ್ಲ."

"ಆದರೆ ಇವಳ ಧಮನಿಗಳಲ್ಲಿಯೂ ವೀರರಕ್ತವು ಹರಿಯುತ್ತಿದೆ." ಎಂದು ವಿಶ್ವಜಿತ್ತು ಹೇಳಿದನು.

ಮಾಲಿನಿಯ ಸಂಗಡಿಗಳು ಬೇರೆ ಯಾರೂ ಆಗಿರದೆ, ನಮಗೆ ಪರಿಚಿತಳಾದ ಆ ಅನ್ನವಿಕ್ರಯಿಣಿಯಾಗಿದ್ದಳು. ನಾಲ್ವರೂ ಆ ಪ್ರದೇಶವನ್ನು ತ್ಯಜಿಸಿ, ಕತ್ತಲೆಯಲ್ಲಿ ಮಾಲಿನಿಯ ವಸತಿಗೆ ತೆರಳಿದರು.

---

## ಚಂದ್ರಹಾಸನ ವಿಮೋಚನೆ.

ಜನಶೂನ್ಯವಾದ ಹಳ್ಳಿಗಾಡಿನಲ್ಲಿ ಅದೊಂದು ನಿಲಯ; ಅದನ್ನು ನಿಲಯವೆಂದೆನ್ನುವದಕ್ಕಿಂತಲೂ ಮನೆಯ ಆಕಾರದಲ್ಲಿ ನಿರ್ಮಿತವಾದ ಒಂದು ಗುಹೆ ಎಂದು ಹೇಳಿದರೆ ಒಪ್ಪುವುದು. ಜನಸಂಚಾರವಿಲ್ಲದ ಪ್ರದೇಶದ ಆ ಮನೆಯಾದರೂ ಎರಡು ಕೋಣೆಗಳಿಂದ ಕೂಡಿದುದಾಗಿದೆ. ವಾಯು ಸಂಚಾರಕ್ಕಾಗಲಿ, ಬೆಳಕು ಲಭಿಸುವದಕ್ಕಾಗಲಿ, ಆ ಮನೆಗೆ ಕಿಟಕಿಗಳಾಗಲಿ ಇತರ ದ್ವಾರಗಳಾಗಲಿ ಇಲ್ಲವೇ ಇಲ್ಲ. ಮನುಷ್ಯನನ್ನು ಸೆರೆಯಲ್ಲಿಡುವುದಕ್ಕಲ್ಲದೆ, ಅದಕ್ಕಿಂತಲೂ ಹೆಚ್ಚಿನ ಉಪಯೋಗವು ಅದರಿಂದ ಲಭಿಸುವಂತಿಲ್ಲ.

ಮಂದಿರದ ಕದಗಳು ಮುಚ್ಚಲ್ಪಟ್ಟಿರುವದರಿಂದ ಅದರೊಳಗೆ ಬಂಧನಸ್ಥನಾಗಿರುವ ವ್ಯಕ್ತಿಯು ಯಾರೆಂಬುದನ್ನು ತಿಳಿಯಲು ಸಾಧ್ಯವಿಲ್ಲ. ಆದರೂ ಮನೆಯೊಳಗಿನಿಂದ ಕೆಮ್ಮುವ ಹಾಗು ನಿಟ್ಟುಸಿರು ಬಿಡುವ ಸಪ್ಪಳದಿಂದ ಆ ಗುಹೆಯಲ್ಲಿ ಒಂದು ನರಜೀವಿಯು ಅಸಹ್ಯವಾದ ಯಾತನೆಗಳನ್ನು

ಅನುಭವಿಸುತ್ತಲಿದೆ ಎಂಬುದನ್ನು ತಿಳಿದುಕೊಳ್ಳಬಹುದು. ಒಬ್ಬ ಪಹರೆಯವನು ತನ್ನ ಕರದಲ್ಲಿ ಒಂದು ನಗ್ನ ಖಡ್ಗವನ್ನು ಹಿಡಿದುಕೊಂಡು ಆ ಮನೆಯ ಜಗುಲಿಯ ಮೇಲೆ ಕುಳಿತಿದ್ದನು.

ರಾತ್ರಿಯ ಸಮಯವು ಅದು. ಸೂರ್ಯಾಸ್ತಮಾನವಾಗಿ ನಾಲ್ಕೆಂಟು ಗಳಿಗೆಗಳಾಗಿರಬಹುದು. ದ್ವಾದಶೀ ಚಂದ್ರಮನು ಗಗನಾಂಗಣದಲ್ಲಿ ತನ್ನ ಅಪೂರ್ಣವಾದ ವದನಮಂಡಲವನ್ನು ತೋರಿಸುತ್ತಿರುವನು. ಶಶಾಂಕನು ಧವಳವರ್ಣದ ಜ್ಯೋತ್ಸ್ನವನ್ನು ಮನೆಯ ಜಗುಲಿಯ ಮೇಲೆ ಪತಿಸಿ, ಬೆಳಕನ್ನು ನೀಡುತ್ತಿರುವನು. ಪಹರೆಯವನಾದರೂ ಜಗುಲಿಯಲ್ಲಿ ಬೆಂಕಿಯನ್ನಿರಿಸಿ, ಅದರಿಂದ ಲಭಿಸಬಹುದಾದ● ಶಾಖವನ್ನು ಅನುಭವಿಸುತ್ತ ಶೈತ್ಯದ ಬಾಧೆಯನ್ನು ಹೋಗಲಾಡಿಸಿಕೊಳ್ಳುತ್ತಿರುವನು. ಕಾವಲುಗಾರನ ವಯಸ್ಸು ೨೩-೨೪ ಇರಹುದು. ಹೆಚ್ಚಿನ ರೂಪರಾಶಿಯನ್ನು ವಿಧಾತನು ದಯಪಾಲಿಸದಿದ್ದರೂ, ಅವನು ಕುರೂಪಿಯಲ್ಲ. ಅವನು ಹಲವು ವಿಚಾರಗಳಲ್ಲಿ ಮಗ್ನನಾಗಿ ಸ್ವಪ್ನಸಾಮ್ರಾಜ್ಯದ ಸುಖವನ್ನು ಸವಿಯುತ್ತಲಿದ್ದನು

ಯಾರೋ ಬರುತ್ತಿರುವ ಸಪ್ಪಳವು ಕೇಳಬಂದಿತು. ಅವನು ಶಿರವನ್ನೆತ್ತಿ ನೋಡಿದನು. ೧೭-೧೮ ವರ್ಷದ ತರುಣಿಯೋರ್ವಳು-ತರುಣಿಯೆಂದು ಮಾತ್ರವಲ್ಲ, ಅತ್ಯಂತ ರೂಪವತಿಯಾದ ಹೆಂಗುಸೊಬ್ಬಳು-ಬಂದು ಮನೆಯ ಮುಂದೆ ನಿಂತಿರುವದು ಪಹರೆಯವನಿಗೆ ದೃಗ್ಗೋಚರವಾಯಿತು. ಈ ನಿರ್ಜನ ಪ್ರದೇಶಕ್ಕೆ-ಅದರಲ್ಲಿಯೂ ಈ ರಾತ್ರಿಯ ವೇಳೆಯಲ್ಲಿ-ಓರ್ವ ವನಿತೆಯು ಏಕಾಂಗಿಯಾಗಿ ಬಂದಿರುವದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಆತನು ಅವಳನ್ನು ಎರಡು ನಿಮಿಷಗಳ ವರೆಗೆ ಎವೆಯಿಕ್ಕದೆ ನೋಡಿದನು. ಅವಳ ವಸ್ತ್ರಗಳು ಅತ್ಯಂತ ಮಲಿನವಾಗಿದ್ದವು ಎಂದು ಮಾತ್ರವಲ್ಲ; ಅವು ಅಲ್ಲಲ್ಲಿ ಹರಿದು ಹೋಗಿದ್ದವು. ಕೇಶರಾಶಿಯು ಅವ್ಯವಸ್ಥಿತವಾಗಿ ಅವಳ ಭುಜಗಳ ಮೇಲೆ ಬಿದ್ದಿತ್ತು. ಅವಳ ವೇಷವು ಅವಳೋರ್ವ ಭಿಕ್ಷುಕಿಯಾಗಿದ್ದಳೆಂಬುದಾಗಿ ನುಡಿಯುತ್ತಲಿದ್ದಿತು; ಆದರೆ ಅವಳ ವದನಮಂಡಲದಲ್ಲಿ ಹೊಳೆಯುತ್ತಿರುವ ಕಾಂತಿ, ದೃಢನಿಶ್ಚಯವನ್ನು ಹೊರಚೆಲ್ಲುವ ಆ ನೇತ್ರಗಳು ಅವಳೋರ್ವ ಅಸಾಮಾನ್ಯ ವನಿತೆಯೆಂಬುದಾಗಿ ಹೇಳುತ್ತಿದ್ದವು

"ನೀನು ಯಾರು?" ಎಂದು ಆಶ್ಚರ್ಯಚಕಿತನಾಗಿ ಪಹರೆಯವನು ಪ್ರಶ್ನಿಸಿದನು.

"ನಾನೊಬ್ಬಳು ಭಿಕ್ಷುಕಿಯು!" ಎಂದಳು ಆ ಹೆಂಗಸು.

"ಈ ರಾತಿಯಲ್ಲಿ ಇಲ್ಲಿಗೇಕೆ ಬಂದೆ?"

"ಇಲ್ಲಿಗಲ್ಲದೆ ಇನ್ನೆಲ್ಲಿಗೆ ತೆರಳಲಿ ಸ್ವಾಮಿ? ನಾನು ಯಾಚಕಿಯು. ನಿಮ್ಮಂಥ ಮಹಾನುಭಾವರ ಕೃಪೆಯಿಂದ ಹೊಟ್ಟೆಯನ್ನು ಹೊರೆದು ಜೀವಿಸುವವಳು ನಾನು! ಜನರಲ್ಲಿ ಬೇಡಿ, ಸಿಕ್ಕಿದ ಕಾಳುಗಳಿಂದ ಹೊಟ್ಟೆಯನ್ನು ಹೊರೆಯುವವಳು. ಆ ಹಳ್ಳಿಯಿಂದ ಭಿಕ್ಷೆಯನ್ನು ಬೇಡಿ ಮುಂದೆ ತೆರಳಲು ಹೊರಟೆನು. ದಾರಿಯಲ್ಲಿ ಕತ್ತಲೆಯಾಯಿತು; ರಾತ್ರಿ ಕಾಡಿನಲ್ಲಿ ಹೆಂಗುಸಾದ ನಾನು ಅಲೆಯಬೇಕಾಗಿ ಬಂದಿತು. ಈ ಸಂದರ್ಭದಲ್ಲಿ ಇಲ್ಲಿ ಉರಿಯುತ್ತಿರುವ ಬೆಂಕಿಯನ್ನು ಕಂಡು, ಇಲ್ಲಿ ಜನವಾಸವಿರಬಹುದೆಂದು ವಿಚಾರಿಸಿ ಇಲ್ಲಿಗೆ ಬಂದೆನು. ದಯವಿಟ್ಟು ತಾವು ಈ ರಾತ್ರಿಯನ್ನು ಕಳೆಯಲು ನನಗೆ ಇಲ್ಲಿ ಸ್ಥಾನವನ್ನು ಕೊಡಬೇಕು."

"ಆದರೆ ಇಲ್ಲಿ ಯಾರನ್ನೂ ಬರಲು ಬಿಡಕೂಡದೆಂದು ಅಮಾತ್ಯರ ಅಪ್ಪಣೆಯಾಗಿದೆ."

"ನನ್ನಂಥ ಓರ್ವ ಅನಾಥಳು ಇಲ್ಲಿ ನಿದ್ರಿಸುವದರಿಂದ ಯಾವ ಪ್ರಮಾದವೂ ಸಂಭವಿಸಲಾರದು."

"ಇಲ್ಲಿ ಒಬ್ಬ ಕೈದಿಯಿರುವನು!"

"ಅದರಿಂದೇನು? ಸೂರ್ಯೋದಯವಾಗುವ ಮೊದಲೇ ನಾನು ಈ ಸ್ಥಳವನ್ನು ಪರಿತ್ಯಜಿಸುವೆನು; ನನಗೆ ತಾವು ಸ್ಥಳವನ್ನು ಕೊಟ್ಟಿರುವಿರಿ, ಎಂಬುದನ್ನು ಯಾರೂ ತಿಳಿಯಲಾರರು." ಎಂದು ನುಡಿದು, ಆ ಯಾಚಕಿಯು ತನ್ನ ಕಡೆಗಣ್ಣಿನ ಕಟಾಕ್ಷವನ್ನೂ ಮಂದಸ್ಮಿತವನ್ನೂ ಬೀರುತ್ತ ಪಹರೆಯವನಿಗೆ ಅರ್ಪಿಸಿದಳು.

ಪಹರೆಯವನು ತರುಣನೆಂಬುದನ್ನು ಈ ಮೊದಲೆ ನಾನು ನುಡಿದಿರುವೆನಷ್ಟೆ? ತರುಣರ ಮನಸ್ಸಿಗೆ ಸ್ವಾಭಾವಿಕವಾಗಿ ತೋರುತ್ತಿರುವ ಚಾಪಲ್ಯವು ಅವನಲ್ಲಿ ಪರಿಪೂರ್ಣವಾಗಿ ತಾಂಡವವಾಡುತ್ತಿತ್ತು. ಆತ್ಮಸಂಯಮನವಾಗಲಿ, ಇಂದ್ರಿಯ ನಿಗ್ರಹವಾಗಲಿ ಅವನಿಗೆ ತಿಳಿಯವು. ಸಂದರ್ಭವು ದೊರಕಿದಾಗ ತನ್ನಲ್ಲಿ ಅಡಗಿರುವ ಪೈಶಾಚಿಕ ವಾಸನೆಯನ್ನು ಸಂತೃಪ್ತಿಗೊಳಿಸಲು ಹಿಂಜರಿಯುವ ಹೇಡಿಯು ಅವನಾಗಿರಲಿಲ್ಲ. ಯಾಚಕಿಯ ರೂಪರಾಶಿಯು ಅವನ ಮನಸ್ಸನ್ನು ಆಕರ್ಷಿಸಿತು. ಅವಳ ಮಂದಹಾಸವೂ, ಕಡೆಗಣ್ಣಿನ ನೋಟವೂ ಅವನಲ್ಲಿರುವ ವಿಕಾರಗಳನ್ನು ಉದ್ರೇಕಗೊಳಿಸಿದುವು. ಜೀವ ಎಂದಿರುವಾಗ, ಕೈಗೆಬರುವ ಸುಖಭೋಗಗಳನ್ನು ತ್ಯಜಿಸಬಾರದೆಂಬ ಸಿದ್ಧಾಂತವನ್ನು ಕೈಗೊಂಡಿದ್ದ ಆ ಮೃಗೀಯ ಮನಃಸ್ಥಿತಿಯ ತರುಣನು, ಈ ತರುಣಿಯಲ್ಲಿ ತನ್ನ ವಿಕಾರಗಳನ್ನು ಆ ರಾತ್ರಿ ಸಂತೃಪ್ತಿಗೊಳಿಸಬೇಕೆಂದು

ನಿರ್ಧರಿಸಿದನು. ಆವನಾದರೂ ತನ್ನ ಹುಬ್ಬನ್ನು ಒಂದು ಬಾರಿ ಹಾರಿಸಿ, ಎಳೆನಗೆಯನ್ನು ಹೊರಚಲ್ಲಿದನು.

"ಹೂಂ, ನೀನು ಒಳ್ಳೆಯವಳೆಂದು ತೋರುತ್ತದೆ. ಒಳ್ಳೆಯದು, ಈ ರಾತ್ರಿ ಇಲ್ಲಿರಬಹುದು."

"ತಾವು ಬಹಳೇ ಉದಾರಿಗಳು!" ಎಂದು ಕೊರಳನ್ನು ಕೊಂಕಿಸುತ್ತ ಅವಳು ಹೇಳಿದಳು. "ತಮ್ಮ ಉಪಕಾರವನ್ನು ಎಂದಿಗೂ ಮರೆಯಲಾರೆನು."

ಅಲ್ಲಿ ಉರಿಯುತ್ತಿರುವ ಅಗ್ನಿಕುಂಡದ ಸಮೀಪದಲ್ಲಿ ಅವಳು ಸ್ಥಾನ ವನ್ನು ಹಿಡಿದಳು. ಅವಳು ತನ್ನ ಮೃದುಮಧುರವಾದ ಸ್ವರದಲ್ಲಿ ಹೇಳಿ ದಳು: "ತಾವು ಏಕಾಂಗಿಯಾಗಿ ಇಲ್ಲಿ ದಿನಗಳನ್ನು ಕಳೆಯುತ್ತಿರುವಿರೋ?"

"ಹೂಂ, ನಾನೊಬ್ಬನೇ!" "ತಮಗೆ ಕುಟುಂಬವಿಲ್ಲವೇ?"

"ಇದೆ ರಾಜಧಾನಿಯಲ್ಲಿ! ಮಡದಿಯನ್ನು ಕಾಣದೆ ಮೂರು ತಿಂಗಳು ಗಳಾದವು."

"ಅಯ್ಯೋ! ಪಾಪ!" ಎಂದು ಅನುತಾಪವನ್ನು ಸೂಚಿಸುತ್ತ ಅವಳು ನುಡಿದಳು."

"ಹೊಟ್ಟೆಯ ಪಾಡಿಗಾಗಿ ಈ ರೀತಿ ಬಳಲಬೇಕಾಗಿದೆ."

ಈ ರೀತಿ ಅವರ ಸಂಭಾಷಣೆಯು ಮುಂದುವರಿಯಿತು. ಅದು ಹೆಚ್ಚು ಪ್ರಾಧಾನ್ಯವಿಲ್ಲದುದರಿಂದ ಅದನ್ನು ನಾನು ಇಲ್ಲಿ ಉದ್ಧರಿಸುವದಿಲ್ಲ. ಈ ಸಂಭಾಷಣೆಯಲ್ಲಿ ವಿಷಯವಾಸನೆಯು ತುಂಬಿ ತುಳುಕುತ್ತಿತ್ತೆಂದು ಇಲ್ಲಿ ಹೇಳಿದರೆ ಸಾಕಾಗಬಹುದು. ಯಾಚಕಿಯಾದರೂ ಅವನ ಮೇಲೆ ತನ್ನ ಬಲೆ ಯನ್ನು ಬೀಸಲು ಉದ್ಯುಕ್ತಳಾಗಿರುವಂತೆ ತೋರುತ್ತಿದ್ದಿತು. ಎಳೆನಗೆ, ಪ್ರೇಮಕಟಾಕ್ಷ ಇವುಗಳಿಂದ ಆಗಾಗ ಅವನ ಮನಸ್ಸನ್ನು ಸೂರೆಮಾಡುತ್ತಿ ದ್ದಳು. ಅವನಾದರೂ ಅವಳ ನುಡಿಗಳಿಗೆ ಮುಗ್ಧನಾಗಿ ಹೋಗಿದ್ದನು. ತನ್ನ ಜನ್ಮವಿಂದಿಗೆ ಸಫಲವಾಗುವುದೆಂದು ಅವನು ನೆನೆದನು.

ಸಮಯವು ಗತಿಸಿತು; ಹಲವು ವಿನೋದದ ಮಾತುಗಳಿಂದ ಅವನನ್ನು ಯಾಚಕಿಯು ಸಂತೋಷಗೊಳಿಸಿದಳು. ತನ್ನ ಮನೋಹರ ಕಂಠಸ್ವರ ದಲ್ಲಿ ಅವಳು ಹಾಡಿದಳು. ಅವಳ ಸಂಗೀತವನ್ನು ಕೇಳಿ ಸಂತುಷ್ಟನಾದ ಆ ಪಹರೆಯವನು, "ನಿನಗೆ ಸಂಗೀತದಲ್ಲ ಪರಿಚಯವಿರುವಂತೆ ತೋರುತ್ತದೆ." ಎಂದನು.

"ಏನೋ ಸ್ವಲ್ಪ ಕಲಿತಿರುವೆನು; ಆದರಿಂದ ತಾವು ಸಂತುಷ್ಟರಾದರೆ, ಅದು ನನ್ನ ಭಾಗ್ಯವೆಂದು ವಿಚಾರಿಸುತ್ತೇನೆ."

"ಚೆನ್ನಾಗಿದೆ ಇದುವರೆಗೆ ಇಷ್ಟು ಸೊಗಸಾದ ಸಂಗೀತವನ್ನು ನಾನೆ ಲ್ಲಿಯೂ ಶ್ರಾವಿಸಲಿಲ್ಲ."

"ತಮ್ಮ ಈ ಸ್ತುತಿಗೆ ಎಷ್ಟರ ಮಟ್ಟಿಗೆ ನಾನು ಪಾತ್ರಳೆಂಬುದನ್ನು ಹೇಳಲಾರೆನು; ಇರಲಿ. ಸ್ವಲ್ಪ ತಾಂಬೂಲವನ್ನು ಚರ್ವಿಸುವಿರಾ? ನೆರೆಯೂ ರಿನ ಧನಿಕರ ಮನೆಯಲ್ಲಿ ನಿನ್ನೆ ಒಂದು ಮದುವೆಯಿತ್ತು. ಇದು ಅಲ್ಲಿ ಸಿಕ್ಕಿದ್ದಾಗಿದೆ; ಬಹಳ ಚೆನ್ನಾಗಿದೆ. ಸ್ವಲ್ಪ ಹಾಕಿಕೊಳ್ಳಿ!"

ಎಂದು ನುಡಿದು, ಯಾಚಕಿಯು ತನ್ನ ಕಂಕುಳದಲ್ಲಿರುವ ಒಂದು ಚೀಲ ವನ್ನು ಹೊರತೆಗೆದಳು. ಅದರೊಳಗಿನಿಂದ ನಾಲ್ಕಾರು ಹಸನಾದ ವೀಳ್ಯದೆಲೆ ಗಳನ್ನೂ ಸುಗಂಧಮಿಶ್ರಿತ ಅಡಿಕೆ ಪುಡಿಯನ್ನೂ ತೆಗೆದು ಅವುಗಳನ್ನು ಪಹರೆಯವನ ಕೈಯಲ್ಲಿ ಕೊಟ್ಟಳು. ಅದು ತನಗೆ ಲಭಿಸಿದ ಮಹಾ ಪ್ರಸಾದವೆಂದು ಭಾವಿಸಿ ಆತನು ಸ್ವೀಕರಿಸಿದನು. ಅವನು ಆ ತಾಂಬೂಲ ವನ್ನು ಚರ್ವಿಸಿದ ನಂತರ "ಬೇಷ್! ಬಹು ಸೊಗಸಾಗಿದೆ!" ಎಂದನು.

"ಹೌದು, ಸೊಗಸಾಗಿದೆ. ಅವರು ಇದನ್ನೇ ನನಗೂ ಕೊಟ್ಟರು. ಆ ದೊಡ್ಡಮನೆಯವರು ಬಹಳ ಉದಾರಿಗಳು" ಎಂದಳು ಯಾಚಕಿಯು!

ಹತ್ತು ನಿಮಿಷಗಳ ಸಮಯವು ಗತಿಸಿತು; ಪಹರೆಯವನು ಹೇಳಿದನು: "ನನಗೇಕೋ ನಿದ್ರೆಬರುತ್ತಿದೆಯಲ್ಲ!"

"ನೇರವು ಬಹಳವಾಯಿತು; ಇಷ್ಟು ಹೊತ್ತಿನವರೆಗೆ ಮಾತಾಡುತ್ತ ಕುಳಿತಿದ್ದುದರಿಂದ ತಮಗೆ ಬಹಳ ಆಯಾಸವಾಗಿರಬಹುದು. ನನ್ನಿಂದ ಪಾಹು! ತಮಗೇಕೆ ತೊಂದರೆಯಾಗಬೇಕು? ಅಗತ್ಯವಾಗಿ ನಿದ್ರಿಸಿರಿ."

"ನಾನು ಸ್ವಲ್ಪ ನಿದ್ರಿಸುವೆನು." ಎಂದು ನುಡಿದು, ಪಹರೆಯವನು ತನ್ನ ದುಪಟೆಯನ್ನು ಹಾಸಿ ಮಲಗಿದನು. ಸ್ವಲ್ಪ ಹೊತ್ತಿನಲ್ಲಿಯೇ ನಿದ್ರಾಂ ಗನೆಯ ಕೃಪಾಕಟಾಕ್ಷ ವೀಕ್ಷಣಕ್ಕೆ ಅವನು ಪಾತ್ರೀಭವಿಸಿದನು. ಆ ಬಡ ಪಾಯಿಯು ಕುಂಭಕರ್ಣನಂತೆ ಗೊರಕೆ ಹೊಡೆಯುತ್ತ ನಿದ್ರಿಸುವದನ್ನು ಅವಲೋಕಿಸಿ, ತನ್ನ ತಂತ್ರವು ಸಫಲವಾಯಿತೆಂಬ ಹರ್ಷವು ಆ ವನಿತೆಯ ಮುಖಕಮಲದಲ್ಲಿ ರಾಜಿಸಿತು.

ಅವಳು ಮೆಲ್ಲನೆ ಪಹರೆಗಾರನ ಉತ್ತರೀಯವನ್ನು ಬಿಚ್ಚಿ ನೋಡಿದಳು. ಅದರಲ್ಲಿ ಆ ಗವಿಯ ಬೀಗದ ಕೀಲು ಇದ್ದಿತು. ಆ ಯಾಚಕಿಯು ಅದನ್ನು ತನ್ನ ಕರವಶಪಡಿಸಿಕೊಂಡಳು ತನ್ನ ಈ ಕೃತ್ಯವನ್ನು ಬೇರೆ ಯಾರಾದರೂ ನೋಡುತ್ತಿರುವರೇ? ಎಂದು ತನ್ನ ನೇತ್ರಗಳನ್ನು ಹೊರಳಿಸಿ ಸುತ್ತಮುತ್ತ ಲಿನ ಪ್ರದೇಶಗಳನ್ನು ಆ ಬೆಳದಿಂಗಳಿನಲ್ಲಿ ಅವಲೋಕಿಸಿದಳು; ಆದರೆ ಯಾರೂ

ಗೋಚರವಾಗಲಿಲ್ಲ. ಅವಳು ಧೈರ್ಯವನ್ನು ಅವಲಂಬಿಸಿ, ಗವಿಯ ಬಳಿಗೆ ತೆರಳಿದಳು.

ಯಾಚಕಿಯು ಗವಿಯ ಬೀಗಕ್ಕೆ ತಾನು ಕರವಶ ಪಡಿಸಿಕೊಂಡಿರುವ ಕೀಲನ್ನು ಉಪಯೋಗಿಸಿ ತಿರುಗಿಸಿದಳು. ಆ ಬೀಗವು ತೆರೆಯಲ್ಪಟ್ಟಿತು. ಅವಳು ಮುಚ್ಚಿದ್ದ ಕದಗಳನ್ನು ತೆರೆದಳು ಆ ಕತ್ತಲೆಯಲ್ಲಿ ಒಬ್ಬ ಪುರುಷ ವ್ಯಕ್ತಿಯು ಆ ಗವಿಯಲ್ಲಿ ಮಲಗಿರುವುದು ದೃಗ್ಗೋಚರವಾಯಿತು. ಅನಿರೀಕ್ಷಿತವಾಗಿ ತನ್ನ ಗವಿಯ ಕಪಾಟಗಳು ತೆರೆಯಲ್ಪಟ್ಟಿರುವುದನ್ನು ಅವಲೋಕಿಸಿ, ಆಶ್ಚರ್ಯಚಕಿತನಾಗಿ ಆತನು ತಾನು ಮಲಗಿರುವ ಸ್ಥಳದಿಂದ ಎದ್ದು ನಿಂತನು. ಅವನು ತನ್ನ ಮುಂದೆ ನಿಂತಿರುವ ಹೆಂಗುಸನ್ನು ನೋಡಿದನು. ಎಲ್ಲಿಯೋ ಆ ಮೊಗವನ್ನು ನೋಡಿರುವ ನೆನಪು ಅವನ ಮನೋದರ್ಪಣದಲ್ಲಿ ಪ್ರತಿಬಿಂಬಿಸಿತು; ಆದರೆ ಎಲ್ಲಿ ಎಂಬುದು ಮಾತ್ರ ಹೊಳೆಯಲಿಲ್ಲ!

“ನೀನು ಯಾರು?” ಎಂದು ಅವನು ಪ್ರಶ್ನಿಸಿದನು.

“ನಾನು ಯಾರೇ ಇರಲಿ. ನೀವೀಗ ಬಂಧನದಿಂದ ವಿಮುಕ್ತರಾಗಿರುವಿರಿ. ಈ ನಿಮಿಷದಲ್ಲಿಯೇ ನನ್ನನ್ನು ಹಿಂಬಾಲಿಸಿರಿ!” ಆ ಲಲನೆ ಎಂದಳು.

“ಆದರೆ ಹೇಗೆ? ಯಾವ ರೀತಿಯಿಂದ?” ಕಾರಾಗೃಹವಾಸಿಯಾದ ತರುಣನೆಂದನು.

“ನಾನು ನಿಮ್ಮನ್ನು ಕಾರಾಗೃಹದಿಂದ ವಿಮುಕ್ತನನ್ನಾಗಿ ಮಾಡಿರುವೆನು. ಈ ಕದಗಳು ತೆರೆಯಲ್ಪಟ್ಟಿವೆ. ಯಾರ ಆತಂಕವೂ ಇಲ್ಲ. ತಮಗೆ ಸ್ವಾತಂತ್ರ್ಯವಿದೆ.”

“ಆದರೆ ಹೆಂಗಸಾದ ನೀನು ಈ ಸಾಹಸ ಕಾರ್ಯದಲ್ಲೇಕೆ ಉದ್ಯುಕ್ತಳಾದೆ?”

“ತಾವು ಅನಾವಶ್ಯಕವಾಗಿ ಸಮಯವನ್ನು ಕಳೆಯುವದರಿಂದ ಹೆಚ್ಚಿನ ಉಪಯೋಗವಿಲ್ಲ; ಆದರಿಂದ ದೋಷವಲ್ಲದೆ ಗುಣವು ಲಭಿಸಲಾರದು. ತಮ್ಮ ಜೀವವು ಅಮೌಲ್ಯವಾದುದೆಂದು ನಾನು ತಿಳಿಯುವೆನು.”

ಕಾರಾಗೃಹವಾಸಿಯು ಮರುಮಾತಾಡಲಿಲ್ಲ. ಹೆಂಗಸು ಹೊರಗೆ ತೆರಳಿದಳು. ಅವನು ಅವಳನ್ನು ಹಿಂಬಾಲಿಸಿದನು. ಇಬ್ಬರೂ ಸ್ವಲ್ಪ ದೂರ ತೆರಳಿದರು.

ಈ ಸಮಯದಲ್ಲಿ ಚಂದ್ರನು ಪಡುವಣದಿಶೆಯನ್ನು ಸೇರಿದ್ದನು. ಅಲ್ಪ ಸ್ವಲ್ಪವಾಗಿರುವ ತಿಂಗಳು ಬೆಳಕಿನಲ್ಲಿ ಅವರು ವಿಪಿನ ಮಧ್ಯದಲ್ಲಿ ಹಬ್ಬಿರುವ ಒಂದು ದಾರಿಯನ್ನು ಹಿಡಿದು ಹೋದರು. ದಾರಿಯ ಎರಡು ಪಾರ್ಶ್ವಗಳಲ್ಲಿಯೂ ಎತ್ತರವಾದ ಮರಗಳು ನಿಂತಿದ್ದುವು. ಬಳ್ಳಿಗಳು ದ್ರುಮಗಳನ್ನು

ಆಲಿಂಗಿಸಿ ಧೈರ್ಯವನ್ನು ತಾಳಲು ಪ್ರಯತ್ನಿಸುತ್ತಲಿದ್ದವು. ದಾರಿಯು ದುರ್ಗಮವು; ಕಲ್ಲು-ಮುಳ್ಳುಗಳು ಧಾರಾಳವಾಗಿದ್ದದರಿಂದ ಬಹು ಎಚ್ಚರಿಕೆಯಿಂದ ಅವರು ತಮ್ಮ ಹೆಜ್ಜೆಗಳನ್ನು ಇಡಬೇಕಾಗಿ ಬರುತ್ತಿತ್ತು.

ಇಬ್ಬರೂ ಬಹು ನೇರ ಮೌನವನ್ನು ಅವಲಂಬಿಸಿದ್ದರು. ಅನ್ಯಪುರುಷರೊಡನೆ ಮಾತಾಡುವದರಲ್ಲಿ ಮಹಿಳೆಯರಿಗೆ ಸ್ವಾಭಾವಿಕವಾಗಿರುವ ಲಜ್ಜೆಯು ಆ ಹೆಂಗುಸನ್ನು ಮನಬಿಚ್ಚಿ ಮಾತಾಡಲು ಪ್ರೇರಿಸಲಿಲ್ಲ. ಅವನಾದರೋ ತರುಣನು; ವಿಶಾಲವಾದ ಅವನ ನೇತ್ರಗಳು ಅವನೊಬ್ಬ ಧೀರ ಪ್ರಕೃತಿಯ ಪುರುಷಕೇಸರಿಯೆಂಬುದನ್ನು ನುಡಿಯುತ್ತಲಿದ್ದವು.

ಬಹಳ ನೇರವು ಗತಿಸಿದ ನಂತರ, ತರುಣನು ತನ್ನ ಮುಂದೆ ಹೆಜ್ಜೆಗಳನ್ನು ಇಡುತ್ತಿರುವ ನಾರಿಯನ್ನು ಈ ರೀತಿ ಪ್ರಶ್ನಿಸಿದನು:—"ಆ ಕಗ್ಗವಿಯಿಂದ ನನ್ನನ್ನು ರಕ್ಷಿಸಿದವಳು ಯಾರೆಂಬುದನ್ನು ನನಗೆ ತಿಳಿಸಬಾರದೆ?"

"ಓರ್ವ ಯಾಚಕಿಯು" ಎಂದಳವಳು.

"ಆದರೆ ಓರ್ವ ಸರ್ವಸಾಧಾರಣ ಯಾಚಕಿಯು ನನ್ನನ್ನು ತುರಂಗದಿಂದ ಕಾರಣವಿಲ್ಲದೆ ರಕ್ಷಿಸುತ್ತಾಳೆ ಎಂದು ಬಗೆಯುವಷ್ಟು ಮೂಢನಲ್ಲ ನಾನು. ನಿನ್ನನ್ನು ಎಲ್ಲಿಯೋ ನೋಡಿದ ನೆನಪಿದೆ!"

"ಹಾಗಾದರೆ ತಾವು ನನ್ನನ್ನು ಎಲ್ಲಿ ನೋಡಿದ್ದೀರಿ?"

"ಎಲ್ಲಿ ನೋಡಿದುದು ಎಂಬ ಜ್ಞಾಪಕವಿದ್ದರೆ, ನನ್ನನ್ನು ಕಾಪಾಡಿದವರು ಯಾರೆಂಬುದನ್ನು ತಿಳಿಯಲು ಪ್ರಯಾಸವಾಗುತ್ತಿರಲಿಲ್ಲ"

"ಕುಳಿಂದ ರಾಜಕುಮಾರರ ಸ್ಮರಣಶಕ್ತಿಯು ಇಷ್ಟು ಕಡಿಮೆಯೆಂದು ನಾನು ಬಗೆದಿರಲಿಲ್ಲ" ಎಂದು ಆ ಯುವತಿಯು ನಗುತ್ತ ನುಡಿದಳು.

"ನಾನು ಕುಳಿಂದರಾಜಕುಮಾರನೆಂಬುದನ್ನು ನೀನು ಹೇಗೆ ತಿಳಿದೆ?" ಎಂದು ಆ ತರುಣನು ಆಶ್ಚರ್ಯಚಕಿತನಾಗಿ ಪ್ರಶ್ನಿಸಿದನು ಆ ತರುಣನು ಕುಳಿಂದಕುಲ ಚಿತ್ರಭಾನುವಾದ ಚಂದ್ರಹಾಸನಾಗಿದ್ದನು.

"ಬುದ್ಧಿಯು ನನಗಿರುವದರಿಂದ ತಾವಾರೆಂಬುದನ್ನೂ ಎಲ್ಲಿ ಬಂಧನಸ್ಥರಾಗಿರುವಿರೆಂಬುದನ್ನೂ ಅರಿತುಕೊಂಡೆನು. ನನ್ನ ಮೆದುಳನ್ನು ವ್ಯಯಗೊಳಿಸಿ, ತಮ್ಮನ್ನು ವಿಮೋಚಿಸಲಿರುವ ತಂತ್ರವನ್ನು ಕಂಡು ಹಿಡಿದೆನು; ಹಾಗು ಆ ಪ್ರಯೋಗದಲ್ಲಿ ವಿಜಯುವನ್ನು ಸಂಪಾದಿಸಿದೆನು."

"ನೀನು ಬುದ್ಧಿಶಾಲಿನಿಯಲ್ಲವೆಂದು ಹೇಳುವುದಿಲ್ಲ; ಎಂದೆಂದಿಗೂ ನೀನು ಮಾಡಿದ ಉಪಕಾರಕ್ಕೆ ನಾನು ಕೃತಜ್ಞನಾಗಿರುವೆನು. ನೀನು ಯಾರೆಂಬುದನ್ನು ತಿಳಿಸಿದರೆ ಕೈಲಾದಮಟ್ಟಿಗೆ ಪ್ರತ್ಯುಪಕಾರವನ್ನು ಮಾಡಿ ಆ

ಸಾಲವನ್ನು ತೀರಿಸುವೆನು.''

''ಸದ್ಯಕ್ಕೆ ಅದು ತಮ್ಮ ಬೊಕ್ಕಸದಲ್ಲಿಯೇ ಇರಲಿ; ಅವಶ್ಯವೆನಿಸಿದಾಗ ಅದನ್ನು ನಾನು ತಮ್ಮಲ್ಲಿ ಬೇಡಿ ಪಡೆದುಕೊಳ್ಳುವೆನು'' ಎಂದಳು ಅವಳು.

ಇಲ್ಲಿ ಒಂದೆರಡು ಮಾತುಗಳನ್ನು ಹೇಳಬೇಕೆಂದಿರುವೆನು. ೧೯ನೇ ಪರಿಚ್ಛೇದದಲ್ಲಿ ಘಾತುಕರು ಚಂದ್ರಹಾಸನನ್ನು ಹೇಗೆ ಬಂಧಿಸಿದರೆಂಬದನ್ನು ವಾಚಕರು ಓದಿರಬಹುದು. ಅವನನ್ನು ಬಂಧಿಸಿದ ಆ ದುಷ್ಟರು ಅಮಾತ್ಯನಿಂದ ನಿಯುಕ್ತರಾದ ಕೆಲವು ಮಂದಿ ಘಾತುಕರಾಗಿದ್ದರು. ಅವರು ಅವನನ್ನು ಸೆರೆ ಹಿಡಿಯಲು ಉಚಿತವಾದ ಸಂದರ್ಭವನ್ನು ಹುಡುಕುತ್ತ, ವೇಷಚ್ಛನ್ನರಾಗಿ ಅವನನ್ನು ಯುದ್ಧರಂಗದಿಂದಲೇ ಹಿಂಬಾಲಿಸಿದ್ದರು. ಭುವನವಿಕ್ರಮನೊಡನೆ ಚಂದ್ರಹಾಸನು ಏಕಾಂಗಿಯಾಗಿ ಮಾತಾಡುತ್ತಿರುವ ಸಂದರ್ಭದಲ್ಲಿ ಆ ದುರ್ಜನರಿಗೆ ತಮ್ಮ ಕ್ರೂರ ಕೃತ್ಯವನ್ನು ಜರುಗಿಸಲು ಅತ್ಯುತ್ತಮ ಸಂಧಿಯು ಲಭಿಸಿತು. ಆದರಂತೆಯೇ ಅವರು ಹಿಂದೆ ಹೇಳಿದಂತೆ ಚಂದ್ರಹಾಸನನ್ನು ಬಂಧಿಸಿದರು. ಭುವನವಿಕ್ರಮನನ್ನು ಸಹಾ ಸೆರೆಹಿಡಿಯಬೇಕೆಂದು ಅವರು ನಿರ್ಧರಿಸಿದರು; ಆದರೆ ಅಪ್ರತೀಕ್ಷಿತವಾಗಿ ಪಾಳಯದಿಂದ ಸೈನಿಕರು ಬಂದುದರಿಂದ ಭುವನವಿಕ್ರಮನನ್ನು ಸೆರೆಹಿಡಿಯುವ ಕಾರ್ಯವು ಯಶಸ್ವೀಯಾಗಲಿಲ್ಲ.

ಅವರು ಚಂದ್ರಹಾಸನನ್ನು ನಿರ್ಜನವಾದ ಪ್ರದೇಶದಲ್ಲಿರುವ ಆ ಮಂದಿರದಲ್ಲಿ ತುರಂಗವಾಸಿಯನ್ನಾಗಿ ಮಾಡಿದರು. ತಗ್ಗುತ್ತಲೆಯಿಂದ ಕೂಡಿದ ಆ ಗವಿಯಲ್ಲಿ ದಿನಗಳನ್ನು ಕಳೆಯುವ ಚಂದ್ರಹಾಸನಿಗೆ ಅತ್ಯಂತ ಸಂಕಟವಾಗಿ ಪರಿಣಮಿಸಿತು. ಮನೋಹರವಾದ ದಿವಾಕರನ ಬಿಸಿಲನ್ನು ನೋಡುವುದಕ್ಕಾಗಲೀ, ತರು-ಲತಾದಿಗಳನ್ನು ವೀಕ್ಷಿಸುವದಕ್ಕಾಗಲೀ, ನೀಲವರ್ಣದ ಆಕಾಶವನ್ನೂ, ತಾರೆಗಳನ್ನೂ ಅವಲೋಕಿಸುವದಕ್ಕಾಗಲೀ ಅವನಿಗೆ ಸ್ವಾತಂತ್ರ್ಯವಿರಲಿಲ್ಲ. ಚಿಕ್ಕದಾದ ಆ ಕೋಣೆಯಲ್ಲಿ ಶುದ್ಧವಾದ ವಾಯುವು ಸಹಾ ಸಿಗದೆ ಅವನು ಅಲ್ಲಿ ನರಳಬೇಕಾಗಿ ಬಂದಿತು. ಮಲ-ಮೂತ್ರಗಳನ್ನು ಸಹಾ ಕಾವಲುಗಾರನು ತಂದಿಟ್ಟ ಒಂದು ಮಡಿಕೆಯಲ್ಲಿ ವಿಸರ್ಜಿಸಬೇಕಾಯಿತು. ಮಧ್ಯಾಹ್ನ ಒಂದಿಷ್ಟು ಅನ್ನವೂ, ಒಂದು ತಂಬಿಗೆ ಜಲವೂ ಅಲ್ಲದೆ ಇನ್ನಾವ ಆಹಾರವೂ ಚಂದ್ರಹಾಸನಿಗೆ ಸಿಗುತ್ತಿರಲಿಲ್ಲ.

ಈ ನರಕವಾಸದಲ್ಲಿ ತನ್ನ ಶೇಷಾಯುಷ್ಯವನ್ನು ವ್ಯಯಗೊಳಿಸಬೇಕಾಗುವದೇ! ಎಂಬ ಭೀತಿಯು ಚಂದ್ರಹಾಸನನ್ನು ಪೀಡಿಸದಿರಲಿಲ್ಲ. ಒಂದೊಂದು ನಿಮಿಷವು ಅವನಿಗೆ ಒಂದೊಂದು ಯುಗವಾಗಿ ತೋರುತ್ತಿತ್ತು. ಸರಿಯಾದ

ಆಹಾರವಿಲ್ಲದೆ ಅವನ ದೇಹವು ಕೃಶವಾಗಲಾರಂಭಿಸಿತು. ಮನಸ್ಸು ಅಂಧ ಕಾರದಿಂದ ಆವೃತ್ತವಾಯಿತು. ಹೃದಯವು ನಿರಾಶೆಯ ತಾಂಡವ ಭೂಮಿ ಯಾಗಿ ಪರಿಣಮಿಸಿತು!

ಈ ಸಂದರ್ಭದಲ್ಲಿ ಅಪರಿಚಿತಳಾದ ಆ ಹೆಂಗುಸು ಚಂದ್ರಹಾಸನನ್ನು ಕಾರಾಗೃಹದಿಂದ ವಿಮುಕ್ತನನ್ನಾಗಿ ಮಾಡಿದಳು. ತನ್ನನ್ನು ನರಕವಾಸದಿಂದ ರಕ್ಷಿಸಿದ ಈ ದಯಾಶಾಲಿನಿಯು ಯಾರೆಂಬುದನ್ನು ತಿಳಿಯಲು ಚಂದ್ರ ಹಾಸನು ಆದೆಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಸಮಯವು ಬಂದಾಗ ತಾನು ಯಾರೆಂಬುದು ತಿಳಿದು ಬರುವದೆಂದು ಮಾತ್ರ ಅವಳು ಹೇಳಿದಳಲ್ಲದೆ, ಅದಕ್ಕಿಂತ ಹೆಚ್ಚಿನ ಪರಿಚಯುವನ್ನು ಅವಳು ಕುಳಿಂದ ರಾಜಕುಮಾರನಿಗೆ ನೀಡಲಿಲ್ಲ.

ಚಂದ್ರಹಾಸನೂ ಆ ಹೆಂಗುಸೂ ಬಹು ದೂರ ತೆರಳಿದರು; ಅಂತ್ಯದಲ್ಲಿ ಅವರು ಒಂದು ರಾಜಪಥವನ್ನು ಸೇರಿದರು. ಆಗ ವೇಳೆಯು ಪ್ರಭಾತವಾ ಗುತ್ತಬಂದಿತು; ಕತ್ತಲೆಯನ್ನು ಹಿಂದಕ್ಕೆ ದೂಡಿ ಕೆಂಬಣ್ಣದ ಸೀರೆಯನ್ನು ಧರಿಸಿಕೊಂಡು ಬಂದ ಉಷಾದೇವಿಯು ದಿವಾಕರನ ಆಗಮನದ ಸಂದೇಶ ವನ್ನು ವಿಶ್ವಕ್ಕೆ ಸಾರಿದಳು. ಮಂದಮಾರುತನು ತಂಗಾಳಿಯ ಚಾಮರವನ್ನು ಬೀಸಿ ಧರಿತ್ರಿಯ ಆಯಾಸವನ್ನು ಪರಿಹರಿಸಲು ಯತ್ನಿಸುತ್ತಿದ್ದನು.

ಬೆಳಗಾಗುವ ಸಮಯಕ್ಕೆ ಅವರು ಒಂದು ಊರನ್ನು ಸೇರಿದರು. ಆ ಹೆಂಗುಸು ಚಂದ್ರಹಾಸನೊಡನೆ ಹೇಳಿದಳು: "ತಾವು ಈ ಊರ ಸತ್ರದಲ್ಲಿ ಸ್ನಾನಾಹಾರಗಳನ್ನು ಮಾಡಿ ವಿಶ್ರಮಿಸಿರಿ. ನಾನೀಗ ಬರುವೆನು."

"ಸತ್ರವಿರುವದೆಲ್ಲಿ?' ಎಂದು ತನಗೆ ಆ ಊರಿನ ಪರಿಚಯುವಿಲ್ಲದುದ ರಿಂದ ಚಂದ್ರಹಾಸನು ಪ್ರಶ್ನಿಸಿದನು.

"ಅಗೋ, ಅಲ್ಲಿ ಕಾಣುವುದೇ ಸತ್ರ!" ಎಂದು ಸ್ವಲ್ಪ ದೂರದಲ್ಲಿ ರುವ ಒಂದು ದೊಡ್ಡ ಕಟ್ಟಡದ ಕಡೆಗೆ ಆ ವನಿತೆಯು ತನ್ನ ಬೆರಳು ತೋರಿಸಿದಳು. "ಈ ಊರಿನಲ್ಲಿಯೇ ನನಗೊಬ್ಬಳು ಗೆಳತಿಯಿರುವಳು; ಅವಳ ಸದನಕ್ಕೆ ತೆರಳಿ, ನಾನು ಸ್ವಲ್ಪ ವಿಶ್ರಮಿಸಿಕೊಂಡು ಬರುವೆನು. ಅನಂತರ ರಾಜಧಾನಿಗಿರುವ ನಮ್ಮ ಪಯಣವನ್ನು ಮುಂದುವರಿಸಬಹುದು."

"ಹಾಗೆಯೇ ಆಗಲಿ!"

ಹೆಂಗುಸು ತೆರಳಿದಳು; ಚಂದ್ರಹಾಸನು ಸತ್ರಕ್ಕೆ ತೆರಳಿದನು. ಸತ್ರಾಧಿ ಕಾರಿಯು ಬಹಳ ಉದಾರಿ ಮತ್ತು ವಿನಯಶಾಲಿಯು! ಚಂದ್ರಹಾಸನನ್ನು ನೋಡಿ ಅವನೊಬ್ಬ ಮಾನ್ಯ ಗೃಹಸನೆಂದು ಬಗೆದು, ಸತ್ರಾಧಿಕಾರಿಯು

ಆದರದಿಂದ ಉಪಚರಿಸಿದನು. ಚಂದ್ರಹಾಸನಾದರೋ ರಾತ್ರಿ ನಿದ್ರೆಯಿಲ್ಲ ದುದರಿಂದ ಬಹಳ ಬಳಲಿದ್ದನು. ಅನೇಕ ಹರದಾರಿಗಳ ದೂರದಿಂದ ಅವನು ನಡೆದು ಬಂದುದರಿಂದ ಅವನ ಶರೀರವು ಬೆಂಡಾಗಿ ಹೋಗಿದ್ದಿತು. ಅವನು ಸ್ನಾನ,-ಭೋಜನಗಳನ್ನು ಪೂರೈಸಿ, ಸತ್ರದ ಒಂದು ಭಾಗದಲ್ಲಿ ನಿದ್ರಿಸಿದನು.

ಚಂದ್ರಹಾಸನು ನಿದ್ರೆಯಿಂದ ಜಾಗೃತನಾಗುವಾಗ ಸಮಯವು ಮಧ್ಯಾಹ್ನ ಕಳೆದಿತ್ತು. ಅವನು ಎದ್ದು ತನ್ನನ್ನು ರಕ್ಷಿಸಿದ ಆ ಹೆಂಗುಸು ಬಂದಿರುವಳೇ? ಎಂದು ನೋಡಿದನು; ಆದರೆ ಅವಳು ಬಂದಿರಲಿಲ್ಲ. ಅವಳು ಯಾವಾಗ ಬರುವಳೆಂಬುದನ್ನು ಇದಿರು ನೋಡುತ್ತ ಚಂದ್ರಹಾಸನು ಸತ್ರದಲ್ಲಿಯೇ ಕುಳಿತುಕೊಂಡನು; ಆದರೆ ಆ ಮಹಿಳೆಯು ಬರಲಿಲ್ಲ.

ತನ್ನನ್ನು ಬಂಧನದಿಂದ ವಿಮೋಚಿಸಿದ ನಾರಿಯ ಆಗಮನವನ್ನು ನಿರೀಕ್ಷಿಸುತ್ತ ಕುಳಿತ ಚಂದ್ರಹಾಸನು ನಿರಾಶೆಯನ್ನು ಹೊಂದಬೇಕಾಯಿತು. ಈ ಸಂದರ್ಭದಲ್ಲಿ ೧೭-೧೮ ವರ್ಷ ಪ್ರಾಯದ ತರುಣನೋರ್ವನು ಆ ಸತ್ರಕ್ಕೆ ಬಂದನು. ಅವನ ಮುಖಮಂಡಲವು ಅತ್ಯಂತ ತೇಜಸ್ಸಿನಿಂದ ಹೊಳೆಯುತ್ತಲಿತ್ತು. ಅವನ ನೇತ್ರಗಳು ವಿಶಾಲವಾಗಿದ್ದರೂ, ಸಾಧಾರಣವಾಗಿ ಹೆಂಗಸರ ದರ್ಶನೇಂದ್ರಿಯಗಳಲ್ಲಿ ಗೋಚರವಾಗುವ ಚಾಪಲ್ಯವು ಅವುಗಳಲ್ಲಿ ತಾಂಡವವಾಡುತ್ತಿತ್ತು. ಈ ತರುಣನು ಯಾರೆಂಬುದನ್ನು ತಿಳಿಯಲು ಚಂದ್ರಹಾಸನಲ್ಲಿ ಉತ್ಸುಕತೆಯು ಜನಿಸಿತು. ಆ ತರುಣನಾದರೂ ಚಂದ್ರಹಾಸನ ಮೊಗವನ್ನು ನೋಡುತ್ತ ನಿಂತನು.

"ತಾವು ಯಾರನ್ನೋ ನಿರೀಕ್ಷಿಸುತ್ತಿರುವ ಹಾಗೆ ತೋರುತ್ತದಲ್ಲ!" ಎಂದು ಹೇಳಿ ಆ ತರುಣನು ಒಂದು ಮಂದಸ್ಮಿತವನ್ನು ಬೀರಿದನು.

ಕುಳಿಂದಕುಲ ಚಿತ್ರಭಾನುವು ಈ ತರುಣನ ನುಡಿಗಳನ್ನು ಆಲಿಸಿ ಅತ್ಯಂತ ಆಶ್ಚರ್ಯವನ್ನು ತಾಳಿದನು. ಒಬ್ಬ ಅಪರಿಚಿತ ತರುಣನು ಈ ರೀತಿ ನುಡಿಯುತ್ತಿರುವದು ಅವನ ಸಂಭ್ರಮವನ್ನು ಹೆಚ್ಚಿಸಿತು. ಈ ತರುಣನು ಯಾರು? ಅಪರಿಚಿತನಾದ ಈ ತರುಣನು ತನ್ನನ್ನು ಈ ರೀತಿ ಮಾತಾಡಿಸಲು ಕಾರಣವೇನು? ಎಂಬಿತ್ಯಾದಿ ವಿಚಾರಗಳು ಚಂದ್ರಹಾಸನ ವದನ ಮಂಡಲವನ್ನು ಆವರಿಸಿದುವು.

"ತಾವು ಯಾರು? ನಾನೊಬ್ಬರ ದಾರಿಯನ್ನು ನಿರೀಕ್ಷಿಸುತ್ತಿರುವೆನೆಂಬುದು ನಿಜ; ಆದರೆ ಅದನ್ನು ತಾವು ಹೇಗೆ ತಿಳಿದಿರಿ?"

"ನಾನೊಬ್ಬ ಸಾಧಾರಣ ಮನುಷ್ಯನೆಂದು ತಿಳಿದುಕೊಳ್ಳಿರಿ. ತಾವು ಈ ಹುಲ್ಲಿನ ಚಾಪೆಯ ಮೇಲೆ ಕುಳಿತುಕೊಂಡು, ಆಗಾಗ ಪಡುವಣದಲ್ಲಿರುವ

ಸೂರ್ಯನನ್ನು ನೋಡುತ್ತ ಅನಂತರ ತಮ್ಮ ನೋಟವನ್ನು ಆಗಾಗ ಸತ್ರದ ಬಾಗಿಲಿನ ಕಡೆಗೂ ಚಲ್ಲುತ್ತಿರುವದರ ಮೂಲಕ ತಾವು ಯಾರದೋ ಆಗಮನವನ್ನು ನಿರೀಕ್ಷಿಸುತ್ತಿರುವಿರಿ ಎಂಬುದನ್ನು ತಿಳಿದುಕೊಂಡೆನು. ಇನ್ನು ನನ್ನ ಬುದ್ಧಿಯನ್ನು ವ್ಯಯಗೊಳಿಸಿ ತಮ್ಮನ್ನು ಸಂಬಂಧಿಸಿದ ಹಲವು ಮಹತ್ವದ ಸಂಗತಿಗಳನ್ನು ನಾನು ಗ್ರಹಿಸಿರುವೆನು. ಅವು ಯಾವುವೆಂದರೆ, ಒಂದನೇಯದು ತಾವು ಒಂದು ಅತ್ಯುತ್ತಮ ಕುಲಸಂಭೂತರು; ಬಹುಶಃ ಯಾವುದಾದರೂ ಒಂದು ದೇಶದ ರಾಜಕುಮಾರರಿರಲಿಕ್ಕೆ ಸಾಕು! ಎರಡನೆಯದು ಕಳೆದ ರಾತ್ರಿಯೆಲ್ಲವೂ ತಾವು ಪ್ರಯಾಣ ಮಾಡುತ್ತ ಬಂದಿರುವಿರಿ ಬಹುಶಃ ಆ ವಿಪತ್ತಿನಿಂದ ತಮ್ಮನ್ನು ರಕ್ಷಿಸಿದ ವ್ಯಕ್ತಿಯ ಆಗಮನವನ್ನು ತಾವು ನಿರೀಕ್ಷಿಸುತ್ತಲಿರುವಿರಿ.''

'ತಮ್ಮ ನುಡಿಗಳನ್ನು ಕೇಳುವಾಗ ನನಗೆ ಬಹಳ ಆಶ್ಚರ್ಯವಾಗುತ್ತದೆ.'

''ಅದಕ್ಕಿಂತಲೂ ಹೆಚ್ಚಿನ ಆಶ್ಚರ್ಯವನ್ನು ಕಾಣಲು ತಾವು ಸಿದ್ಧರಾಗಿರಿ!'' ''ಏನದು?''

''ತಮ್ಮನ್ನು ವಿಪತ್ತಿನಿಂದ ರಕ್ಷಿಸುವ ವ್ಯಕ್ತಿಯ ನಿರ್ದೇಶದಂತೆ ನಾನು ಬಂದಿರುವೆನು.''

''ಹಾಗಾದರೆ ತಾವು ಯಾರು?''

''ನನ್ನನ್ನು ವಿಶ್ವಜಿತ್ತುವೆಂದು ಜನರು ಕರೆಯುತ್ತಲಿರುವರು.''

''ಶತ್ರುಗಳ ಕರದಿಂದ ನನ್ನನ್ನು ರಕ್ಷಿಸಿದ ಹೆಂಗಸು ತಮಗೇನಾಗಬೇಕು?''

''ಅವಳು ನನ್ನ ಆಪ್ತಳಿರುತ್ತಾಳೆ; ನನ್ನ ನಿರ್ದೇಶದಂತೆಯೇ ಅವಳು ತಮ್ಮನ್ನು ದುಷ್ಟಬುದ್ಧಿಯ ಬಂಧನದಿಂದ ರಕ್ಷಿಸಿದಳು. ಇನ್ನು ನನ್ನಲ್ಲಿ ನಂಬಿಕೆಯನ್ನಿಟ್ಟು ನನ್ನೊಡನೆ ರಾಜಧಾನಿಗೆ ಬರುವಿರಾಗಿ ನಂಬುತ್ತೇನೆ. ಕುಂತಳ ಸಿಂಹಾಸನಕ್ಕೆ ಬಂದ ವಿಪತ್ತನ್ನು ತಾವು ತಿಳಿದಿರಬಹುದು.''

''ತಮ್ಮ ಹೆಸರನ್ನು ಮಾತ್ರ ತಿಳಿದೆನಲ್ಲದೆ, ಅದಕ್ಕಿಂತ ಹೆಚ್ಚು ಪರಿಚಯವು ನನಗೆ ಲಭಿಸಲಿಲ್ಲ. ತಮ್ಮ ಮಾತುಗಳಲ್ಲಿ ನಂಬಿಕೆಯನ್ನು ಹೇಗೆ ಇಡಲಿ?''

''ತಮ್ಮ ಪ್ರಾಣವನ್ನು ರಕ್ಷಿಸುದುದು ನಾನೆಂಬುದನ್ನು ತಾವು ನಂಬುವಿರಾ?''

''ನನ್ನ ಪ್ರಾಣವನ್ನು ರಕ್ಷಿಸಿದವಳು ಓರ್ವ ಹೆಂಗಸು; ತಾವು ನುಡಿಯುತ್ತಿರುವುದನ್ನು ವಾಸ್ತವಾಂಶವೆಂದು ಹೇಗೆ ನಂಬಲಿ?''

ಆವನ ಮಾತುಗಳಿಗೆ ಇಷ್ಟು ಸುಲಭದಲ್ಲಿ ಮಣಿಯುವವನು ಚಂದ್ರಹಾಸನಾಗಿರಲಿಲ್ಲ. ದುಷ್ಟಬುದ್ಧಿಯ ಕಾರಸ್ಥಾನವು ದೇಶದಲ್ಲೆಲ್ಲ ಏಕಪ್ರಕಾರವಾಗಿ ಹರಡಿರುವಾಗ, ಈ ತರುಣನಾದರೂ ಆ ಕಾರಸ್ಥಾನದಲ್ಲಿ ಸೇರಿದವನಾಗಿರಬಹುದೆಂಬ ಸಂಶಯವು ಚಂದ್ರಹಾಸನ ಮನಸ್ಸಿನಲ್ಲಿ ವ್ಯಾಪಿಸಿತು. ದುಷ್ಟಬುದ್ಧಿಯ ಚಾರರು ತಾನು ವಿಮುಕ್ತನಾದೊಡನೆಯೇ ಆ ಗವಿಗೆ ಬಂದಿರಬಹುದು. ಆ ಪಹರೆಯುವನಿಂದ ತಾನು ಹೇಗೆ ಪಾರಾದೆನೆಂಬುದನ್ನು ತಿಳಿದು ತನ್ನನ್ನು ಬಂಧಿಸುವುದಕ್ಕಾಗಿ ಅವರು ಹೊರಟಿರಬಹುದು ಎಂಬಿತ್ಯಾದಿ ಸಂದೇಹಗಳು ಚಂದ್ರಹಾಸನ ಮನೋವಲಯದಲ್ಲಿ ಹಾರಾಡಿದುವು. ವಿಶ್ವಜಿತ್ತುವು ಚಂದ್ರಹಾಸನ ವದನದಲ್ಲಿ ಮೂಡಿದ ಮೋಡಗಳನ್ನು ಅವಲೋಕಿಸಿ ಒಂದು ಎಳೆನಗೆಯನ್ನು ಹೊರಚೆಲ್ಲಿ:—“ಕುಳಿಂದರಾಜಕುಮಾರರೇ! ನಾನು ತಮಗೆ ಅಪರಿಚಿತನಾದರೂ, ತಾವು ನನಗೆ ಅಪರಿಚಿತರಲ್ಲ ನಾನು ಶತ್ರುಪಕ್ಷದವನಿರುತ್ತೇನೆ, ಎಂಬ ಸಂದೇಹವು ತಮ್ಮ ಮನಸ್ಸಿನಲ್ಲಿ ಹರಡಿದೆ ಎಂಬುದನ್ನು ನಾನು ತಿಳಿದುಕೊಂಡೆನು; ಆದರೆ ಆ ಸಂದೇಹವನ್ನು ಈ ಓಲೆಯನ್ನು ನೋಡಿದ ಅನಂತರ ತ್ಯಜಿಸಿರಿ.” ಎಂದು ನುಡಿದನು.

ಅವನು ತನ್ನ ವಶದಲ್ಲಿರುವ ಒಂದು ಓಲೆಯನ್ನು ತೆಗೆದು ಚಂದ್ರಹಾಸನ ಕರಗಳಲ್ಲಿ ನೀಡಿದನು. ಅದನ್ನು ನೋಡಲು ಚಂದ್ರಹಾಸನ ಆಶ್ಚರ್ಯವು ದ್ವಿಗುಣೀಭವಿಸಿತು. ಅದು ಬೇರೆ ಯಾರ ಓಲೆಯೂ ಆಗಿರದೆ, ಚಂದ್ರಹಾಸನ ಜೀವದ ಗೆಳೆಯನಾದ ನಾಗರಾಜನದಾಗಿದ್ದಿತು. ಅದರ ಸಾರಾಂಶವನ್ನು ಕೆಳಗೆ ಕೊಡುತ್ತೇನೆ:

“ಕುಳಿಂದಕುಲ ಚಿತ್ರಭಾನು!

ನೀನು ಬಂಧನಕ್ಕೆ ಒಳಗಾದುದನ್ನು ತಿಳಿದು ನಾನು ಖಿನ್ನಮನಸ್ಕನಾಗಿದ್ದೇನೆ ಈ ಓಲೆಯನ್ನು ತೆಗೆದುಕೊಂಡು ಬರುವ ವಿಶ್ವಜಿತ್ತುವೇ ನಿನ್ನನ್ನು ಬಂಧನದಿಂದ ವಿಮೋಚಿಸತಕ್ಕವನಾಗಿದ್ದಾನೆ. ಇವನು ಅಕೃತ್ರಿಮ ರಾಜನಿಷ್ಠನಿರುವುದಲ್ಲದೆ, ಕುಂತಳ ಸಿಂಹಾಸನದ ರಕ್ಷಣೆಗಾಗಿ ಹೋರಾಡುತ್ತಿರುವ ಧೀರರಲ್ಲಿ ಮುಂಗಾಮಿಯಾಗಿದ್ದಾನೆ. ನಾನೇ ನಿನ್ನ ಬಿಡುಗಡೆ ಮಾಡಲೋಸುಗ ಬರುತ್ತಿದ್ದೆನು; ಆದರೆ ಮಹತ್ವದ ಕೆಲಸಗಳ ಮೂಲಕ ಸಂದರ್ಭವು ದೊರೆಯಲಿಲ್ಲ. ಯುದ್ಧರಂಗದಿಂದ ಹಿಂದಿರುಗಿ ಬಂದಿರುವ ಮಾರ್ತಾಂಡವರ್ಮ ಮೊದಲಾದವರು ನಿನ್ನ ಆಗಮನವನ್ನು ನಿರೀಕ್ಷಿಸುತ್ತಿರುವರು. ಆದುದರಿಂದ ವಿಶ್ವಜಿತ್ತುವನ್ನು ಹಿಂಬಾಲಿಸಿ ನೀನು ಒಡನೆಯೇ ರಾಜಧಾನಿಗೆ ಬರತಕ್ಕದ್ದು.”

ರಾಜಕುಮಾರಿಯು ದುಷ್ಟಬುದ್ಧಿಯ ಜಾಲಗಳಿಂದ ವಿಮುಕ್ತಳಾಗಿದ್ದು ಸುರಕ್ಷಿತಳಾಗಿರುವಳು.

ನಿನ್ನ
ನಾಗರಾಜ"

ಈ ಕಾಗದವನ್ನು ಓದಿದೊಡನೆಯೇ ಚಂದ್ರಹಾಸನ ಮನೋವಲಯದಲ್ಲಿ ಮೂಡಿದ್ದ ಸಂಶಯದ ಮೋಡಗಳು ಮಾಯವಾದುವು. ವಿಶ್ವಜಿತ್ತುವಿನಂಥ ರಾಜನಿಷ್ಠನಲ್ಲಿ ತಾನು ವಿಕಲ್ಪವನ್ನು ತಾಳಿದೆನಲ್ಲಾ! ಎಂಬ ಸಂತಾಪವು ಅವನನ್ನು ಪೀಡಿಸದೆ ಇರಲಿಲ್ಲ. ತನ್ನ ವರ್ತನೆಯಲ್ಲಿ ಪಶ್ಚಾತ್ತಾಪವನ್ನು ಹೊರಸೂಸುತ್ತ ಚಂದ್ರಹಾಸನು:—"ಮಹಾಶಯರೇ, ತಮ್ಮನ್ನು ಕುರಿತು ವಿಕಲ್ಪವನ್ನು ತಾಳಿದುದಕ್ಕೆ ಕ್ಷಮಿಸಿರಿ ತಮ್ಮ ಮಹಾನುಭಾವತೆಯನ್ನು ಅರಿಯದೆ ಆ ರೀತಿ ಮಾತಾಡಿದೆನು" ಎಂದನು.

"ತಾವು ವರ್ತಿಸಿದುದು ಉಚಿತವು. ತಕ್ಕ ಪ್ರತ್ಯಕ್ಷ ಪ್ರಮಾಣಗಳಿಲ್ಲದೆ, ಹೇಳಿದುದನ್ನು ನಂಬುವುದು ರಾಜಕಾರ್ಯವಲ್ಲಿ ಯತ್ನಿಸುವ ತಮ್ಮಂಥವರಿಗೆ ಉಚಿತವಲ್ಲ. ತಮ್ಮ ವರ್ತನೆಯು ತಾವೆಷ್ಟು ವಿಚಾರಶೀಲರಿರುವಿರೆಂಬುದನ್ನು ಸೂಚಿಸುತ್ತಿದೆ. ಅಪರಾಧವನ್ನು ಮಾಡಿದರಲ್ಲದೆ ಕ್ಷಮಿಸುವುದು?" ಎಂದು ಮಂದಹಾಸವನ್ನು ಬೀರುತ್ತ ವಿಶ್ವಜಿತ್ತು ನುಡಿದನು.

---

## ಆಯುಧ ಶಾಲೆಯ ಆಕ್ರಮಣ

ಮಧ್ಯರಾತ್ರಿಯ ಸಮಯ; ವಿಶ್ವವು ನಿದ್ರಾಂಗನೆಯ ಕೃಪಾಕಟಾಕ್ಷಕ್ಕೆ ಪಾತ್ರೀಭವಿಸಿದೆ. ಯಾವ ಸಪ್ಪಳವೂ ಇಲ್ಲ; ಯಾವ ಚಲನೆಯೂ ಇಲ್ಲ.

ಕುಂತಳನಗರದ ಹೆಬ್ಬಾಗಿಲು; ದುಷ್ಟಬುದ್ಧಿಗೆ ಅಧಿಕಾರವು ಸಂಪ್ರಾಪ್ತವಾದಂದಿನಿಂದ ಭಟರು ಹೆಬ್ಬಾಗಿಲಿನಲ್ಲಿ ಕಾವಲು ನಿಂತಿರುವರೆಂಬುದನ್ನು ನಾನು ಹಿಂದೆಯೇ ಹೇಳಿದ್ದೇನೆ. ಈ ಕೃತ್ಯಕ್ಕೆ ಯಾವ ಲೋಪವೂ ಇಲ್ಲ; ಜಾಗರೂಕತೆಯಿಂದ ಅವರು ಮಹಾದ್ವಾರವನ್ನು ಕಾಯುತ್ತಿರುವರು. ಆ ರಾತ್ರಿಹೊತ್ತು ಬಾಗಿಲುಗಳನ್ನು ಬಂಧಿಸಿ ಭಟರು ನಿದ್ರೆಹೋಗುತ್ತಿದ್ದರು. ದಂಡನಾಯಕನು ತನ್ನ ಕೋಣೆಯಲ್ಲಿ ಮಲಗಿ ಗೊರಕೆಯನ್ನು ಹೊಡೆಯುತ್ತಲಿದ್ದನು. ಒಬ್ಬ ಪಹರೆಯವನು ಮಾತ್ರ ಆಯುಧವನ್ನು ಕೈಯಲ್ಲಿ ಹಿಡಿದುಕೊಂಡು ಬಾಗಿಲ ಬಳಿಯಲ್ಲಿ ಕುಳಿತಿದ್ದನು. ಅವನ ಶಿರಸ್ಸಾದರೂ ನಿದ್ದೆಯ ಭಾರದಿಂದ ತೂಗಾಡುತ್ತಿತ್ತು.

ಈ ಸಂದರ್ಭದಲ್ಲಿ ಇಬ್ಬರು ತರುಣರು ಹೆಬ್ಬಾಗಿಲಿನ ಬಳಿಗೆ ಬಂದರು. ಅವರು ಅಲ್ಲಿ ನಿದ್ರೆಯಿಂದ ತೂಕಡಿಸುತ್ತಿರುವ ದ್ವಾರಪಾಲಕನನ್ನು ಕರೆದು ಎಚ್ಚರಿಸಿದರು. ಅವನು ತನ್ನ ತಲೆಯನ್ನೆತ್ತಿ, ತನ್ನ ನೇತ್ರಗಳನ್ನು ಉಜ್ಜುತ್ತ: "ಈ ಅಪರಾತ್ರಿಯ ಸಮಯದಲ್ಲಿ ನೀವೇಕೆ ಬಂದಿರಿ?" ಎಂದು ಪ್ರಶ್ನಿಸಿದನು.

"ನಾವು ಅಮಾತ್ಯರಿಂದ ನಿಯುಕ್ತರಾದ ಅಧಿಕಾರಿಗಳಾಗಿರುತ್ತೇವೆ. ಅತ್ಯಂತ ಅವಸರ ಕೆಲಸವಿರುವದರಿಂದ, ಅಮಾತ್ಯರನ್ನು ಕಾಣುವದಕ್ಕಾಗಿ ಹೋಗುತ್ತಿರುವೆವು; ಆದುದರಿಂದ ಬೇಗನೆ ಬಾಗಿಲುಗಳನ್ನು ತೆರೆಯಿರಿ."

"ತಾವು ಯಾರಾದರೂ ಚಿಂತೆಯಿಲ್ಲ; ರಾತ್ರಿಹೊತ್ತು ಪುರಪ್ರವೇಶನವನ್ನು ಮಾಡಲು ಅನುಮತಿಯನ್ನು ನೀಡಬಾರದೆಂದು ದಂಡನಾಯಕರ ಅಪ್ಪಣೆಯಾಗಿದೆ."

"ಆದರೆ ನಿಮ್ಮ ದಂಡನಾಯಕರು ಅಮಾತ್ಯರಿಗಿಂತಲೂ ಮಿಗಿಲಾದವರೇನು?"

"ಏನಾದರೂ ಈ ಅಪರಾತ್ರಿಯಲ್ಲಿ ದಂಡನಾಯಕರ ಆಜ್ಞೆಯನ್ನು ಮೀರಿ ತಮ್ಮನ್ನು ಒಳಗೆ ಬಿಡಲಾರೆನು."

"ಹಾಗಾದರೆ ಈ ಕೃತ್ಯದ ಫಲವಾಗಿ ಸಿಗುವ ದಂಡನೆಯನ್ನು ನೀನೂ, ನಿನ್ನ ದಂಡನಾಯಕನೂ ಅನುಭವಿಸಬೇಕಾಗಿ ಬರುವದು. ಅಮಾತ್ಯನಿಗೆ ಪ್ರಧಾನವಾದ ಒಂದು ಸಂಗತಿಯನ್ನು ಅರುಹುವುದಕ್ಕಾಗಿದೆ ನಾವು ತೆರಳುತ್ತಿರುವುದು." ಎಂದು ಕೋಪಭರಿತವಾದ ಸ್ವರದಲ್ಲಿ ಆ ತರುಣರು ನುಡಿದರು.

ಆ ತರುಣರ ನುಡಿಗಳನ್ನು ಕೇಳಿ ಅವರು ನಿಜವಾಗಿಯೂ ಅಮಾತ್ಯನಿಂದ ನಿಯುಕ್ತರಾದ ಜನರೇ ಇರಬೇಕೆಂದು ಪಹರೆಯವನು ಊಹಿಸಿದನು. ಅವನು: "ನೀವು ಇಷ್ಟು ಸಿಟ್ಟಾಗಬೇಡಿರಿ! ನೀವು ಈ ಅಪರಾತ್ರಿಯಲ್ಲಿ ಪುರಪ್ರವೇಶಕ್ಕಾಗಿ ಬಂದುದೇಕೆಂಬುದನ್ನು ತಿಳಿಯುವದು ನಮ್ಮ ಕರ್ತವ್ಯವಲ್ಲವೆ? ದಂಡನಾಯಕರನ್ನು ಎಬ್ಬಿಸುವೆನು; ಅವರು ನಿದ್ರೆಯಲ್ಲಿರುವರು." ಎಂದು ನುಡಿದು, ಸಮೀಪದ ಕೋಣೆಯಲ್ಲಿ ನಿದ್ರಿಸುತ್ತಿರುವ ದಂಡನಾಯಕನನ್ನು ಎಚ್ಚರಿಸುವದಕ್ಕಾಗಿ ತೆರಳಿದನು.

ಐದು ನಿಮಿಷಗಳು ಕಳೆಯಲು ದಂಡನಾಯಕನು ತನ್ನ ನೇತ್ರಗಳನ್ನು ಕೈಗಳಿಂದ ಉಜ್ಜುತ್ತ ನಿದ್ರೆಯಿಂದ ಎಚ್ಚತ್ತು ಹೊರಗೆ ಬಂದನು. ಅವನು ಹೊರಗೆ ನಿಂತಿರುವ ತರುಣರೊಡನೆ ಮಾತಾಡಿ, ಅವರು ಬಂದಿರುವ ಕಾರ್ಯವು ಎಷ್ಟು ಗೌರವವಾದುದೆಂಬುದನ್ನು ತಿಳಿದುಕೊಂಡನು. ಅನಂತರ ಅವನು ಅವರಲ್ಲಿರುವ ಸಮ್ಮತ ಪತ್ರಗಳನ್ನು ಕೇಳಿಕೊಂಡು ಪರಿಶೋಧಿಸಿದನು. ಆ

ಮೇಲೆ ದಂಡನಾಯಕನು ಬಾಗಿಲುಗಳನ್ನು ತೆರೆದು ತರುಣರನ್ನು ಒಳಗೆ ಬಿಡಲು ಆಜ್ಞಾಪಿಸಿದನು. ಪಹರೆಯುವನು ಆ ಆಜ್ಞೆಯಂತೆ ಹೆಬ್ಬಾಗಿಲುಗಳನ್ನು ತೆರೆದನು ತರುಣರಿಬ್ಬರೂ ಒಳಗೆ ಪ್ರವೇಶಿಸಿದರು.

ಪುನಃ ತೆರೆದ ಬಾಗಿಲುಗಳನ್ನು ಮುಚ್ಚುವುದಕ್ಕಾಗಿ ಪಹರೆಯುವನು ಪ್ರಯತ್ನಿಸಿದನು; ಆದರೆ ಅವನ ಉದ್ಯಮವು ಫಲಕಾರಿಯಾಗಲಿಲ್ಲ. ಒಳಗೆ ಪ್ರವೇಶಿಸಿದೊಡನೆಯೇ ಆ ತರುಣರಿಬ್ಬರು ತಮ್ಮ ಕರಗಳಲ್ಲಿರುವ ಖಡ್ಗಗಳನ್ನು ಹಿರಿದು ದಂಡನಾಯಕನ ಮೇಲೆಯೂ ಪಹರೆಯುವನ ಮೇಲೆಯೂ ಏರಿ ಹೋದರು. ದಂಡನಾಯಕನು ಈ ವರ್ತನೆಯನ್ನು ವೀಕ್ಷಿಸಿ, ಭಯವಿಹ್ವಲನಾದನು ಆಯುಧಗಳನ್ನು ಹಿರಿದು ಕಾದಾಡುವದಕ್ಕಾಗಲೀ, ಅಲ್ಲಿ ನಿದ್ರಾಪರವಶರಾಗಿ ಬಿದ್ದಿರುವ ಸೈನಿಕರನ್ನು ಜಾಗ್ರತಗೊಳಿಸುವದಕ್ಕಾಗಲೀ ಅವನಿಗೆ ಸಮಯವು ದೊರೆಯಲಿಲ್ಲ. ಆ ತರುಣರ ಖಡ್ಗಗಳಿಗೆ ದಂಡನಾಯಕ ಮತ್ತು ಪಹರೆಯುವ ಇವರ ಮಸ್ತಕಗಳು ಆಹುತಿಯಾಗಿ ಪರಿಣಮಿಸಿದುವು.

ಈ ನರಹತ್ಯೆಯು ನಡೆಯುವದರೊಳಗಾಗಿ ಸಹಸ್ರಾರು ಮಂದಿ ಯೋಧರು "ಕುಂತಳೇಂದ್ರ ಮಹಾರಾಜರಿಗೆ ಜಯವಾಗಲಿ!" ಎಂದು ಘೋಷಿಸುತ್ತ ಹೆಬ್ಬಾಗಿಲಿನ ಬಳಿಗೆ ಬಂದರು. ಅವರ ನಾಯಕತ್ವವನ್ನು ಕುಂತಳಶ್ರೀಯ ಎಡಬಲದ ಭುಜಗಳಂತಿರುವ ಮಾರ್ತಂಡವರ್ಮ ಮತ್ತು ಭುವನವಿಕ್ರಮ ಇವರು ವಹಿಸಿದ್ದರು. ಅಲ್ಲಿ ನೆರೆದಿರುವ ಸೈನಿಕರನ್ನು ಅವಲೋಕಿಸುತ್ತ ಮಹಾಪರಾಕ್ರಮಶಾಲಿಯಾದ ಮಾರ್ತಂಡವರ್ಮನು ಹೀಗೆ ನುಡಿದನು:—"ಕುಂತಳ ಸಿಂಹಾಸನದ ಆಧಾರಸ್ತಂಭಗಳಾದ ವೀರ ಕೇಸರಿಗಳೇ! ಇದುವರೆಗೆ ನಿಮ್ಮ ಬಾಹುಗಳ ಬಲದಿಂದ ಕುಂತಳ ದೇಶದ ಕೀರ್ತಿಯು ದಿಗಂತ ಪರ್ಯಂತ ವ್ಯಾಪಿಸಿತು. ನಿಮ್ಮ ಬಾಹುಗಳಲ್ಲಿ ಹರಿಯುತ್ತಿರುವ ನೆತ್ತರನ್ನು ಈ ನಾಡಿನ ಎಲ್ಲೆಗಳನ್ನು ಕಾಯುವದಕ್ಕಾಗಿ ನೀವು ಹರಿಸಿದಿರಿ. ನಿಮ್ಮ ಪ್ರಾಣಗಳನ್ನು ಸಿಂಹಾಸನ ಪಾಲನೆಗಾಗಿ ಬಲಿಯನ್ನರ್ಪಿಸಲು ಮುಂದೆ ಬಂದಿರಿ; ಆದರೆ ನಮ್ಮ ದುರ್ದೈವವಶಾತ್ ನಾವು ನಮ್ಮ ನಾಡಿನಲ್ಲಿ ಹುಟ್ಟಿ ಬೆಳೆದವರನ್ನು-ನಮ್ಮ ಸ್ವಜನರನ್ನು-ವಧಿಸಲು ನಮ್ಮ ಧಮನಿಗಳಲ್ಲಿ ಹರಿಯುತ್ತಿರುವ ನೆತ್ತರನ್ನು ಉಪಯೋಗಿಸಬೇಕಾಗಿ ಬಂದಿದೆ! ಆದರೆ ಗತ್ಯಂತರವಿಲ್ಲ. ಕುಂತಳ ಸಿಂಹಾಸನವು ಪರಮ ಪಾವನವಾದುದು. ಅದನ್ನು ರಕ್ಷಿಸುವ ಭಾರವು ನಮ್ಮದು! ಅದನ್ನು ಆಕ್ರಮಿಸಲು ಯತ್ನಿಸುತ್ತಿರುವ ದುಷ್ಟನನ್ನು ಎದುರಿಸುವದು ನಮ್ಮ ಕರ್ತವ್ಯವು! ಅವನು ಪಂಡಿತನಾಗಿರಲಿ, ರಾಜತಂತ್ರವಿಶಾರದನಾಗಿರಲಿ, ನಮ್ಮ ಬಂಧುವೇ ಆಗಿರಲಿ, ಅವನನ್ನು ದಂಡಿಸುವದು ರಾಜ್ಯವನ್ನು

ಕಾಪಾಡುವದರಲ್ಲಿ ನಿರತರಾದ ನಮ್ಮ ಕರ್ತವ್ಯವಾಗಿದೆ. ಆದುದರಿಂದ ನನ್ನ ಪ್ರೀತಿಯ ಸೈನಿಕರೇ, ಈ ಯಾಮಿನಿಯಲ್ಲಿ ನೀವು ನಿಮ್ಮ ಹೆಜ್ಜೆಗಳನ್ನು ಮುಂದೆ ಇಡಿರಿ! ದುಷ್ಟಬುದ್ಧಿಯ ಕಪಟತಂತ್ರಜಾಲಗಳು ನಿಮ್ಮ ಪರಾಕ್ರಮವೆಂಬ ಬೆಂಕಿಯಿಂದ ದಹಿಸಲ್ಪಡಲಿ! ಚಿತ್ರಭಾನುವು ಉದಯುವನ್ನು ಹೊಂದುವದರೊಳಗಾಗಿ ಕುಂತಳ ಭಾಗ್ಯಪ್ರದೀಪಕನು ದೇದೀಪ್ಯಮಾನನಾಗಿ, ಕುಂತಳದ ಆಕಾಶದಲ್ಲಿ ರಾಜಿಸಲಿ! ಗೆಳೆಯರೇ, ತೆರಳಿರಿ! ನೀವು ತೆರಳಿರಿ ಮುಂದೆ!''

ಆ ವೃದ್ಧ ಸೇನಾನಾಯಕನ ಆವೇಶಪರಿಪೂರ್ಣವಾದ ವಚನಪ್ರವಾಹವನ್ನು ಅವಲೋಕಿಸಿ, ಭಟರು ಉದ್ವೇಗಭರಿತರಾಗಿ ತಮ್ಮ ಹೆಜ್ಜೆಗಳನ್ನು ಮುಂದಿಟ್ಟು ಕರಗಳಲ್ಲಿ ಹಿಡಿದಿರುವ ಖಡ್ಗಗಳನ್ನು ಝಳಪಿಸುತ್ತ 'ಕುಂತಳೇಂದ್ರ ಸಾರ್ವಭೌಮನಿಗೆ ವಿಜಯವಾಗಲಿ!' ಎಂದು ಗರ್ಜಿಸಿದರು. ಆ ಸಿಂಹನಾದವು ನಭೋವಲಯದಲ್ಲಿ ಮಹತ್ತಾಗಿ ವ್ಯಾಪಿಸಿತು ಕಲಿತನದ ಸಂಜೀವನವು ಆ ವೀರರ ಬಾಹುಗಳಲ್ಲಿ ಹರಿದಾಡಿತು.

ಈ ಭಟರ ನಾಯಕತ್ವವನ್ನು ವಹಿಸಿದವರು ಯಾರುಯಾರೆಂದು ನಾನಿಲ್ಲಿ ವಿವರಿಸುವದಿಲ್ಲ. ಕುಳಿಂದಸೈನಿಕರ ನಾಯಕನಾಗಿ ಚಂದ್ರಹಾಸನು ಮೆರೆಯುತ್ತಿದ್ದನು. ಅವನೂ ನಾಗರಾಜನೂ ಆಗಿದ್ದರು ಹಿಂದೆ ಹೇಳಿದಂತೆ ತಂತ್ರದಿಂದ ಮಹಾದ್ವಾರದೊಳಗೆ ಪ್ರವೇಶಿಸಿ, ದಂಡನಾಯಕನನ್ನೂ ಪಹರೆಯವನನ್ನೂ ಸಂಹರಿಸಿದ ತರುಣರು ಮಾರ್ತಂಡವರ್ಮನು ಅಲ್ಲಿಗೆ ಬಂದು ತನ್ನ ಮುಂದೆ ನಿಂತಿದ್ದ ಚಂದ್ರಹಾಸನನ್ನು ಬಿಗಿದಪ್ಪಿ: ''ಕುಳಿಂದ ರಾಜಕುಮಾರ! ನಿನ್ನ ಕೌಶಲ್ಯವನ್ನೂ, ಚಾತುರ್ಯವನ್ನೂ ಕಂಡು ನಾನು ಆನಂದಿತನಾದೆನು. ನೀವಿಬ್ಬರೂ ಮುಂದೆ ಬಂದು ಈ ರೀತಿ ಮಹಾದ್ವಾರದೊಳಗೆ ಪ್ರವೇಶಿಸಿ, ದಂಡನಾಯಕನನ್ನೂ ಪಹರೆಯವನನ್ನೂ ಕೊಂದು ಮಾರ್ಗವನ್ನು ಸುಗಮವನ್ನಾಗಿ ಮಾಡದಿದ್ದರೆ, ನಾವೆಷ್ಟು ಹೋರಾಡಿದರೂ ನಗರದೊಳಗೆ ಪ್ರವೇಶವನ್ನು ಹೊಂದಲು ಸಾಧ್ಯವಾಗುತ್ತಿರಲಿಲ್ಲ'' ಎಂದು ನುಡಿದನು.

''ಮಹಾ ಸೇನಾಪತಿಗಳೇ!'' ಎಂದು ಹರ್ಷಚಿತ್ತನಾದ ಚಂದ್ರಹಾಸನು: ''ಪಿತೃತುಲ್ಯರಾದ ತಮ್ಮ ಅನುಗ್ರಹದ ಪ್ರಭಾವವಿದು!''

''ಕುಳಿಂದ ಭಾಗ್ಯಪ್ರದೀಪಕ! ನಿನ್ನ ಕೀರ್ತಿಯು ಸರ್ವತ್ರ ಹರಡಲಿ!'' ಎಂದು ಮಾರ್ತಂಡವರ್ಮನು ಚಂದ್ರಹಾಸನನ್ನು ಮುಕ್ತಕಂಠದಿಂದ ಹೊಗಳಿದನು.

ಮಾರ್ತಂಡವರ್ಮನು ಸೈನಿಕರ ಕಡೆಗೆ ತಿರುಗಿ: ''ಯೋಧ ಪುಂಗರೇ, ನೀವು ಇಲ್ಲಿಂದ ಮೂರು ಗುಂಪಾಗಿ ಹೊರಡಬೇಕು ಮೊದಲನೆಯ ಗುಂಪು

ಭುವನ ವಿಕ್ರಮನ ನೇತೃತ್ವದಲ್ಲಿ ಇಲ್ಲಿಯೇ ನಿಂತು ಮಹಾದ್ವಾರವನ್ನು ಸುರಕ್ಷಿತವಾಗಿ ಕಾದುಕೊಳ್ಳಲಿ! ಎರಡನೆಯ ಗುಂಪು ಚಂದ್ರಹಾಸನ ನೇತೃತ್ವದಲ್ಲಿ ಆಯುಧ ಶಾಲೆಯನ್ನು ಆಕ್ರಮಿಸತಕ್ಕದ್ದು! ಮೂರನೆಯ ಪಂಗಡದವರು ನನ್ನ ನೇತೃತ್ವದಲ್ಲಿ ಬೊಕ್ಕಸವನ್ನೂ, ಅರಮನೆಯನ್ನೂ ವಶಪಡಿಸಕೊಳ್ಳತಕ್ಕದ್ದು! ಆಯುಧಶಾಲೆಯೂ ಬೊಕ್ಕಸವೂ ನಮ್ಮ ಕರಗತವಾದರೆ, ಶತ್ರುಗಳು ಸುಲಭದಲ್ಲಿ ಮಣಿಯುವರು.'' ಎಂದು ನುಡಿದನು.

"ಅಪ್ಪಣೆ!" ಎಂಬ ಗರ್ಜನೆಯು ನಭದಲ್ಲಿ ಹರಡಿತು.

ಚಂದ್ರಹಾಸನು ತನ್ನ ಕೈಕೆಳಗಿನ ಸೈನ್ಯದೊಡನೆ ಆಯುಧ ಶಾಲೆಯನ್ನು ಆಕ್ರಮಿಸುವದಕ್ಕಾಗಿ ಆ ರಾತ್ರಿ ಹೊರಟನು. ಅವನ ದಳದವರಾದರೂ ತಮ್ಮ ಪರಾಕ್ರಮವಿಂದು ತೋರಿಸಬಹುದಲ್ಲ! ಎಂದು ಹರ್ಷಚಿತ್ತರಾಗಿದ್ದರು ಚಂದ್ರಹಾಸನ ನಿರ್ದೇಶದಂತೆ ಅವರು ಮಾತಾಡದೆ ಚಂದ್ರಹಾಸನನ್ನು ಹಿಂಬಾಲಿಸಿದರು. ಸುಧಾಂಶ ಪ್ರಕಾಶವು ಬಿದ್ದುದರಿಂದ, ಸೈನಿಕರ ಬತ್ತಳಿಕೆಗಳಲ್ಲಿರುವ ಬಾಣಗಳು ಹೊಳೆಯುತ್ತಲಿದ್ದುವು. ಸಹಸ್ರಾರು ಮಂದಿ ಸೈನಿಕರು ತೆರಳುವದರಿಂದುಂಟಾಗುವ ಸಪ್ಪಳವಲ್ಲದೆ, ಬೇರೆ ಯಾವುದೂ ಆ ಯಾಮಿನಿಯ ಶಾಂತತೆಯನ್ನು ಭಂಜಿಸುತ್ತಿರಲಿಲ್ಲ; ವೀರರ ಮುಖಗಳಲ್ಲಿ ಹೊರಸೂಸುತ್ತಿರುವ ಶೌರ್ಯರಸವಲ್ಲದೆ, ಬೇರೆ ಯಾವುದೂ ಅಲ್ಲಿ ತಾಂಡವವಾಡುತ್ತಿರಲಿಲ್ಲ

ಸೈನ್ಯವು ಆಯುಧ ಶಾಲೆಯ ಸಮೀಪಕ್ಕೆ ತಲುಪಿತು. ಆಯುಧಶಾಲೆಯೆಂದರೆ, ದೇಶವನ್ನು ಕಾಪಾಡಲು ಅವಶ್ಯವಿರುವ ಖಡ್ಗ, ಕಠಾರಿ, ಪರಶು, ಮುದ್ಗಲ, ಈಟಿ, ಬರ್ಚಿ, ಬಿಲ್ಲು, ಬಾಣ ಎಂಬಿತ್ಯಾದಿ ಆಯುಧಗಳನ್ನು ನಿರ್ಮಿಸುವ ಹಾಗು ಸುರಕ್ಷಿತವಾಗಿ ಜೋಪಾನ ಮಾಡುವ ಗೃಹವಾಗಿದೆ. ಆಯುಧಶಾಲೆಯು ಒಂದು ದೇಶದ ಜೀವವಾಗಿದೆಯೆಂದರೆ ತಪ್ಪಾಗಲಾರದು. ಆ ನಾಡಿನ ಸೈನಿಕರು ಎಷ್ಟು ಬಲಿಷ್ಠರಾಗಿದ್ದರೂ ಚಿಂತೆಯಿಲ್ಲ; ಆ ನಾಡಿನ ಆಯುಧಶಾಲೆಯು ಶತ್ರುಗಳ ವಶವಾಗಿ ಹೋದರೆ, ಆ ರಾಜ್ಯವು ಪರಾಜಯವನ್ನು ಹೊಂದಿದಂತೆಯೇ ಸರಿ. ಆಯುಧಗಳಿಲ್ಲದೆ ಸೈನ್ಯವು ಹೇಗೆ ಕಾದಾಡುವುದು? ಆದುದರಿಂದಲೇ ಯುದ್ಧತಂತ್ರ ವಿಚಕ್ಷಣನಾದ ಮಾರ್ತಂಡವರ್ಮನು ದುಷ್ಟಬುದ್ಧಿಯನ್ನು ಗೆಲ್ಲಲು ಅತಿ ಪ್ರಧಾನವಾದ ಪ್ರಯತ್ನಗಳಲ್ಲಿ ಆಯುಧಶಾಲೆಯ ಆಕ್ರಮಣವೆಂದರಿತು, ಆ ಉದ್ಯಮವನ್ನು ನಿರ್ವಹಿಸುವದಕ್ಕಾಗಿ ಚಂದ್ರಹಾಸನಂಥ ಧೀರನನ್ನು ನಿಯೋಜಿಸಿದ್ದನು.

ಕಲ್ಲುಗಳಿಂದ ನಿರ್ಮಿತವಾದ ಆಯುಧಶಾಲೆಯು ಒಂದು ಮಹಾಭೂತ

ದಂತೆ ನಿಂತಿದ್ದಿತು. ಆ ಗೃಹದೊಳಗೆ ಪ್ರವೇಶಿಸಲು ಯಾವ ನರಪ್ರಾಣಿಗೂ ಸಾಧ್ಯವಿಲ್ಲ. ಅಗ್ನಿಬಾಧೆಯಿಂದ ಅಪಾಯವು ಸಂಪ್ರಾಪ್ತವಾಗಬಾರದೆಂದು ಆ ಗೃಹವು ಸಂಪೂರ್ಣವಾಗಿ ಶಿಲೆಯಿಂದಲೇ ನಿರ್ಮಿತವಾಗಿದ್ದಿತು. ಒಳಗೆ ಪ್ರವೇಶಿಸಲು ಚಿಕ್ಕದಾದ ಒಂದು ದ್ವಾರವಿದ್ದಿತು. ಅತ್ಯಂತ ಇಕ್ಕಟ್ಟಾದ ಆ ಬಾಗಿಲೊಳಗೇ ನುಗ್ಗಬೇಕಲ್ಲದೆ, ಒಳಗೆ ಪ್ರವೇಶಿಸಲು ಯಾವ ದಾರಿಯೂ ಇರಲಿಲ್ಲ. ಆ ಕದಗಳನ್ನು ದಾಟಿ ಒಳಗೆ ಹೋದರೆ ವಿಶಾಲವಾದ ಅಂಗಳವೂ ಸೈನಿಕರ ಪಾಳಯಗಳೂ ಗೋಚರವಾಗುವವು. ಕುಂತಳದೇಶದ ದಂಡಿನ ಪಾಳಯವು ಆ ಆಯುಧಶಾಲೆಯಲ್ಲೇ ಇತ್ತು. ಆ ಮಹತ್ತಾದ ಕಟ್ಟಡದ ಬಲಭಾಗವು ಆಯುಧ ನಿರ್ಮಾಣಶಾಲೆಯಾಗಿದ್ದರೆ, ಎಡಭಾಗವು ದಂಡಿನ ನಿವಾಸಸ್ಥಾನವಾಗಿದ್ದಿತು. ಇಲ್ಲಿ ಸಹಸ್ರಾರು ಮಂದಿ ಭಟರು ವಾಸಮಾಡುತ್ತಿದ್ದುದರಿಂದ ಆಯುಧಶಾಲೆಯನ್ನು ಆಕ್ರಮಿಸಲು ಉದ್ಯುಕ್ತರಾದವರು, ಈ ದಂಡನ್ನು ಎದುರಿಸದೆ ಕಾರ್ಯವನ್ನು ನಿರ್ವಹಿಸಲು ಸಾಧ್ಯವಿರಲಿಲ್ಲ.

ಬಾಗಿಲಿನಲ್ಲಿ ಒಂದು ದೀಪವು ಉರಿಯುತ್ತಲಿತ್ತು; ಹತ್ತೆಂಟುಮಂದಿ ಸೈನಿಕರು ಹೊಳೆಯುತ್ತಿರುವ ಖಡ್ಗಗಳನ್ನು ಹಿರಿದು ನಿಂತಿದ್ದರು. ಭಯಂಕರಾಕಾರದ ಆ ಭೀಮಕಾಯರನ್ನು ನೋಡುವಾಗ ಸಾಧಾರಣ ಜನರ ಹೃದಯಗಳಲ್ಲಿ ಭಯವು ಸಂಜಾತವಾಗದಿರದು. ಚಂದ್ರಹಾಸನು ಮುಂದೆ ತೆರಳಿ, ಆ ಭಟರೊಡನೆ ಈ ರೀತಿ ಆಜ್ಞಾಪಿಸಿದನು: "ಈ ಬಾಗಿಲುಗಳನ್ನು ತೆರೆಯಿರಿ!"

"ತೆರೆಯಲಾರೆವು!"

"ಹಾಗಾದರೆ ನೀವು ಯಮಲೋಕಪ್ರವಾಸವನ್ನು ಕೈಕೊಳ್ಳಬೇಕಾಗುವುದು!"

"ಅಲ್ಲಿ ಪರಲೋಕದಲ್ಲಿರುವ ನಿನ್ನ ಪಿತೃದೇವತೆಗಳು ನಿನ್ನ ಆಗಮನವನ್ನು ನಿರೀಕ್ಷಿಸುತ್ತಿರಬಹುದು."

"ಅನಾವಶ್ಯಕವಾಗಿ ನರವಧೆಯನ್ನು ಗೈದು ನೆತ್ತರಿನ ನದಿಯನ್ನು ಹರಿಸುವ ಆಗ್ರಹವು ನನಗಿಲ್ಲ. ಆದುದರಿಂದಲೇ ಬಾಗಿಲುಗಳನ್ನು ತೆರೆದುಕೊಡಿರಿ," ಎಂದು ಅಪೇಕ್ಷಿಸಿದೆನು. ಈ ಕದಗಳನ್ನು ತೆರೆದು ಆಯುಧಶಾಲೆಯನ್ನು ನಮ್ಮ ವಶಪಡಿಸಿದರೆ, ನಿಮ್ಮಲ್ಲಿ ಯಾರೊಬ್ಬರ ದೇಹಕ್ಕೂ ಅಪಾಯವು ಸಂಭವಿಸಲಾರದೆಂದು ನಾನು ಭರವಸೆಯನ್ನು ನೀಡುವೆನು." ಎಂದು ಚಂದ್ರಹಾಸನು ಜನವಧೆಯಿಲ್ಲದೆ, ಆ ಆಯುಧಶಾಲೆಯನ್ನು ಕೈವಶಪಡಿಸಿಕೊಳ್ಳಬೇಕೆಂಬ ಹಂಬಲದೊಡನೆ ನುಡಿದನು; ಆದರೆ ಶತ್ರುಗಳು ಆ ಮಾತುಗಳಿಗೆ ಮಣಿಯುವವರಾಗಿರಲಿಲ್ಲ.

"ಪಾಪ! ನಮ್ಮ ಪ್ರಾಣಗಳ ಮೇಲೆ ನಿನಗೆಷ್ಟು ದಯೆ! ನರವಧೆಗೆ ನಿನಗೆ ಆಗ್ರಹವಿಲ್ಲದಿದ್ದರೆ, ಆಯುಧಶಾಲೆಯನ್ನು ಆಕ್ರಮಿಸುವದಕ್ಕಾಗಿ ಇಲ್ಲಿಗೇಕೆ ಬಂದೆ?"

ಈ ಪರಿಹಾಸ ಪರಿಪೂರ್ಣವಾದ ನುಡಿಗಳನ್ನು ಶ್ರಾವಿಸಲು ಚಂದ್ರಹಾಸನ ಕಣ್ಣುಗಳು ಕೆಂಡವನ್ನು ಕಾರಿದುವು ಮುಖವು ಅರುಣವರ್ಣವನ್ನು ತಾಳಿತು. ದೇಹವು ಕೋಪದಿಂದ ಕಂಪಿಸಲಾರಂಭಿಸಿತು ತನ್ನ ಪಡೆಯ ಸೈನಿಕರ ಮೊಗಗಳನ್ನು ನೋಡುತ್ತ ಅವನು ಹೀಗೆ ಗರ್ಜಿಸಿದನು: 'ಏನು ನೋಡುವಿರಿ? ನಿಮ್ಮ ಕಾರ್ಮುಕಗಳಲ್ಲಿ ಶರಸಂಧಾನವನ್ನು ಮಾಡಿರಿ!"

ಈ ಆಜ್ಞೆಯು ಕುಳಿಂದ ರಾಜಕುಮಾರನ ವದನಪಂಕಜದಿಂದ ಹೊರಬಿದ್ದೊಡನೆಯೇ ಸೈನಿಕರು ಶರಸಂಧಾನವನ್ನು ಮಾಡಿದರು. ಅವು ಸೂಯ್ಕೆಂದು ನೀನಾದಗಳನ್ನು ಮಾಡುತ್ತ ಆಯುಧಶಾಲೆಯಲ್ಲಿರುವ ಭಟರ ದೇಹಗಳನ್ನು ಚುಂಬಿಸಿದುವು. ಒಡನೆಯೇ ಅವರು ಅಲ್ಲಿದ್ದ ಒಂದು ಮಹತ್ತಾದ ಘಂಟೆಯನ್ನು ಬಾರಿಸಿದರು. 'ಘಣ್, ಘಣ್' ಎಂಬ ಸಪ್ಪಳವು ಗಗನ ಮಂಡಲದಲ್ಲಿ ವ್ಯಾಪಿಸಿತು. ಆ ಶಬ್ದವು ಕೇಳಿ ಬಂದೊಡನೆಯೇ ಆಯುಧಶಾಲೆಯೊಳಗಿನಿಂದ ಸಾವಿರಾರು ಮಂದಿ ಭಟರು, ಖಡ್ಗ, ಮುದ್ಗಲ ಪರಶು, ಕಾರ್ಮುಕ ಎಂಬಿತ್ಯಾದಿ ವಿವಿಧಾಯುಧಪಾಣಿಗಳಾಗಿ ಬಾಗಿಲಿನ ಬಳಿಗೆ ಬಂದರು. ಕ್ಷಣಮಾತ್ರದಲ್ಲಿ ಅದೊಂದು ಕಾಳಗಭೂಮಿಯಾಗಿ ಪರಿಣಮಿಸಿತು!

ಕಬ್ಬಿಣದ ಬಾಗಿಲುಗಳ ಸಂದಿಗಾಗಿ ಬರುತ್ತಿರುವ ಶರಗಳು ಚಂದ್ರಹಾಸನ ದಂಡಿನವರ ಶರೀರಗಳನ್ನು ಭೇದಿಸಲಾರಂಭಿಸಿದುವು. ಆ ತೀಕ್ಷ್ಣವಾದ ಬಾಣಗಳು ದಂಡಾಳುಗಳ ಶರೀರದೊಳಗೆ ಪ್ರವೇಶಿಸಿ, ಅವರ ಧಮನಿಗಳಲ್ಲಿ ಹರಿಯುತ್ತಿರುವ ಕೆನ್ನೀರನ್ನು ಹೀರತೊಡಗಿದುವು. ಚಂದ್ರಹಾಸನ ಭಟರು ಪ್ರಯೋಗಿಸುತ್ತಲಿದ್ದ ಬಾಣಗಳು ಆ ಕಬ್ಬಿಣದ ಬಾಗಿಲುಗಳ ಸಂದುಗಳಿಗಾಗಿ ಪ್ರವೇಶಿಸಿ, ಆಯುಧಶಾಲೆಯ ಒಳಗೆ ನಿಂತಿರುವ ಭಟರ ಶರೀರಗಳನ್ನು ಭೇದಿಸಲು ಪರ್ಯಾಪ್ತವಾಗಲಿಲ್ಲ. ಕದಗಳ ಮರೆಯಲ್ಲಿ ನಿಂತು ಶತ್ರುಪಕ್ಷದವರು ಶಸ್ತ್ರಪ್ರಯೋಗವನ್ನು ಮಾಡುತ್ತಿದ್ದುದರಿಂದ, ಅವರನ್ನು ನೋಡಲು ಚಂದ್ರಹಾಸನ ಕಡೆಯ ಭಟರಿಗೆ ಸಾಧ್ಯವಾಗಲಿಲ್ಲ.

ಈ ರೀತಿಯ ಕದನವು ಕೇವಲ ಜೀವನನಾಶವನ್ನುಂಟು ಮಾಡುವುದಲ್ಲದೆ, ಅದರಿಂದ ಕಾರ್ಯ ಸಾಧನೆಯಾಗದೆಂದು ಚಂದ್ರಹಾಸನು ತಿಳಿದುಕೊಂಡನು. ಭದ್ರವಾಗಿ ನಿಂತಿರುವ ಆ ಶಿಲಾನಿರ್ಮಿತ ಕಟ್ಟಡವು ಅಭೇದ್ಯವಾಗಿದ್ದಿತು. ಕದಗಳು ಮುಚ್ಚಲ್ಪಟ್ಟದುದರಿಂದ ಅಂತರ್ಭಾಗದೊಳಗೆ ಪ್ರ

ವೇಶಿಸುವುದು ಎಂದಿಗೂ ಸಾಧ್ಯವಿರಲಿಲ್ಲ. ಕದಗಳಲ್ಲಿ ಅಲ್ಲಲ್ಲಿರುವ ರಂಧ್ರಗಳಿಗಾಗಿ ಶತ್ರುಪಕ್ಷದ ಭಟರು ಪ್ರಯೋಗಿಸುತ್ತಿರುವ ಶರಗಳಾದರೋ, ಗುರಿ ತಪ್ಪದೆ ಚಂದ್ರಹಾಸನ ಸೈನಿಕರನ್ನು ಪೀಡಿಸುತ್ತಲಿದ್ದುವು. ಆಚ್ಛಾದಿತವಾಗಿರುವ ಕಬ್ಬಿಣದ ಬಾಗಿಲುಗಳು ಶತ್ರುಗಳನ್ನು ಸುರಕ್ಷಿತವಾಗಿ ಕಾಯುತ್ತಿದ್ದುವು. ಇಂಥ ಒಂದು ಸನ್ನಿವೇಶದಲ್ಲಿ ಕಾದಾಡಿ ವಿಜಯವನ್ನು ಸಂಪಾದಿಸುವುದು ಅಸಾಧ್ಯವೆಂದು ಚಂದ್ರಹಾಸನು ತಿಳಿದುಕೊಂಡನು. ಹಾಗಾದರೆ ಮಾಡುವುದೇನು? ಆಯುಧಶಾಲೆಯನ್ನು ಭೇದಿಸುವ ಕೃತ್ಯದಲ್ಲಿ ಪರಾಜಯವನ್ನು ಹೊಂದಿ ಜೋಲುಮೋರೆಗಳನ್ನು ಮಾಡಿಕೊಂಡು ಹಿಂದಿರುಗುವುದೇ? ಅದಕ್ಕೆ ಅವನ ಹೃದಯಾಂತರ್ಭಾಗದಲ್ಲಿ ಬೆಳಗುತ್ತಿರುವ ಸ್ವಾಭಿಮಾನವು ಒಪ್ಪಲಿಲ್ಲ. ‘‘ಕದನದಲ್ಲಿ ಮರಣಹೊಂದಲು ಭಯಪಡಬೇಡ; ಆದರೆ ಎಂದಿಗೂ ಶತ್ರುಗಳಿಗೆ ನಿನ್ನ ಬೆನ್ನನ್ನು ತೋರಿಸದಿರು!’’ ಎಂಬ ವೀರವಾಕ್ಯವು ಅವನ ಸ್ಮೃತಿಪಥದಲ್ಲಿ ಬಂದಿತು. ತನ್ನ ಜೀವವನ್ನು ಬಲಿಯರ್ಪಿಸಿಯಾದರೂ ಕಾರ್ಯವನ್ನು ಸಾಧಿಸಬೇಕೆಂದು ಅವನು ಸಂಕಲ್ಪಿಸಿದನು.

ಈ ಸಂದರ್ಭದಲ್ಲಿ ಆ ವೀರ ಕೇಸರಿಯ ಮೆದುಳಿನಲ್ಲಿ ಒಂದು ಮಿಂಚು ಹೊಳೆದಿತು. ಮೊಗದಲ್ಲಿ ಸಾಧಾರಣವಾಗಿರುವ ಎಳೆ ನಗೆಯು ಬೆಳಗಿತು. ಅವನು ತನ್ನ ಕಡೆಯ ಭಟರಿಗೆ ಹೀಗೆ ಆಜ್ಞಾಪಿಸಿದನು: ‘‘ನಾವು ಈ ಕದನದಲ್ಲಿ ವಿಜಯವನ್ನು ಹೊಂದುವದು ಅಶಕ್ಯವು. ವೃಥಾ ನೆತ್ತರಿನ ನದಿಯನ್ನು ಹರಿಸಿ ಪ್ರಯೋಜನವಿಲ್ಲ. ಆದುದರಿಂದ ನೀವೆಲ್ಲರೂ ಈ ಕದನವನ್ನು ನಿಲ್ಲಿಸಿ ಹಿಂದಿರುಗಿರಿ!’’

ಈ ಆಜ್ಞೆಯನ್ನು ಕೇಳಿ ಚಂದ್ರಹಾಸನ ಸೈನ್ಯದವರು ಆಶ್ಚರ್ಯದಿಂದ ಸ್ತಂಭಿತರಾಗಿಹೋದರು! ಲಾಟರೊಡನೆ ಅತ್ಯಂತ ಪರಾಕ್ರಮದಿಂದ ಹೋರಾಡಿ ಕುಂತಳಕ್ಕೆ ವಿಜಯಶ್ರೀಯನ್ನು ಸಂಪಾದಿಸಿಕೊಟ್ಟ ಕುಳಿಂದರಾಜಕುಮಾರನ ಮುಖದಿಂದ ದೌರ್ಬಲ್ಯವನ್ನು ಸೂಚಿಸುವ ಈ ರೀತಿಯ ಒಂದು ಆಜ್ಞೆಯು ಹೊರಬೀಳುವದೆಂದು ಅವರು ಕನಸ್ಸಿನಲ್ಲಿಯೂ ವಿಚಾರಿಸಿರಲಿಲ್ಲ. ಎಂಥ ಭಯಂಕರ ವಿಪತ್ತು ಸಂಪ್ರಾಪ್ತವಾದರೂ ಕಾಳಗದಲ್ಲಿ ಚಂದ್ರಹಾಸನು ತಮ್ಮನ್ನು ಮುಂದಕ್ಕೆ ಒಯ್ಯುವನೆಂದಾಗಿದ್ದಿತು ಅವರ ನಂಬಿಕೆಯು; ಆದರೆ ಅವರ ವಿಶ್ವಾಸವು ಈ ಆಜ್ಞೆಯು ಸರಿಯಲ್ಲವೆಂಬುದನ್ನು ಪ್ರತ್ಯಕ್ಷಗೊಳಿಸಿತು. ‘‘ನಾವು ಶತ್ರುಗಳಿಗೆ ಬೆನ್ನು ತೋರಿಸಬೇಕೆ?’ ಎಂದು ಅವನ ಆಜ್ಞೆಯನ್ನು ಅನುಸರಿಸಲು ತಮಗಿರುವ ವಿಸಮ್ಮತವನ್ನು ಅವನ ದಂಡಿನ ಒಬ್ಬಿಬ್ಬರು ಭಟರು ಸೂಚಿಸದೆ ಇರಲಿಲ್ಲ.

"ನನ್ನ ಆಜ್ಞೆಯನ್ನು ಕುರಿತು ಸಂದೇಹವನ್ನು ವ್ಯಕ್ತಪಡಿಸುವ ಅಧಿಕಾರವು ನಿಮಗಿಲ್ಲ. ನೀವು ನನ್ನ ಮಾತುಗಳನ್ನು ವೇದವಾಕ್ಯವೆಂದು ಬಗೆದು ಮರುಮಾತಾಡದೆ ಹೋರಾಡಬೇಕಾದ ಭಟರೆಂಬುದನ್ನು ನೆನಪಿನಲ್ಲಿಡಬೇಕು. ಆದುದರಿಂದ ಮರುಮಾತಾಡದೆ ನನ್ನ ಆಜ್ಞೆಯನ್ನು ಅನುಸರಿಸಿರಿ!" ಎಂದು ಚಂದ್ರಹಾಸನು ಗರ್ಜಿಸಿದನು.

ಅವನ ಈ ಶಾಸನವನ್ನುಲ್ಲಂಘಿಸಲು ಯಾವ ಭಟರಿಗೂ ಧೈರ್ಯವಿರಲಿಲ್ಲ. ಪರಾಜಯವನ್ನು ಹೊಂದಿದವರಂತೆ ಹಿಂದಿರುಗಲು ವಿಷಣ್ಣತವಾಗಿದ್ದರೂ ಆ ಭಟರು ಮರುಮಾತಾಡದೆ ಹಿಂಜರಿದರು. ಅವರು ತಮ್ಮ ಮುತ್ತಿಗೆಯನ್ನು ನಿಲ್ಲಿಸಿ ಆಯುಧಶಾಲೆಯನ್ನು ಪರಿತ್ಯಜಿಸಿದರು.

ಆಯುಧಶಾಲೆಯ ಒಳಗಿರುವ ಭಟರು ಈ ಅಪರಾತ್ರಿಯಲ್ಲಿ ತಮ್ಮನ್ನು ಆಕ್ರಮಿಸಿದವರು ಯಾರೆಂದೂ, ಅವರೇಕೆ ಹಿಂದಿರುಗಿ ತೆರಳುತ್ತಿರುವರೆಂದೂ ತಿಳಿಯಲು ಜಿಜ್ಞಾಸೆಯುಳ್ಳವರಾಗಿದ್ದರು. ಇನ್ನು ಶತ್ರುಗಳು ತಮ್ಮನ್ನು ಆಕ್ರಮಿಸಲಾರರೆಂದೂ ತಮ್ಮೊಡನೆ ಹೋರಾಡಲು ಅಸಮರ್ಥರಾಗಿ ಅವರು ಹಿಂಜರಿದರೆಂದೂ ಆಯುಧಶಾಲೆಯೊಳಗಿರುವ ಭಟರು ಬಗೆದರು. ಸಾಧ್ಯವಾದರೆ ಕದಗಳನ್ನು ತೆರೆದು ತಾವು ಅವರನ್ನು ಹಿಂಬಾಲಿಸಿ, ಶತ್ರುಗಳನ್ನು ಪೂರ್ಣವಾಗಿ ಪರಾಜಿತರನ್ನಾಗಿ ಮಾಡಬೇಕೆಂದು ಅವರು ನಿರ್ಧರಿಸಿದರು. ಅವರ ಊಹನೆಯು ಶತ್ರುಗಳು ತಮಗಿಂತಲೂ ಅಲ್ಪಸಂಖ್ಯಾಕರೆಂದೂ ಅವರು ಹಿಂಜರಿದುದು ಅವರ ದೌರ್ಬಲ್ಯವನ್ನು ಸೂಚಿಸುತ್ತಿದೆಯೆಂದೂ ಆಗಿದ್ದಿತು. ಅವರು ತಮ್ಮ ನಿರ್ಧಾರದಂತೆ ಆಯುಧಶಾಲೆಯ ಕವಾಟಗಳನ್ನು ತೆರೆದು ಶತ್ರುಗಳನ್ನು ಹಿಂಬಾಲಿಸಿದರು.

ಚಂದ್ರಹಾಸನು ಇಪ್ಪತ್ತು ಮಾರುಗಳಷ್ಟು ದೂರ ಹಿಂದುರಿಗಿ ಹೋಗಿರಬಹುದು. ಆಯುಧಶಾಲೆಯ ಒಳಗಿದ್ದ ಶತ್ರುಗಳು ಕವಾಟಗಳನ್ನು ತೆರೆದು ತಮ್ಮನ್ನು ಹಿಂಬಾಲಿಸುತ್ತಿರುವ ಚಿತ್ರವು ಅವನ ವೀಕ್ಷಣೇಂದ್ರಿಯಗಳಲ್ಲಿ ಪತಿಸಿತು. ಶತ್ರುಗಳು ತಮ್ಮನ್ನು ಹಿಂಬಾಲಿಸುತ್ತಿರುವ ಚಿತ್ರವನ್ನು ಕಂಡೊಡನೆಯೇ ಚಂದ್ರಹಾಸನು ತನ್ನ ಭಟರಿಗೆ:—"ಎಲ್ಲರೂ ಹಿಂದಿರುಗಿ ಹೋಗಿ ಆಯುಧಶಾಲೆಯನ್ನು ಆಕ್ರಮಿಸಿರಿ! ಹೊರಗೆ ಬಂದಿರುವ ಶತ್ರುಗಳನ್ನು ನಾಲ್ಕು ಪಾರ್ಶ್ವಗಳಿಂದಲೂ ಮುತ್ತಿರಿ!" ಎಂಬ ಶಾಸನವನ್ನು ನೀಡಿದನು.

ಈ ವಿಚಿತ್ರ ಆಜ್ಞೆಯನ್ನು ಶ್ರಾವಿಸಿದೊಡನೆಯೇ ಸೈನಿಕರು ಹಿಂದಿರುಗಿ ನೋಡಿದರು. ಆಯುಧಶಾಲೆಯ ಬಾಗಿಲುಗಳನ್ನು ತೆರೆದು ಶತ್ರುಗಳು ತಮ್ಮನ್ನು ಹಿಂಬಾಲಿಸುತ್ತಿರುವ ಚಿತ್ರವು ಅವರ ಕಣ್ಣುಗಳ ಮುಂದೆ ನಿಂತಿ

ದ್ದಿತು. ಆಗ ಚಂದ್ರಹಾಸನೇಕೆ ಕದನವನ್ನು ಉಪೇಕ್ಷಿಸಿ ಹಿಂಜರಿಯಲು ಆಜ್ಞಾಪಿಸಿದನೆಂಬುದರ ರಹಸ್ಯವು ಈಗ ಅವರಿಗೆ ಹೊಳೆದಿತು. ಶತ್ರುಗಳು ಆಯುಧಶಾಲೆಯಿಂದ ಹೊರಗೆ ಬರುವಂತೆ ಮಾಡಿ ಅವರನ್ನು ಪರಾಜಯ ಗೊಳಿಸಲು ಚಂದ್ರಹಾಸನು ಹೂಡಿದ ಸಮರತಂತ್ರವನ್ನು ದಂಡಾಳುಗಳು ಮನಸಾ ಹೊಗಳಿದರು ಅವನ ಆಜ್ಞೆಯನ್ನು ಕುರಿತು ವಿಕಲ್ಪವನ್ನು ತಾಳಿದುದು ಅನುಚಿತವಾಯ್ತೆಂದು ತಮ್ಮ ಮನಸ್ಸಿನಲ್ಲಿಯೇ ಅಂದುಕೊಂಡರು.

ಚಂದ್ರಹಾಸನ ಈ ಆಜ್ಞೆಯು ಲಭಿಸಿದೊಡನೆಯೇ ಭಟರು ತಮ್ಮ ಬಿಲ್ಲುಗಳಲ್ಲಿ ಶರಸಂಧಾನ ಮಾಡುತ್ತ ಮುಂದುವರಿದರು. ಇನ್ನೊಂದು ಕ್ಷಣ ದಲ್ಲಿಯೇ ವಾಯುಮಂಡಲವು ಶರಗಳಿಂದ ನಿಬಿಡವಾಯಿತು. ಹೆಗಲಿಗೆ ಹೆಗಲುಗಳನ್ನು ಕೊಟ್ಟು ಭಟರು ಮುಂದೆ ಸಾಗಿದರು. ನಾಲ್ಕು ಪಾರ್ಶ್ವ ಗಳಿಂದಲೂ ಅವರು ಶತ್ರುಗಳನ್ನು ಮುತ್ತಿದರು.

ಈ ಕೃತ್ಯವನ್ನು ಕಂಡು ಶತ್ರುಗಳು ಆಶ್ಚರ್ಯವಿಹ್ವಲರಾದರು! ಪರಾ ಜಯವನ್ನು ಹೊಂದಿದವರಂತೆ ಹಿಂಜರಿದು ತೆರಳುತ್ತಲಿದ್ದ ಭಟರು, ಅಕಸ್ಮಾ ತ್ತಾಗಿ ಬಂದು ತಮ್ಮನ್ನು ನಾಲ್ಕು ಪಾರ್ಶ್ವಗಳಿಂದಲೂ ಆವರಿಸಿ, ಶರಸಂಧಾನ ವನ್ನು ಮಾಡುತ್ತಿರುವದನ್ನು ವೀಕ್ಷಿಸಿ ಶತ್ರುಗಳಿಗೆ ಏನು ಮಾಡಬೇಕೆಂಬುದು ಹೊಳೆಯಲಿಲ್ಲ. ಹೇಗಾದರೂ ತಮ್ಮನ್ನು ಮುತ್ತಿರುವ ಸೈನ್ಯವನ್ನು ಭೇದಿಸಿ, ಆಯುಧಶಾಲೆಯನ್ನು ಸುರಕ್ಷಿತವಾಗಿರುವ ಹಾಗೆ ಕಾಯಬೇಕೆಂದು ಅವರು ನಿರ್ಧರಿಸಿ, ತಮ್ಮ ಕರಗಳಲ್ಲಿ ಹಿಡಿದಿರುವ ಖಡ್ಗಗಳನ್ನು ಝಳಪಿಸುತ್ತ, ಶತ್ರು ಗಳು ಮುಂದೆ ಹೆಜ್ಜೆಗಳನ್ನು ಇಡಲು ಪ್ರಯತ್ನಿದರು; ಆದರೆ ಅದು ಹೇಗೆ ಸಾಧ್ಯವಾಗುವದು? ಸಾಗರದಂತೆ ಇರುವ ಸೀಮಾತೀತವಾದ ಸೈನ್ಯಸಂದೋ ಹವು ತಮ್ಮನ್ನು ನಾಲ್ಕು ಭಾಗಗಳಿಂದಲೂ ಆವರಿಸಿರುವದಲ್ಲದೆ, ಆಯುಧ ಶಾಲೆಯೊಳಗೆ ಪ್ರವೇಶಿಸಿ ಅದನ್ನು ಕ್ಕೆವಶಪಡಿಸಿಕೊಂಡಿರುವದನ್ನು ಶತ್ರುಗಳು ನೋಡಿದರು. ಆಗ ಅವರ ಬುದ್ಧಿಗಳಲ್ಲಿ ಶತ್ರುಗಳೇಕೆ ಪರಾಜಿತರಾದವರ ಹಾಗೆ ನಟಿಸಿ ಹಿಂಜರಿದರು? ಎಂಬುದು ಹೊಳೆದಿತು. ತಮ್ಮ ತಿಳಗೇಡಿ ತನಕ್ಕಾಗಿ ಅವರು ಮರುಗಿದರು ಅವರ ಹೃದಯಗಳು ನಿರಾಶೆಯ ಕಗ್ಗವಿ ಗಳಾದುವು!

ಭಯಂಕರವಾದ ಕದನವು ನಡೆದಿತು; ವೀರರ ಸಿಂಹನಾದ, ಗಾಯ ಪಡೆದ ಭಟರ ಶೋಕಾಲಾಪಗಳು, ಕತ್ತಿಗಳ ಪರಸ್ಪರ ಸಂಘರ್ಷಣಗಳಿಂದ ಸಂಜಾತವಾಗುತ್ತಿರುವ ಝಣಝಣತ್ಕಾರಗಳು ವಾಯುಮಂಡಲವನ್ನು ಭೇದಿಸಿದುವು! ಭಟರ ಶರೀರಗಳಿಂದ ನೆತ್ತರು ಹರಿದು ಮಣ್ಣನ್ನು ಕೆಂಪಾಗು

ವಂತೆ ಮಾಡಿತು. ಶತ್ರುಗಳ ಆಘಾತಗಳಿಂದ ನೊಂದ ದಂಡಾಳುಗಳು ಕೃತಾಂತನ ಲೋಕದ ಸುಖವನ್ನು ಅನುಭವಿಸುವದಕ್ಕಾಗಿ, ಅಂತಿಮ ಪ್ರವಾಸವನ್ನು ಕೈಕೊಂಡರು! ನರದೇಹಗಳು ಭೂಮಿಯಲ್ಲಿ ಉರುಳಾಡತೊಡಗಿದುವು!

ದಿವಾಕರನು ಉದಯವನ್ನು ಹೊಂದುತ್ತಿರುವ ವೇಳೆಯಲ್ಲಿ ಕದನವು ಸಮಾಪ್ತಿಯಾಯಿತು. ಶತ್ರುಗಳು ಪರಾಜಿತರಾಗಿ ಹೋದರು. ಅಳಿದುಳಿದವರು ಜೀವರಕ್ಷಣೆಗಾಗಿ ಪಲಾಯನ ಮಂತ್ರವನ್ನು ಪಠಿಸಿದರು. ಆಯುಧನಿರ್ಮಾಣ ಶಾಲೆಯು ಚಂದ್ರಹಾಸನ ಕರಗತವಾಯಿತು.

ಚಂದ್ರಹಾಸನು ತನ್ನ ಸೈನ್ಯವನ್ನು ಆಯುಧ ನಿರ್ಮಾಣಶಾಲೆಯಲ್ಲಿ ನೆಲಿಸಿ, ಕೆಲವು ಮುಂದಿ ಭಟರೊಡನೆ ಅಮಾತ್ಯನಿಗೆ ತಕ್ಕ ಪಾರುಪತ್ಯವನ್ನು ಮಾಡುವದಕ್ಕಾಗಿ ಹೊರಟನು.

---

## ದ್ವಂದ್ವಯುದ್ಧ

ದುಷ್ಟಬುದ್ಧಿಯು ತನ್ನ ನಿಕೇತನದಲ್ಲಿ ಕುಳಿತಿರುವನು; ಆ ರಾತ್ರಿ ಹಲವು ಭಯಂಕರ ಕನಸುಗಳನ್ನು ಅವನು ಕಂಡದುದರಿಂದ ಹಲವು ಚಿಂತಾ ಮೇಘಗಳು ಅವನ ಮನೋಮಂಡಲವನ್ನು ಆವರಿಸಿದ್ದುವು. ತಾನು ಹೂಡಿ ಇದುವರೆಗೆ ವಿಜಯವನ್ನು ಸಂಪಾದಿಸಿದ ಕಾರಸ್ಥಾನವು ಎಲ್ಲಿ ಪರಾಜಯ ವನ್ನು ಹೊಂದುವದೋ, ಎಂಬುದಾಗಿ ಅವನೊಮ್ಮೆ ವಿಚಾರಿಸಿದನು. ಇಲ್ಲ, ತನ್ನ ಶಿರಸ್ಸಿನಲ್ಲಿ ಮೆದುಳು ಇರುವವರೆಗೆ ಪರಾಜಯವನ್ನು ಹೊಂದಲಾರದು, ಎಂದು ಅವನು ತನೊಳಗೆ ತಾನೇ ನುಡಿದುಕೊಂಡನು; ಆದರೆ ತನಗಿಂತ ತಂತ್ರಶಾಲಿಗಳಾದ ವ್ಯಕ್ತಿಗಳು ಲೋಕದಲ್ಲಿರುವಾಗ, ತಾನು ಪರಾಜಯವನ್ನು ಅಂತ್ಯದಲ್ಲಿ ಪಡೆಯಬೇಕಾಗಿ ಬರಬಹುದೆಂಬ ಚಿಂತೆಯು ಅವನನ್ನು ಬಾಧಿ ಸದೆ ಇರಲಿಲ್ಲ. ರಾಜನಂದಿನಿಯು ಅರಮನೆಯಿಂದ ಪಾರಾದುದು, ಚಂದ್ರ ಹಾಸನು ಬಂಧನದಿಂದ ವಿಮುಕ್ತನಾದುದು ಎಂಬ ಈ ಎರಡು ಚಿತ್ರಗಳು ಅವನ ನೆನಪಿಗೆ ಬಂದುವು. ತನಗೆ ಮಂಕುಬೂದಿಯನ್ನೆರಚಿ ಪರಾಜಿತ ನನ್ನಾಗಿ ಮಾಡಿದ ಒಬ್ಬ ಅದ್ವಿತೀಯ ತಂತ್ರಜ್ಞನ ಕರವಾಡವನ್ನು ಅವನು ಈ ಎರಡು ಚಿತ್ರಗಳಲ್ಲಿಯೂ ಕಂಡನು. ಆ ವ್ಯಕ್ತಿಯ ಚೈತನ್ಯವು ತನ್ನ ನ್ನೆಲ್ಲಿ ಪರಾಜಯಗೊಳಿಸುವುದೋ, ಎಂಬ ಸಂದೇಹವು ಅಮಾತ್ಯನನ್ನು ಪೀಡಿ ಸಿತು; ಇದಲ್ಲದೆ, ಮಾರ್ತಂಡವರ್ಮ ಭುವನವಿಕ್ರಮ ಇವರನ್ನು ನಿಗ್ರಹಿಸದೆ ಸಿಂಹಾಸನವು ತನಗೆ ಶಾಶ್ವತವಾಗದೆಂಬುದನ್ನು ಅವನು ತಿಳಿದಿದ್ದನು. ಯುದ್ಧ

ರಂಗದಿಂದ ಅವರಿಬ್ಬರು ಹಿಂದಿರುಗಿ ಬಂದೊಡನೆಯೇ ಯಾವುದಾದರೂ ಒಂದು ತಂತ್ರದಿಂದ ಅವರಿಬ್ಬರನ್ನು ವಧಿಸಬೇಕೆಂದು ಅಮಾತ್ಯನು ಸಂಕಲ್ಪಿಸಿದ್ದನು. ಅದಕ್ಕಾಗಿಯೇ ಸೈನ್ಯದ ಚಲನವಲನಗಳನ್ನು ತಿಳಿದುಕೊಳ್ಳುವದಕ್ಕಾಗಿ ಪ್ರತ್ಯೇಕ ಚಾರರನ್ನು ಅವನು ನಿಯಮಿಸಿದ್ದನು; ಆದರೆ ಅವನ ಈ ಪ್ರಯತ್ನವು ಯಶಸ್ವೀಯಾಗಲಿಲ್ಲ. ಭುವನವಿಕ್ರಮನೂ ಮಾರ್ತಂಡವರ್ಮನೂ ಆ ಚಾರರನ್ನು ವಂಚಿಸಿ ಮಾಯವಾಗಿದ್ದರು. ಅವರು ಎತ್ತ ತೆರಳಿದರು ಎಂಬುದಾಗಲಿ, ಅವರ ಸೈನ್ಯಗಳೆಲ್ಲಿರುವವೆಂಬುದಾಗಲಿ ತಿಳಿದುಕೊಳ್ಳಲು ದುಷ್ಟಬುದ್ಧಿಗೆ ಸಾಧ್ಯವಾಗಲಿಲ್ಲ. ಯಾವುದಾದರೂ ಒಂದು ರಹಸ್ಯ ಸ್ಥಳದಲ್ಲಿ ತಮ್ಮ ಸೈನ್ಯಗಳೊಡನೆ ತನ್ನ ಉದ್ಯಮಗಳನ್ನು ಅಡಿಮೇಲು ಮಾಡುವದಕ್ಕಾಗಿ ಅವರು ಪ್ರಯತ್ನಿಸುತ್ತಿರಬಹುದೆಂದು ಆತನು ತನ್ನೊಳಗೆ ತಾನೇ ನುಡಿದುಕೊಂಡನು.

ಹೀಗೆ ಅವನ ಮನಸ್ಸು ವಿಚಾರಗಳ ಸಂತೆಯಾಗಿ ಪರಿಣಮಿಸಿರಲು, ಒಬ್ಬ ಭಟನು ಭಯಕಾತರನಾಗಿ ತನ್ನ ಮಂದಿರದ ಬಳಿಗೆ ಓಡಿ ಬರುತ್ತಿರುವದು ದೃಗ್ಗೋಚರವಾಯಿತು. ಅವನು ತನ್ನ ಚಾರನಾದ ವೀರವರ್ಮನಾಗಿರುವನೆಂಬುದನ್ನು ಅಮಾತ್ಯನು ತಿಳಿದುಕೊಂಡನು. ವೀರವರ್ಮನು ಭಯಭರಿತನಾಗಿ ತನ್ನ ಮಂದಿರಕ್ಕೆ ಬರುತ್ತಿರುವದನ್ನು ನೋಡಿ, ಅಮಾತ್ಯನಿಗೆ ಆಶ್ಚರ್ಯವಾಯಿತು!

ಅಮಾತ್ಯನ ಕೋಣೆಯೊಳಗೆ ವೀರವರ್ಮನು ಓಡಿ ಬಂದು: "ಅಮಾತ್ಯರೇ! ಅಮಾತ್ಯರೇ!" ಎಂದು ಕೂಗಿದನು.

"ಏನಯ್ಯಾ, ವೀರವರ್ಮ!" ಎಂದನು ಅಮಾತ್ಯನು ಕುತೂಹಲ ಚಿತ್ತನಾಗಿ.

"ಅಮಾತ್ಯರೇ, ಸರ್ವನಾಶವಾಗಿ ಹೋಗಿದೆ! ಜೀವದಾಶೆಯಿದ್ದರೆ, ಈಗಲೇ ನಾಡನ್ನು ತ್ಯಜಿಸಿರಿ!"

"ಅದೇಕೆ ಹಾಗೆ ಹೇಳುತ್ತಿರುವೆ, ಏನಾಗಿದೆ?"

"ಆಗಿರುವುದೇನು? ಸರ್ವನಾಶ! ಇನ್ನೊಂದು ನಿಮಿಷ ನೀವಿಲ್ಲಿ ನಿಂತರೆ, ನಿಮ್ಮ ದೇಹದಲ್ಲಿ ಪ್ರಾಣವು ಉಳಿಯಲಾರದು!"

"ಸರ್ವನಾಶ! ಏನಾಯಿತು ಹೇಳು!" ಎಂದು ಉತ್ಕಂಠಭರಿತನಾಗಿ ಅಮಾತ್ಯನು ಪ್ರಶ್ನಿಸಿದನು.

"ನಗರವು ಶತ್ರುಗಳ ಕರಗತವಾಯಿತು!"

"ಹೇಗೆ? ಯಾರು ಶತ್ರುಗಳು? ಲಾಟ ದೇಶದವರೇ?"

"ಅಲ್ಲಲ್ಲ! ಮಾರ್ತಂಡವರ್ಮರು ಬಂದಿರುವರು. ನಿನ್ನೆ ಮಧ್ಯರಾತ್ರಿಯಲ್ಲಿ ಮಹಾದ್ವಾರದಲ್ಲಿರುವ ದಂಡನಾಯಕನನ್ನು ವಧಿಸಿ, ಪುರಪ್ರವೇಶ ಮಾಡಿದರು."

"ಅನಂತರವೇನು?"

"ಮಾರ್ತಂಡ ವರ್ಮರು ಬೊಕ್ಕಸವನ್ನು ವಶಪಡಿಸಿಕೊಂಡಿರುವರು" ಎಂದು ನುಡಿದು, ವೀರವರ್ಮನು:"ಚಂದ್ರಹಾಸನು ಆಯುಧನಿರ್ಮಾಣ ಶಾಲೆಯನ್ನು ವಶಪಡಿಸಿಕೊಂಡಿರುವನು; ಭುವನವಿಕ್ರಮನು ಸೈನಿಕರೊಡನೆ ಮಹಾದ್ವಾರದಲ್ಲಿ ನೆಲೆಸಿರುವನು."

ತನ್ನ ಕುಮಾರನಿಗೆ ಯಾವುದಾದರೂ ವಿಪತ್ತು ಸಂಪ್ರಾಪ್ತವಾಗಿರುವ ಭೀತಿಯಿಂದ ಅಮಾತ್ಯನು:—"ಮದನನೆಲ್ಲಿ?" ಎಂದು ಪ್ರಶ್ನಿಸಿದನು.

"ಮದನಕುಮಾರರನ್ನು ಮಾರ್ತಾಂಡವರ್ಮರು ಸೆರೆಹಿಡಿದಿರುವರು!"

"ಮದನನು ಬಂಧನಕ್ಕೊಳಗಾದನೆ? ಇದುವರೆಗೆ ನೀನೇನು ಮಾಡುತ್ತಿದ್ದೆ? ಕತ್ತೆ! ಶತ್ರುಗಳು ನಗರವನ್ನು ಕೈವಶಪಡಿಸಿಕೊಳ್ಳುವವರೆಗೂ ಅವರ ಸುಳಿವು ನಿನಗೆ ಕತ್ತಲಿಲ್ಲವೆ? ನಿನ್ನಂಥ ಅವಿವೇಕ ಶಿಖಾಮಣಿಗಳನ್ನು ಚಾರರನ್ನಾಗಿ ನಿಯಮಿಸಿದುದರಿಂದಲೇ ನನಗೆ ಈ ದುರವಸ್ಥೆಯು ಪ್ರಾಪ್ತವಾಯಿತು!" ಎಂಬ ನುಡಿಗಳು ಕೋಪಭರಿತನಾದ ದುಷ್ಟಬುದ್ಧಿಯ ವದನದಿಂದ ಹೊರಬಿದ್ದವು.

"ಅಮಾತ್ಯರೆ! ಸಿಟ್ಟಾಗಬೇಡಿರಿ ತಮ್ಮ ಕಾಲಿಗೆ ಬಿದ್ದು ಬೇಡಿಕೊಳುವೆನು. ಈಗಲೇ ತೆರಳಿರಿ! ಇಲ್ಲದಿದ್ದರೆ ತಮ್ಮ ಪ್ರಾಣವು ಉಳಿಯಲಾರದು!"

"ಹೂಂ, ನನಗಿನ್ನು ಬದುಕುವ ಆಶೆಯಿಲ್ಲ; ನನ್ನ ಪ್ರಯತ್ನವು ಗಾಳಿಯ ಗೋಪುರವಾಗಿ ಪರಿಣಮಿಸಿತು; ಆದರೆ ಒಂದು ಕೃತ್ಯವನ್ನು ಮಾತ್ರ ನೆರವೇರಿಸಿ, ನನ್ನ ಸೇಡನ್ನು ತೀರಿಸಿಕೊಳ್ಳುವೆನು!"

"ಅದನ್ನು ಹೇಳಿದರೆ ಈ ದಾಸನು ನೆರವೇರಿಸುವನು."

"ಆಗದು. ನಾನೇ ನೆರವೇರಿಸುವೆನು. ಅಂಬಿಕಾ ಗ್ರಾಮದಲ್ಲಿರುವ ಮಹಾರಾಜರನ್ನು ವಧಿಸಿ, ನಾನು ದೇಶಾಂತರಕ್ಕೆ ಹೋಗುವೆನು. ಅವರು ಪುನಃ ಸಿಂಹಾಸನದಲ್ಲಿ ಮಂಡಿಸುವದನ್ನು ನಾನು ನೋಡಲಾರೆನು" ಎಂದು ತನ್ನ ಕೃಷ್ಣಹೃದಯವನ್ನು ಪ್ರದರ್ಶಿಸುತ್ತ ಅಮಾತ್ಯನು ನುಡಿದನು.

"ತಾವು ಇಲ್ಲಿಂದ ಒಡನೆಯೇ ಪಾರಾಗದಿದ್ದರೆ ನಿಶ್ಚಯವಾಗಿಯೂ ವಿಪತ್ತುಗಳು ಬಂದೊದಗುವವು. ಚಂದ್ರಹಾಸನು ತನ್ನ ಸೈನ್ಯದೊಡನೆ ಈಗಲೇ ಇಲ್ಲಿಗೆ ಬರಬಹುದು."

"ಆ ಪಿಶಾಚವು ನಶಿಸಲಿ! ಅಂದು ಆ ಭವಿಷ್ಯವನ್ನು ನುಡಿದ ಜ್ಯೋತಿಷ್ಯನ ವಚನಗಳು ಸತ್ಯವಾಗಿ ಪರಿಣಮಿಸುವ ಹಾಗೆ ತೋರುತ್ತವೆ."

ಇಷ್ಟರಲ್ಲಿ ಬೀದಿಯ ಬಾಗಿಲುಗಳ ಮೇಲೆ ಬಲವಾಗಿ ತಟ್ಟುತ್ತಿರುವ ಶಬ್ದವು ಕೇಳಿ ಬಂದಿತು. ಅದರೊಡನೆಯೇ ಜನರು ಮಾತಾಡುತ್ತಿರುವ ನಿನಾದವೂ ಬಂದು ವೀರವರ್ಮನ ಶ್ರವಣೇಂದ್ರಿಯದಲ್ಲಿ ಪತಿಸಿತು. "ಶತ್ರುಗಳು ಬಂದಿರುವ ಹಾಗೆ ತೋರುತ್ತದೆ! ಹಿತ್ತಲಿನ ಬಾಗಿಲಿಗಾಗಿ ಬೇಗನೆ ಪಾರಾಗಿರಿ!" ಎಂದು ವೀರವರ್ಮನು ನುಡಿದನು.

"ಹೂಂ-ಹೋಗುತ್ತೇನೆ; ನಾನೆಲ್ಲಿಗೆ ತೆರಳಿರುವೆನೆಂಬುದನ್ನು ಮಾತ್ರ ಶತ್ರುಗಳಿಗೆ ಉಸುರಕೂಡದು!"

"ಇಲ್ಲ, ಇಲ್ಲ! ಪ್ರಾಣವು ಈ ದೇಹದಲ್ಲಿರುವವರೆಗೆ ನಾನು ಹೇಳುವವನಲ್ಲ."

ಇಷ್ಟು ನುಡಿದು ಯುವಕನು ಹಿತ್ತಲಿನ ಕಡೆಯ ಕದಗಳನ್ನು ತೆರೆದು, ಕರದಲ್ಲಿ ಒಂದು ಖಡ್ಗವನ್ನು ಹಿಡಿದುಕೊಂಡು ಪಾರಾದನು. ಅವನು ತೆರಳಿದೊಡನೆಯೇ ಆ ಕಡೆಯ ಬೀದಿಯ ಕಡೆಯ ಬಾಗಿಲುಗಳನ್ನು ಮುರಿದು, ಭಟರು ಮನೆಯೊಳಗೆ ಪ್ರವೇಶಿಸಿದರು. ನೂರಾರು ಮಂದಿ ಭಟರು ಏಕಕಾಲದಲ್ಲಿ ವೀರವರ್ಮನನ್ನು ಮುತ್ತಿದರು. ಅವರ ನಾಯಕತ್ವವನ್ನು ವಹಿಸಿಕೊಂಡ ಚಂದ್ರಹಾಸನು ವೀರವರ್ಮನನ್ನು ಈ ರೀತಿ ಪ್ರಶ್ನಿಸಿದನು:

"ಯುವರಾಜನೆಲ್ಲಿರುವನೆಂಬುದನ್ನು ಬೇಗನೆ ಹೇಳು!"

"ನನಗೆ ತಿಳಿಯದು."

"ಇಲ್ಲಿಯವರೆಗೆ ಅವನು ಸಂಭಾಷಿಸುತ್ತಿರುವದನ್ನು ನಾನು ಹೊರಗಿನಿಂದ ಕೇಳಿದ್ದೇನೆ; ಆದುದರಿಂದ ಅವನೆಲ್ಲಿರುವನೆಂಬುದನ್ನು ಬೇಗನೆ ಹೇಳು!"

"ನನಗೆ ತಿಳಿಯದು; ನಾನು ಅವರ ದರ್ಶನಕ್ಕಾಗಿಯೇ ಬಂದವನು. ನಾನು ಇಲ್ಲಿಗೆ ಬರುವುದಕ್ಕೆ ಮೊದಲೇ ಅವರು ಇಲ್ಲಿಂದ ಹೋಗಿರುವರು." ಎಂದು ಭಯದಿಂದ ಕಂಪಿಸುತ್ತ ವೀರವರ್ಮನು ನುಡಿದನು.

"ನೀನೇಕೆ ಅಸತ್ಯವನ್ನು ನುಡಿಯುತ್ತಿರುವೆ?" ಎಂದು ಚಂದ್ರಹಾಸನು ಗರ್ಜಿಸಿದೊಡನೆಯೇ ಹತ್ತೆಂಟು ಪ್ರಹಾರಗಳ ಉಪಹಾರವು ಭಟರ ಕರಗಳಲ್ಲಿ ಶೋಭಿಸುತ್ತಿರುವ ದಂಡಗಳಿಂದ ವೀರವರ್ಮನಿಗೆ ಲಭಿಸಿತು. ಆ ತಾಡನಗಳನ್ನು ಅವನು ಸಹಿಸಲಾರದೆ, ಭೂಮಿಯನ್ನು ಶರಣು ಹೊಂದಿದನು. ಏಕಾಂಗಿಯಾದ ಅವನ ಮೇಲೆ ಹತ್ತೆಂಟು ಮಂದಿ ಜನರು ಪ್ರಹಾರಗಳನ್ನು ವರ್ಷಿಸುತ್ತಿರುವಾಗ ಅವನೇನು ಮಾಡುವನು?

ಇಷ್ಟರಿಂದ ಆಗಲಿಲ್ಲ; ಭೀಮಕಾಯನಾದ ಸೈನಿಕನೊಬ್ಬನು ವೀರವರ್ಮನ ಎದೆಯ ಮೇಲೆ ಕುಳಿತು ಮುಷ್ಟಿಯನ್ನು ಗಟ್ಟಿಹಿಡಿದು, ವೀರವರ್ಮನ ಕೆನ್ನೆ, ಮೂಗು, ಲಲಾಟ ಎಂಬಿತ್ಯಾದಿ ಅಂಗಗಳ ಮೇಲೆ ಭಯಂಕರವಾಗಿ ಪ್ರಹಾರಗಳನ್ನು ವರ್ಷಿಸತೊಡಗಿದನು. ವೀರವರ್ಮನ ನಾಸಿಕವು ಒಡೆದು, ಒಳಗಿನಿಂದ ನೆತ್ತರು ಪ್ರವಾಹ ರೂಪದಲ್ಲಿ ಹರಿಯಲಾರಂಭಿಸಿತು. ಬಾಯಲ್ಲಿರುವ ಒಂದೆರಡು ಹಲ್ಲುಗಳು ಮುರಿದು ಹೋದುವು. ಇಷ್ಟು ಅನರ್ಥಗಳಾಗಿದ್ದರೂ ಅವನ ಎದೆಯ ಮೇಲೆ ಆರೂಢನಾಗಿದ್ದ ಭಟನು ತನ್ನ ಉದ್ಯಮವನ್ನು ಸಾಕುಮಾಡಲಿಲ್ಲ. ಅವನು ಒಂದೇ ಸಮನೆ ವೀರವರ್ಮನ ಮುಖದ ಮೇಲೆ ತಾಡನಗಳನ್ನು ಅರ್ಪಿಸುತ್ತ: “ನೀಚನೇ! ಅಮಾತ್ಯನೆತ್ತ ತೆರಳಿರುವನೆಂಬುದನ್ನು ಬೊಗಳು; ಇಲ್ಲದಿದ್ದರೆ ನಿನ್ನ ದೇಹದಲ್ಲಿ ಪ್ರಾಣವು ಉಳಿಯಲಾರದು!” ಎಂದೆನ್ನುತ್ತಿದ್ದನು.

ವೀರವರ್ಮನಿಗೆ ಈ ಭಯಂಕರವಾದ ಪ್ರಹಾರಗಳನ್ನು ಸಹಿಸಲು ಸಾಧ್ಯವಾಗಲಿಲ್ಲ. ಖಡ್ಗವನ್ನು ಪ್ರಯೋಗಿಸಿ ಅವನನ್ನು ಕೊಂದಿದ್ದರೆ ಅವನು ಈ ಯಾತನೆಯನ್ನು ಅನುಭವಿಸಬೇಕಾಗಿ ಬರುತ್ತಿರಲಿಲ್ಲ; ಆದರೆ ಹಾಗೆ ಕೊಲ್ಲದೆ ಮುಷ್ಟಿಯನ್ನು ಗಟ್ಟಿಯಾಗಿ ಹಿಡಿದು ಈ ರೀತಿ ಪ್ರಹರಿಸುವುದು ನರಕಯಾತನೆಗೆ ತುಲ್ಯವಾಗಿ ಆತನಿಗೆ ತೋರಿಬಂದಿತು.

“ಅಯ್ಯೋ ಮಹಾರಾಯರೇ! ನನ್ನನ್ನು ಈ ರೀತಿ ಹಿಂಸಿಸಬೇಡಿರಿ! ಅಮಾತ್ಯರು ಎತ್ತ ತೆರಳಿದರೆಂಬುದನ್ನು ಹೇಳುತ್ತೇನೆ!” ಈ ರೀತಿ ಅವನು ಅಳುತ್ತ ನುಡಿದನು.

“ಕತ್ತೆಯ ಮಗನೆ! ಆ ಬುದ್ಧಿಯು ನಿನಗೆ ಈ ಮೊದಲೇ ಏಕೆ ತೋರಲಿಲ್ಲ!” ಎಂದು ವೀರವರ್ಮನ ಎದೆಯ ಮೇಲೆ ಕುಳಿತಿದ್ದ ಭೀಮಕಾಯನು ಪುನಃ ಒಂದು ತಾಡನವನ್ನು ವೀರವರ್ಮನಿಗೆ ಸನ್ಮಾನಿಸಿದನು.

“ಮಹಾರಾಯರೇ! ಕತ್ತೆಯನ್ನು ಹೊಡೆಯುವಂತೆ ಹೊಡೆಯಬೇಡಿರಿ! ನನ್ನ ಎದೆಯನ್ನು ಈ ಮನುಷ್ಯನು ಬಿಟ್ಟರೆ ಸತ್ಯವನ್ನು ಹೇಳುವೆನು.”

ತನ್ನ ಕಡೆಯ ಭಟನನ್ನು ನೋಡಿ ಚಂದ್ರಹಾಸನು: “ನೀನು ಅವನ ಎದೆಯಿಂದ ಏಳು; ಅವನು ಬೊಗಳಬೇಕಾದುದನ್ನು ಬೊಗಳಲಿ!” ಎಂದು ಆಜ್ಞಾಪಿಸಿದನು. ಅದರಂತೆ ಆ ಯೋಧನು ವೀರವರ್ಮನ ಎದೆಯನ್ನು ತ್ಯಜಿಸಿ ಎದ್ದು ನಿಂತನು. ವೀರವರ್ಮನು ತಾನು ಬಿದ್ದಲ್ಲಿಂದ ಎದ್ದು ಕುಳಿತು ಶ್ವಾಸವನ್ನು ತೆಗೆದುಕೊಂಡನು.

“ಅಮಾತ್ಯನು ಎತ್ತ ಹೋದನು?” ಎಂದು ಚಂದ್ರಹಾಸನು ಪ್ರಶ್ನಿಸಿದನು.

"ಅಂಬಿಕಾ ಗ್ರಾಮಕ್ಕೆ!" ಎಂದನು ವೀರಪರ್ವನು.

"ಏಕೆ?"

"ಮಹಾರಾಜರನ್ನು ವಧಿಸುವದಕ್ಕಾಗಿ!" ನಡುಗುವ ಸ್ವರದಲ್ಲಿ ವೀರವರ್ಮನು ಹೇಳಿದನು.

"ಮಹಾರಾಜರು ಅಂಬಿಕಾಗ್ರಾಮದಲ್ಲಿ ಸೆರೆಯನ್ನು ಅನುಭವಿಸುತ್ತಲಿರುವರೇ?"

"ಹೌದು. ಭಗವತೀ ಕ್ಷೇತ್ರದಿಂದ ಇನ್ನೂರು ಮೂರು ದಕ್ಷಿಣದಲ್ಲಿ ಒಂದು ಗುಹೆಯಿದೆ; ಅಲ್ಲಿ ಅಮಾತ್ಯರು ಮಹಾರಾಜರನ್ನು ಸೆರೆಯಿಟ್ಟಿರುವರು. ತಮ್ಮ ಪ್ರಯತ್ನದಲ್ಲಿ ವಿಜಯವು ಲಭಿಸಿತೆಂದು ತಿಳಿದೊಡನೆಯೇ ಅಮಾತ್ಯರು ತಮ್ಮ ಪ್ರತೀಕಾರೇಚ್ಛೆಯಿಂದ ಮಹಾರಾಜರನ್ನು ವಧಿಸುವದಕ್ಕಾಗಿ ತೆರಳಿರುವರು."

"ಸಾಕು! ಇವನನ್ನು ಕಾರಾಗೃಹದಲ್ಲಿಡಿರಿ" ಎಂದು ಚಂದ್ರಹಾಸನು ತನ್ನ ಕಡೆಯ ಭಟರಿಗೆ ಆಜ್ಞಾಪಿಸಿದನು. ಅದನ್ನು ಭಟರು ಅನುಸರಿಸಿದರೆಂದು ಹೇಳಬೇಕಾದುದಿಲ್ಲವಷ್ಟೆ? ಚಾರನನ್ನು ಸೈನಿಕರು ಕಾರಾಗೃಹಕ್ಕೆ ಒಯ್ದ ನಂತರ ಚಂದ್ರಹಾಸನು:—"ನಾವು ಈಗಲೆ ಅಂಬಿಕಾಗ್ರಾಮಕ್ಕೆ ತೆರಳಬೇಕಾಗಿದೆ. ನಾವು ವಿಳಂಬ ಮಾಡಿದರೆ, ದುಷ್ಟಬುದ್ಧಿಯಿಂದ ಮಹಾರಾಜರಿಗೆ ವಿಪತ್ತು ಸಂಭವಿಸಬಹುದು. ಆದುದರಿಂದ ಹತ್ತೆಂಟು ಮಂದಿ ನನ್ನೊಡನೆ ಬನ್ನಿರಿ. ಉಳಿದವರು ಮಾರ್ತಂಡವರ್ಮರಿಗೂ ಭುವನವಿಕ್ರಮರಿಗೂ ಬೆಂಬಲವನ್ನು ನೀಡಿ, ನಗರರಕ್ಷಣೆಯನ್ನು ಮಾಡುತ್ತಿರಲಿ" ಎಂದು ತನ್ನ ದಂಡಾಳುಗಳಿಗೆ ಆಜ್ಞಾಪಿಸಿದನು.

"ಮಹಾಸ್ವಾಮಿಯವರ ಅಪ್ಪಣೆಯಂತೆ!" ಎಂದು ನುಡಿದು, ದಂಡಾಳುಗಳು ಜಯಘೋಷವನ್ನು ಮಾಡಿದರು. ಅಂಬಿಕಾಗ್ರಾಮದಲ್ಲಿ ಬಂಧನದಲ್ಲಿ ಬಳಲುತ್ತಿರುವ ಮಹಾರಾಜರನ್ನು ವಿಮೋಚಿಸುವುದಕ್ಕಾಗಿ ಹತ್ತೆಂಟು ಮಂದಿ ಭಟರೊಡನೆ ಚಂದ್ರಹಾಸನು ತೆರಳಿದನು.

× × × ×

ಅಂಬಿಕಾಗ್ರಾಮ; ಒಂದು ತಗ್ಗಿನ ಗುಹೆಯಲ್ಲಿ ಕುಂತಳ ಸಾಮ್ರಾಜ್ಯದ ಸಾರ್ವಭೌಮನು ತುರಂಗವಾಸದ ರುಚಿಯನ್ನು ಆಸ್ವಾದಿಸುತ್ತಲಿರುವನು. ಅರಮನೆಯ ಹಂಸತೂಲಿಕಾತಲ್ಪದಲ್ಲಿ ನಿದ್ರಿಸುತ್ತಿರುವ ಮಹಾರಾಜನು ಓರ್ವ ಸಾಧಾರಣ ತಿರುಕನಂತೆ ಧೂಳು ಮತ್ತು ಕಸ ಇವುಗಳಿಂದ ಪರಿಪೂರ್ಣವಾದ ನೆಲದಲ್ಲಿ ಮಲಗಿ, ಕನಸುಗಳನ್ನು ಕಾಣಬೇಕಾಗಿ ಬಂದಿದೆ. ಯಾರ ಅಭೀಷ್ಟ

ಗಳನ್ನು ನೆರವೇರಿಸಲು ಸಹಸ್ರಾರು ಮಂದಿ ದಾಸ-ದಾಸಿಯರು ಸನ್ನದ್ಧರಾಗಿ ನಿಂತಿರುವರೋ, ಆ ಸಾಮ್ರಾಟನಿಂದು ತನ್ನ ಪಿಪಾಸೆಯನ್ನು ಶಾಂತಗೊಳಿಸಲು ಒಂದು ಬಿಂದು ಜಲವು ಲಭಿಸಬೇಕಾದರೆ ಅತ್ಯಂತ ವಿನಯಪೂರ್ವಕವಾಗಿ ಪಹರೆಯವನನ್ನು ಯಾಚಿಸಬೇಕಾಗಿ ಬಂದಿದೆ. ಯಾವ ಶರೀರವು ದಿವ್ಯವಾದ ರೇಷ್ಮೆಯ ವಸ್ತ್ರಗಳಿಂದಲೂ ವಿವಿಧ ರತ್ನಾಭರಣಗಳಿಂದಲೂ ವಿಭೂಷಿತವಾಗಿ ಬೆಳಗುತ್ತಿತ್ತೋ, ಆ ನರದೇಹವಿಂದು ಒರಟಾದ ಮಲಿನ ವಸ್ತ್ರಗಳನ್ನು ಧರಿಸಿ ಅಂಧಕಾರಮಯವಾದ, ಶುದ್ಧವಾಯುಸಂಚಾರಶೂನ್ಯವಾದ ಗುಹೆಯಲ್ಲಿ ಬಳಲಬೇಕಾಗಿ ಬಂದಿರುವುದು! ಯಾವ ಮನುಷ್ಯನು ಸರ್ವಸ್ವತಂತ್ರನಾಗಿ ಭೂಮಂಡಲದಲ್ಲಿ ತನಗೆ ಇಷ್ಟವಾದಲ್ಲಿ ವಿಹರಿಸುತ್ತಿದ್ದನೋ, ಆ ಮನುಷ್ಯನು ಕೆಲವು ಅಡಿಗಳಷ್ಟು ವಿಸ್ತೀರ್ಣವಾದ ಗುಹೆಯಲ್ಲಿ ಸ್ವಾತಂತ್ರ್ಯವಿಲ್ಲದೆ, ಗೂಡಿನಲ್ಲಿ ಬಂಧಿತವಾದ ಶುಕದಂತೆ ಬಳಲಬೇಕಾಗಿ ಬಂದಿರುವುದು ವಿಧಿಯ ಲೀಲಾವಿಲಾಸ ವೈಭವದ ಒಂದು ಚಿತ್ರವಲ್ಲದಿನ್ನೇನು?

ಕುಂತಳದ ಸಾರ್ವಭೌಮನು ಒಬ್ಬ ಸಾಧಾರಣ ತಿರುಕನಿಗಿಂತಲೂ ಶೋಚನೀಯವಾದ ಪರಿಸ್ಥಿತಿಯಲ್ಲಿ ಶೋಕ, ಚಿಂತೆ, ನಿರಾಶೆ ಎಂಬ ತಿಮಿರಗಳಿಂದಾವೃತ್ತವಾದ ಮನಸ್ಸಿನೊಡನೆ ಕತ್ತಲೆಯಿಂದ ತುಂಬಿದ ಆ ಗುಹೆಯಲ್ಲಿ ಬಿದ್ದುಕೊಂಡಿರುವನು. ಗುಹೆಯ ಬಾಗಿಲುಗಳ ಸಂದುಗಳಿಂದ ಬರುತ್ತಿರುವ ಅಲ್ಪವಾದ ಪ್ರಕಾಶವು ಅದು ಹಗಲಿನ ಸಮಯವೆಂಬುದನ್ನು ಸೂಚಿಸುತ್ತಲಿದ್ದಿತು. ಮಹಾರಾಜನು ಕೃಶಾಂಗಶರೀರನಾಗಿ ಹೋಗಿದ್ದನು. ಕಣ್ಣುಗಳು ಇಳಿಬಿದ್ದು ಹೋಗಿದ್ದುವು. ಆ ನೇತ್ರಗಳನ್ನು ನೋಡಿದೊಡನೆಯೇ ಅವನ ಹೃದಯವೆಷ್ಟು ನಿರಾಶಾಪರಿಪೂರ್ಣವಾಗಿದ್ದಿತೆಂಬುದನ್ನು ಸೂಚಿಸುತ್ತಲಿದ್ದುವು.

ಹೀಗೆ ಮಹಾರಾಜನು ಮಲಗಿರಲು, ಆವೃತ್ತವಾದ ಗುಹೆಯ ಕವಾಟವು ತೆರೆಯಲ್ಪಟ್ಟಿತು. ಹೊರಗಿನಿಂದ ಒಂದು ಗರ್ಜನೆಯು ಕೇಳಿ ಬಂದಿತು "ಹೊರಗೆ ಬನ್ನಿರಿ!" ಎಂಬುದಾಗಿ. ಸಾರ್ವಭೌಮನು ತಾನು ಮಲಗಿದಲ್ಲಿಂದ ಎದ್ದು ತನ್ನ ದೃಷ್ಟಿಯನ್ನು ಗುಹೆಯ ಬಹಿರ್ಭಾಗಕ್ಕೆ ಹೊರಳಿಸಿ ನೋಡಿದನು. ಅಲ್ಲಿ ಕ್ರೂರವಾದ ಮುಖಮುದ್ರೆಯನ್ನು ತಾಳಿ ನಿಂತಿರುವ ಅಮಾತ್ಯನು ಅವನ ದೃಷ್ಟಿಗೆ ಗೋಚರವಾದನು.

ದುಷ್ಟಬುದ್ಧಿಯನ್ನು ನೋಡಿದೊಡನೆಯೇ ಮಹಾರಾಜನು ಒಂದು ಮಂದಹಾಸವನ್ನು ಬೀರಿದನು. ಅನಂತರ ಆ ಮಹಾತ್ಮನು ಹೇಳಿದನು :—

"ಅಮಾತ್ಯರೆ, ಕುಂತಳ ಸಿಂಹಾಸನವು ನಿಮಗಿರಲಿ! ನನ್ನನ್ನು ಈ ಭಯಂಕರ

ವಾದ ನರಕದಲ್ಲಿಟ್ಟು ಹಿಂಸಿಸುದರ ಬದಲು ನಿಮ್ಮ ಕರದಲ್ಲಿ ಹೊಳೆಯುತ್ತಿರುವ ಆ ಕತ್ತಿಯನ್ನು ಪ್ರಯೋಗಿಸಿ ನನ್ನ ಜೀವನದ ಯಾತ್ರೆಯನ್ನು ಸಮಾಪ್ತಿಗೊಳಿಸಬೇಕೆಂಬುದೇ ನಿಮ್ಮಲ್ಲಿ ನನಗಿರುವ ಪ್ರಾರ್ಥನೆಯು!"

"ಮಹಾರಾಜರೇ, ತಾವು ಚಿಂತಾವ್ಯತರಾಗಬೇಡಿರಿ! ತಮ್ಮ ಬಯಕೆಯನ್ನು ಪೂರೈಸುವದಕ್ಕಾಗಿಯೇ ನಾನು ಬಂದಿರುವೆನು. ತಮ್ಮ ಜೀವನದ ಯಾತ್ರೆಯು ಇನ್ನು ಕೆಲವು ನಿಮಿಷಗಳಲ್ಲಿಯೇ ಸಮಾಪ್ತಿಯನ್ನು ಹೊಂದುವುದೆಂದು ನಾನು ಭರವಸೆಯನ್ನು ಕೊಡುವೆನು" ಎಂದು ಭಯಾನಕವಾದ ಎಳೆನಗೆಯನ್ನು ಹೊರಚೆಲ್ಲುತ್ತ ಅಮಾತ್ಯನು ನುಡಿದನು. ಈ ನುಡಿಗಳನ್ನು ನುಡಿಯುತ್ತಿರುವಾಗ ಆ ದುಷ್ಟಾತ್ಮನ ವದನಮಂಡಲದಲ್ಲಿ ಭಾವಭೇದಗಳೇನೂ ಉಂಟಾಗಲಿಲ್ಲ.

"ಬಹು ಸಂತೋಷ! ಇಪ್ಪತ್ತು ಸಂವತ್ಸರಗಳಿಂದ ಅಮಾತ್ಯರಾಗಿದ್ದು, ನನ್ನ ಉಪ್ಪನ್ನು ತಿಂದುದಕ್ಕೆ ನೀವು ಪ್ರದರ್ಶಿಸುತ್ತಿರುವ ಕೃತಜ್ಞತೆಯಿದೆಂದು ನಾನು ಬಗೆಯುತ್ತೇನೆ ನನ್ನದೊಂದು ಅಂತಿಮದ ಬಯಕೆಯಿದೆ. ಅದನ್ನು ಸಮಾಪ್ತಿಗೊಳಿಸಲಾರಿರಾ? ಯಮಲೋಕದ ಪ್ರವಾಸಕ್ಕೆ ಉದ್ಯುಕ್ತನಾದ ನನ್ನ ಒಂದು ಆಗ್ರಹವನ್ನು ಪೂರ್ತಿಗೊಳಿಸಲಾರಿರಾ?"

"ಏನದು?"

"ನನ್ನ ಮುದ್ದು,-ನನ್ನ ಜೀವನದ ಬೆಳಕು,-ಚಂಪಕಮಾಲಿನಿಯ ದರ್ಶನವನ್ನು ಪಡೆಯಲು ನಾನು ಆಗ್ರಹಿಸುತ್ತೇನೆ. ಈ ನನ್ನ ಬೇಡಿಕೆಯನ್ನು ಪೂರ್ತಿ ಮಾಡಿರಿ!"

"ಆದರೆ ಮಹಾರಾಜರೇ! ರಾಜನಂದಿನಿಯು ಎಲ್ಲಿರುವಳೆಂಬುದನ್ನು ನಾನು ಅರಿತವನಲ್ಲ. ಅವಳು ಅರಮನೆಯಿಂದ ಪಾರಾಗಿ ಹೋದಳು." ಎಂದು ನುಡಿದು, ಕೆಲವು ನಿಮಿಷಗಳವರೆಗೆ ಮೌನವನ್ನು ಅವಲಂಬಿಸಿದ ಬಳಿಕ ಅಮಾ—ತ್ಯನು:"ಮಹಾರಾಜರೇ, ಹೊರಗೆ ಬನ್ನಿರಿ ಕೆಲವು ನಿಮಿಷಗಳು ಮಾತ್ರ ಉಳಿದಿವೆ."

ಮಹಾರಾಜನು ಗುಹೆಯಿಂದ ಹೊರಗೆ ಬಂದನು; ಸುತ್ತಲೂ ಜನಶೂನ್ಯವಾದ ವಿಪಿನವಲ್ಲದೆ ಇನ್ನಾವುದೂ ಇಲ್ಲ. ಮಹಾರಾಜನಿಗಾದರೋ ಬದುಕುವ ಆಶೆಯಿಲ್ಲ. ಎಷ್ಟು ದಿನಗಳ ಪರ್ಯಂತ ಈ ಹೊಲಸು ಗವಿಯಲ್ಲಿ ಬಾಳಬಹುದು? ಈ ಬಂಧನವು ಅವನ ಮನಸ್ಸಿನಲ್ಲಿ ಬದುಕನ್ನು ಕುರಿತು ಅಸಹ್ಯತಾ ಭಾವವು ಜನಿಸುವಂತೆ ಮಾಡಿದ್ದಿತು. ಸಾಧಾರಣ ಜನರು ಯಾವ ಸಾವನ್ನು ನೆನೆದು ಭಯಕಂಪಿತರಾಗುತ್ತಾರೆಯೋ, ಆ ಮೃತ್ಯುದೇವತೆಯ

ಆಲಿಂಗನದಲ್ಲಿ ಕುಂತಳ ಸಾರ್ವಭೌಮನು ಆನಂದವನ್ನು ಹೊಂದಲು ಬಯಸುತ್ತಿದ್ದನು. ಆದುದರಿಂದ ಅಮಾತ್ಯನ ನುಡಿಗಳು ಅವನನ್ನು ಭಯಭೀತನನ್ನಾಗಿ ಮಾಡಲಿಲ್ಲ.

ಗುಹೆಯಿಂದ ಹೊರಗೆ ಬಂದು ನಿಂತನು ಮಹಾರಾಜನು; ದುಷ್ಟಬುದ್ಧಿಯ ವದನಮಂಡಲವನ್ನು ಅವನು ನೋಡಿದನು. ಅಮಾತ್ಯನಾದರೂ ಅದರಂತೆಯೇ ತನ್ನ ಸ್ವಾಮಿಯ ವದನಸರೋಜವನ್ನು ವೀಕ್ಷಿಸಿದನು. ಇಪ್ಪತ್ತು ವರ್ಷಗಳಿಂದ ತಾನು ಸೇವಿಸಿದ ಸ್ವಾಮಿಯನ್ನು ತಾನು ವಧಿಸಲು ಬಂದಿರುವನೆಂದೂ, ಸ್ವಾಮಿಹತ್ಯೆಯಿಂದ ತನ್ನ ಕರಗಳು ಇನ್ನಿಷ್ಟು ಕರಾಳರೂಪವನ್ನು ಹೊಂದುವವೆಂದೂ ಅಮಾತ್ಯನು ವಿಚಾರಿಸುತ್ತಿರುವಾಗ, ಚಿಕ್ಕದಾದ ಒಂದು ತರಂಗವು ಆ ಹೃದಯದಲ್ಲಿ ಸ್ವಲ್ಪ ಚಲನೆಯನ್ನುಂಟುಮಾಡಿತು. ಆತ್ಮಸದೃಶ್ಯವಾದ ಅವನ ಮನಸ್ಸು ವಿಕಾರಪರವಶವಾಗದೆ ಇರಲಿಲ್ಲ. ರಾಜ, ಮಂತ್ರಿ ಇವರಿಬ್ಬರೂ ಒಬ್ಬರ ಮೊಗವನ್ನೊಬ್ಬರು ನೋಡುತ್ತ ಶಿಲಾಪ್ರತಿಮೆಗಳ ಹಾಗೆ ನಿಂತರು!

ಇಷ್ಟರಲ್ಲಿ "ಕುಂತಳೇಂದ್ರ ಮಹಾರಾಜರಿಗೆ ಜಯವಾಗಲಿ!" ಎಂಬ ನಿನಾದವು ಕಾಡಿನಲ್ಲಿ ವ್ಯಾಪಿಸಿತು. ಮಹಾರಾಜ ಮತ್ತು ಅಮಾತ್ಯ ಇವರಿಬ್ಬರೂ ತಮ್ಮ ದೃಷ್ಟಿಯನ್ನು ತಿರುಗಿಸಿದರು. ಕಾಡಿನ ಮಧ್ಯದಲ್ಲಿರುವ ಒಂದು ಕಿರಿದಾರಿಗಾಗಿ ಹತ್ತೆಂಟು ಮಂದಿ ಭಟರು ಬರುತ್ತಿರುವದು ಅವರ ದೃಷ್ಟಿಗಳಿಗೆ ಗೋಚರವಾಯಿತು. ಭಟರ ನಾಯಕತ್ವವನ್ನು ವಹಿಸಿದವನು ಚಂದ್ರಹಾಸನಾಗಿದ್ದನು. ಶೌರ್ಯದಿಂದ ತುಂಬಿತುಳುಕುತ್ತಿರುವ ಕುಳಿಂದ ರಾಜಪುತ್ರನ ವದನಮಂಡಲವನ್ನು ನೋಡಿದೊಡನೆಯೇ ಅಮಾತ್ಯನ ಮೊಗವು ಬಿಳುಪೇರಿತು. ಹೃದಯದಲ್ಲಿ ಭಯವು ಸಂಜಾತವಾಯಿತು. ತಾನೇನು ಮಾಡಬೇಕೆಂಬುದನ್ನು ತಿಳಿಯದೆ, ಅವನು ಕಂಪಿಸುತ್ತ ಅಲ್ಲಿಯೇ ನಿಂತನು!

"ಏಕೆ ಅಮಾತ್ಯರೇ, ಈ ರೀತಿ ಬಿಳುಪೇರಿದ ಮೊಗದೊಡನೆ ಕಂಪಿಸುತ್ತ ನಿಂತಿರುವಿರಿ? ನಿಮ್ಮ ಕಾರಸ್ಥಾನವು ಪರಾಜಯವನ್ನು ಹೊಂದಿದುದರಿಂದಲೇನು? ಗೈದ ಪಾಪಗಳ ಫಲವನ್ನುಣ್ಣಲು ಅಂಜಿಕೆಯು ಹೃದಯದಲ್ಲಿ ಉದಯಿಸಿತೇ?"

ಅಮಾತ್ಯನು ಮಾತಾಡಲಿಲ್ಲ; ಅಥವಾ ಅವನು ಮಾತಾಡಲೂ ಬಯಸಲಿಲ್ಲ.

"ಅಮಾತ್ಯರೇ! ಕದನಕ್ಕೆ ಅವಕಾಶವನ್ನು ನೀಡದೆ, ನೀವೇ ನಮ್ಮ

ಸೆರೆಯಾಳಾಗಲು ಬಯಸುತ್ತಿರುವಿರಾ? ಅಥವಾ ಕಾದಾಡಲು ಆಗ್ರಹಿಸು ತ್ತಿರುವಿರಾ?'' ಎಂದು ಪ್ರಶ್ನಿಸಿದನು ಚಂದ್ರಹಾಸನು.

ಅಮಾತ್ಯನು ಅತ್ಯಂತ ಅಭಿಮಾನಿಯಿದ್ದುದಲ್ಲದೆ, ಅದರಂತೆಯೇ ಧೀರನೂ ಆಗಿದ್ದನು. ತಾನು ಪರಾಜಯುವನ್ನು ಹೊಂದಿದರೂ, ಧೈರ್ಯವು ಅವನ ಹೃದಯುವನ್ನು ಪರಿತ್ಯಜಿಸಿರಲಿಲ್ಲ. ತಾನು ಶತ್ರುಗಳ ಬಂಧನಕ್ಕೊಳ ಗಾಗಿ ಲಜ್ಜಾವಹವಾದ ರೀತಿಯಲ್ಲಿ ಬಾಳುದದಕ್ಕಿಂತಲೂ, ಧೀರನಂತೆ ಕರ ದಲ್ಲಿ ಕತ್ತಿಯನ್ನು ಹಿಡಿದು ಕಾದಾಡುತ್ತ ಮಡಿಯುವುದೇ ಲೇಸೆಂದು ಅವನು ಬಗೆದಿದ್ದನು. ಅವನು ಕರದಲ್ಲಿರುವ ಖಡ್ಗವನ್ನು ಝಳಪಿಸುತ್ತ: ''ಕುಳಿಂದ ಪುತ್ರಾ! ನಾನಿಂದು ಪರಾಜಯುವನ್ನು ಹೊಂದಿದ್ದರೂ, ನನ್ನ ಪ್ರಯತ್ನವು ಜಲಮಧ್ಯ ಯಜ್ಞವಾಗಿ ಪರಿಣಮಿಸಿದ್ದರೂ ನನ್ನಲ್ಲಿ ಹರಿದಾಡುತ್ತಿರುವ ಶೌರ್ಯವು ನನ್ನನ್ನು ಅಗಲಿರುವದಿಲ್ಲ! ನಾನು ಸೆರೆಯಾಳಾಗಿ ಬಾಳುವುದರ ಬದಲು, ಕಾದಾಡಿ ಮಡಿಯುವುದೇ ಲೇಸೆಂದು ನಿರ್ಧರಿಸಿರುವೆನು. ಇಗೋ, ನಾನು ಕತ್ತಿಯನ್ನು ಹಿಡಿದು ಸಿದ್ಧನಾಗಿ ನಿನ್ನ ಮುಂದೆ ನಿಂತಿರುವೆನು!'' ಎಂದು ಗರ್ವದಿಂದ ನುಡಿದನು.

''ಅಮಾತ್ಯರೇ! ಬಹಳ ಒಳ್ಳೆಯದು; ನಿಮ್ಮಂತಹರಿಗೆ ಒಪ್ಪುವ ಚಲೋ ಮಾತುಗಳನ್ನೇ ನೀವಾಡಿದಿರಿ! ಆದರೆ ಒಂದು ಸಂಗತಿಯನ್ನು ಮಾತ್ರ ನೀವು ನೆನಪಿನಲ್ಲಿಡಬೇಕು ನಿಮಗೆ ಸತ್ಯ ಮತ್ತು ಧರ್ಮ ಇವುಗಳ ಬೆಂಬಲವಿಲ್ಲವೆಂಬುದನ್ನು! ನಿಮ್ಮ ಆಮಂತ್ರಣವನ್ನು ಸ್ವೀಕರಿಸಿ, ಇಗೋ ನಾನು ಕತ್ತಿಯನ್ನು ಹಿಡಿದು ದ್ವಂದ್ವ ಯುದ್ಧಕ್ಕೆ ನಿಂತಿರುತ್ತೇನೆ! ಇದು ನನ್ನ ಮತ್ತು ನಿಮ್ಮ ನಡುವೆ ನಡೆಯುತ್ತಿರುವ ಹೋರಾಟವಲ್ಲ! ಸತ್ಯ ಮತ್ತು ಧರ್ಮ ಇವುಗಳು ಅಸತ್ಯ ಮತ್ತು ಅಧರ್ಮ ಇವುಗಳೊಡನೆ ನಡೆಯಿಸುತ್ತಿರುವ ಕದನವೆಂಬುದನ್ನು ತಿಳಿದುಕೊಳ್ಳಿರಿ!''

''ಹಾಗಾದರೆ, ನಿನ್ನ ಖಡ್ಗವನ್ನು ಹಿರಿದುಕೋ!''

''ಇಗೋ ಹಿರಿದೆನು!''

ದ್ವಂದ್ವಯುದ್ಧಕ್ಕೆ ಪ್ರಾರಂಭವಾಯಿತು; ಒಬ್ಬನು ೨೦-೨೨ ವರ್ಷ ಪ್ರಾಯದ ತರುಣನಾದರೆ, ಇನ್ನೊಬ್ಬನು ೪೫ ವರ್ಷಪ್ರಾಯದ ಪ್ರೌಢವಯು ಸ್ಕನು. ಒಬ್ಬನು ರಣಶಾಸ್ತ್ರ ಕುಶಲನಾದರೆ, ಇನ್ನೊಬ್ಬನು ರಣಶಾಸ್ತ್ರ ಹಾಗು ರಾಜತಂತ್ರವಿಶಾರದನು! ಒಬ್ಬನು ಸತ್ಯ ಧರ್ಮ, ಮತ್ತು ನ್ಯಾಯ ಇವುಗಳಿ ಗಾಗಿ ಕಾದುತ್ತಲಿದ್ದರೆ, ಇನ್ನೊಬ್ಬನು ಅತಿಕಾಂಕ್ಷೆ, ಸ್ವಾರ್ಥತತ್ಪರತೆ ಎಂಬೀ ವ್ಯಾಮೋಹಗಳಿಂದ ಆವೃತನಾಗಿ, ಅಧರ್ಮ ಮತ್ತು ಅಸತ್ಯ ಇವು

ಗಳಲ್ಲಿ ನಂಬಿಕೆಯನ್ನಿಟ್ಟು ಹೋರಾಡುತ್ತಿರುವನು! ಅದು ಎರಡು ವ್ಯಕ್ತಿಗಳಲ್ಲಿ ನಡೆಯುತ್ತಿರುವ ಕದನವಾಗಿರಲಿಲ್ಲ; ಸತ್ಯ ಮತ್ತು ಧರ್ಮ ಇವುಗಳು ಅಸತ್ಯ ಮತ್ತು ಅಧರ್ಮ ಇವುಗಳೊಡನೆ ನಡೆಯುತ್ತಿರುವ ಭೀಷಣ ಸಂಗ್ರಾಮವಾಗಿದ್ದಿತು!

ಇಬ್ಬರೂ ಖಡ್ಗಗಳನ್ನು ಹಿರಿದು ಹೋರಾಡಿದರು; ಒಬ್ಬರ ಮೇಲೊಬ್ಬರು ಕತ್ತಿಯನ್ನು ಪ್ರಯೋಗಿಸಿದರು. ಹರಿತವಾದ ಕತ್ತಿಯ ಅಂಚಿನಿಂದ ಒಬ್ಬರು ಇನ್ನೊಬ್ಬರನ್ನು ಪ್ರಹರಿಸಿ, ಅವರ ದೇಹಗಳೆಂಬ ಗೂಡುಗಳಲ್ಲಿ ಅಡಗಿರುವ ಪ್ರಾಣಪಕ್ಷಿಗಳನ್ನು ವಿಮೋಚಿಸಲು ಹಾಯೊರೆದರು. ಖಣಖಣವೆಂದು ಪರಸ್ಪರರ ಖಡ್ಗಗಳ ಸಂಘರ್ಷಣಗಳಿಂದ ಸಂಜಾತವಾಗುವ ನಿನಾದವು ರೋಮಾಂಚನವನ್ನುಂಟುಮಾಡದೆ ಇರಲಿಲ್ಲ. ಚಂದ್ರಹಾಸನು ತನ್ನ ಖಡ್ಗವನ್ನು ಝಳಪಿಸುತ್ತ, ದುಷ್ಟಬುದ್ಧಿಯ ಮೇಲೆ ಏರಿ ಹೋಗುವನು ಇನ್ನೇನು? ಅಮಾತ್ಯನು ತನ್ನ ಗುರಾಣಿಯ ಆಧಾರದಿಂದ ಆ ತಾಡನವನ್ನು ತಡೆದು, ಚಂದ್ರಹಾಸನ ದೇಹವನ್ನು ಸೀಳುವುದಕ್ಕಾಗಿ ತನ್ನ ಕತ್ತಿಯನ್ನು ಎತ್ತಿದನು.

"ಭಲಾ! ಬೇಷ್! ನೀನು ಕತ್ತಿಯನ್ನು ಪ್ರಯೋಗಿಸುವುದರಲ್ಲಿ ನಿಪುಣನಿರುವೆ; ಈ ಪ್ರಯೋಗವು ರಣಕೌಶಲದಲ್ಲಿ ನಿನಗಿರುವ ಅಸಾಮಾನ್ಯ ನೈಪುಣ್ಯವನ್ನು ತೋರಿಸುತ್ತದೆ; ಆದರೆ ನೀನು ಈ ಪ್ರಹಾರವನ್ನು ತಡೆದುಕೊಂಡರೆ ನೀನು ನಿಜವಾಗಿಯೂ ಪಟುಭಟನೆನಿಸುವಿ!" ಎಂದೆನ್ನುತ್ತ ತಾನು ಎತ್ತಿ ಹಿಡಿದ ಖಡ್ಗವನ್ನು ಪ್ರಯೋಗಿಸಿದನು ಅಮಾತ್ಯನು.

ಕೂಡಲೆ ರಾಜಕುಮಾರನು ತನ್ನ ಕತ್ತಿಯನ್ನು ಎತ್ತಿ ಹಿಡಿದು ಆ ಪ್ರಹಾರವನ್ನು ತಪ್ಪಿಸಿಕೊಂಡನು. ಖಣಖಣವೆಂದು ಸಪ್ಪಳವನ್ನುಂಟು ಮಾಡಿದ ನಂತರ ಆ ಪ್ರಹಾರವು ನಿಷ್ಫಲವಾಗಿ ಪರಿಣಮಿಸಿತು.

"ಅಮಾತ್ಯರೇ! ನಿಮ್ಮ ರಣಕೌಶಲ್ಯವು ನನ್ನ ಮುಂದೆ ವಿಫಲವಾಗಿ ಹೋಯಿತಲ್ಲ!" ಎಂದು ನಗುತ್ತ ನುಡಿದು, ಚಂದ್ರಹಾಸನು:—"ಇರಲಿ ಈ ಪ್ರಹಾರವನ್ನು ಸಹಿಸಿಕೊಳ್ಳಿರಿ ನೋಡೋಣ!"

"ಆ ನನ್ನ ಪ್ರಯತ್ನವು ವ್ಯರ್ಥವಾಗಿ ಹೋದುದರಿಂದ ನಾನು ರಣಶಾಸ್ತ್ರಪಾಂಡಿತ್ಯವಿಲ್ಲದವನೆಂದು ನುಡಿಯುತ್ತಿರುವೆಯಾ?" ಎಂದು ಸಿಟ್ಟಿಗೇಳುತ್ತ ಅಮಾತ್ಯನಂದನು.

"ಇರಲಿ, ಈ ತಾಡನವನ್ನು ಸಹಿಸಿಕೊಂಡರೆ ನೀವು ಕಲಿಗಳೇ ಸರಿ!" ಎಂದು ನುಡಿಯುತ್ತ, ಚಂದ್ರಹಾಸನು ತನ್ನ ಕತ್ತಿಯನ್ನು ಬೀಸಿದನು. ಈ

ಆಘಾತವನ್ನು ತಪ್ಪಿಸಿಕೊಳ್ಳಲು ಅಮಾತ್ಯನು ಶಕ್ತನಾಗಲಿಲ್ಲ. ಕತ್ತಿಯು ಬಂದು ಅಮಾತ್ಯನ ಭುಜವನ್ನು ಸೀಳಿತು. ಗಾಯದಿಂದ ನೆತ್ತರು ಹರಿಯ ಲಾರಂಭಿಸಿತು. ದುಷ್ಟಬುದ್ಧಿಯ ಎಡದ ಕರದಲ್ಲಿರುವ ಗುರಾಣಿಯು ನೆಲ ದಲ್ಲಿ ಪತಿಸಿತು.

ಚಂದ್ರಹಾಸನು ಪುನಃ ತನ್ನ ಕತ್ತಿಯನ್ನು ಎತ್ತಿ ಹಿಡಿದು ಅಮಾತ್ಯನ ಮೇಲೆ ಪ್ರಯೋಗಿಸಲು ಉದ್ಯುಕ್ತನಾದನು. ಈ ಪ್ರಹಾರವು ಅಮಾತ್ಯನ ಶಿರಸ್ಸಿನ ಮೇಲೆ ಬಿದ್ದರೆ, ಅವನ ಜೀವನದ ಯಾತ್ರೆಯು ಸಮಾಪ್ತವಾಗುವದ ರಲ್ಲಿ ಯಾವ ಸಂದೇಹವೂ ಇರಲಿಲ್ಲ. ಆದರೂ ಅಮಾತ್ಯನು ತನ್ನ ಭುಜದ ಮೇಲೆ ಆದ ಗಾಯವನ್ನು ಲಕ್ಷ್ಯಕ್ಕೆ ತಾರದೆ. ತನ್ನ ಕತ್ತಿಯನ್ನು ಝಳಪಿ ಸುತ್ತ, ಬರುತ್ತಿರುವ ಪ್ರಹಾರವನ್ನು ತಡೆದುಕೊಳ್ಳಲು ಸಿದ್ಧನಾದನು.

ಇನ್ನೇನು? ಚಂದ್ರಹಾಸನು ತನ್ನ ಕತ್ತಿಯನ್ನು ಪ್ರಯೋಗಿಸಬೇಕು! ಒಂದು ನಿಮಿಷದೊಳಗಾಗಿ ಅಮಾತ್ಯನ ಅವತಾರವು ಸಮಾಪ್ತಿಯಾಗುವ ಸಂದರ್ಭ! ಇಗೋ, ಕತ್ತಿಯು ರಭಸದಿಂದ ಅಮಾತ್ಯನ ಶಿರಸ್ಸಿನಲ್ಲಿ ಪತಿಸುವು ದಕ್ಕಾಗಿ ಬರುತ್ತಿದೆ! ಅಷ್ಟರಲ್ಲಿ ಎಲ್ಲಿಂದ ಎಂಬುದನ್ನು ಬಲ್ಲವರಾರು? ಹದಿ ನೇಳು ವರ್ಷಪ್ರಾಯದ ವನಿತೆಯೊಬ್ಬಳು ಓಡಿ ಬಂದು, ಚಂದ್ರಹಾಸನ ಖಡ್ಗ ಪ್ರಹಾರವು ಬರುತ್ತಿರುವ ದಾರಿಯಲ್ಲಿ ಎದೆಯನ್ನೊಡ್ಡಿ ನಿಂತಳು! ಅವಳು ಯಾರು? ಎಲ್ಲಿಂದ ಬಂದಳು? ಎಂಬುದನ್ನು ಯಾರೂ ತಿಳಿಯರು. ಒಂದು ಮಿಂಚಿನಂತೆ ಅತ್ಯಂತ ವೇಗದಲ್ಲಿ ಹೋಗುತ್ತಿರುವ ಇಬ್ಬರು ವೀರರ ಮಧ್ಯ ದಲ್ಲಿ ಅವಳು ಬಂದು ನಿಂತಳು.

ಚಂದ್ರಹಾಸನು ಎತ್ತಿಹಿಡಿದ ಖಡ್ಗವು ಆಕಾಶದಲ್ಲಿ ಹಾಗೆಯೇ ನಿಂತಿತು. ಅದು ಮುಂದಕ್ಕೆ ಚಲಿಸಲಿಲ್ಲ. ಆ ಯುವತಿಯು ಚಂದ್ರಹಾಸನನ್ನು ನೋಡುತ್ತ ಹೀಗೆ ಹೇಳಿದಳು:—"ಕುಳಿಂದಕುಲ ಚಿತ್ರಭಾನು! ಅಮಾತ್ಯ ರನ್ನು ವಧಿಸುವ ಮುಂಚೆ ನನ್ನನ್ನು ಕೊಲ್ಲು! ಇಲ್ಲದಿದ್ದರೆ ನನಗೆ ಪಿತೃಭಿಕ್ಷೆ ಯನ್ನು ಕೊಡು"

"ಪಿತೃಭಿಕ್ಷೆ" ಎಂದು ಕುಮಾರಿಯು ನುಡಿಯಲು, ಅಮಾತ್ಯನು ತನ್ನ ಕಣ್ಣುಗಳನ್ನು ಹೊರಳಿಸಿ ಆ ಹೆಂಗುಸನ್ನು ನೋಡಿದನು. ಅವಳು ಬೇರೆ ಯಾರೂ ಆಗಿರಲಿಲ್ಲ. ಅಮಾತ್ಯನ ಕುಮಾರಿ ವಿಷಯಾದೇವಿಯು ಅವಳಾ ಗಿದ್ದಳು. ಚಂದ್ರಹಾಸನ ಖಡ್ಗದಿಂದ ತನ್ನ ಜನಕನನ್ನು ರಕ್ಷಿಸುವದಕ್ಕಾಗಿ ಅವಳು ತನ್ನ ಎದೆಯನ್ನೊಡ್ಡಿ ಅಲ್ಲಿ ನಿಂತಿದ್ದಳು!

——

# ಅಮಾತ್ಯನಂದಿನಿ.

"ಅಮಾತ್ಯನಂದಿನಿ!" ಎಂದನು ಮಂತ್ರೀಕುಮಾರಿಯನ್ನು ನೋಡುತ್ತ ಚಂದ್ರಹಾಸನು: "ಅಸತ್ಯ, ಅಧರ್ಮ, ಅನ್ಯಾಯ ಇವುಗಳನ್ನು ನಿವಾರಿಸುವದಕ್ಕಾಗಿ ಹೋರಾಡುತ್ತಿರುವಾಗ ಅದನ್ನು ಆತಂಕ ಪಡಿಸುವದು ವಿಹಿತವಲ್ಲ!"

"ನನ್ನ ಪೂಜ್ಯಪಿತನು ಅಸತ್ಯದ ಪಥವನ್ನು ತುಳಿದಿರಬಹುದು; ಪಾಪದ ಬದುಕನ್ನು ಅವಲಂಬಿಸಿರಬಹುದು! ಆದರೆ ಅವನನ್ನು ಕಾಪಾಡಬೇಕಾದುದು ನನ್ನ ಕರ್ತವ್ಯವು! ತಾವಿಂದು ನನಗೆ ಪಿತೃಭಿಕ್ಷೆಯನ್ನು ನೀಡದಿದ್ದರೆ, ಈ ದೇಹವನ್ನು ತಂದೆಯವರಿಗಿಂತ ಮೊದಲೇ ತಮ್ಮ ಖಡ್ಗಕ್ಕೆ ಬಲಿಯಾಗಿ ಅರ್ಪಿಸುವೆನು ತಮ್ಮಲ್ಲಿ ನಾನು ಯಾಚಿಸುತ್ತಿರುವುದು ನನ್ನ ತಂದೆಯನ್ನು ಕೊಡಿರಿ ಎಂದಾಗಿದೆ!"

"ಆದರೆ ಅಮಾತ್ಯರು ರಾಜದ್ರೋಹಿಗಳು!"

"ಆದರೆ ನಾನು ಸಿಂಹಾಸನದ ರಕ್ಷಣೆಗಾಗಿ ದುಡಿದಿರುವೆನು; ಆ ಕರ್ಮದ ಪ್ರತಿಫಲವಾಗಿ ನನ್ನ ಜನಕನನ್ನು ಯಾಚಿಸುತ್ತಲಿರುವೆನು!"

"ಯಾರು? ನೀನು ಸಿಂಹಾಸನದ ರಕ್ಷಣೆಗಾಗಿ ದುಡಿದಿರುವೆಯಾ?" ಎಂದು ಆಶ್ಚರ್ಯಚಕಿತನಾದ ಚಂದ್ರಹಾಸನು ಪ್ರಶ್ನಿಸಿದನು.

"ಹೌದು. ನಾನು ಪ್ರಯತ್ನಿಸಿರುವೆನು; ಆತ್ಮಾರ್ಥವಾಗಿ ಪ್ರಯತ್ನಿಸಿರುವೆನು! ಕುಳಿಂದ ಕುಲಚಿತ್ರಭಾನು! ತಾವು ದಯಾಶಾಲಿಗಳೆಂದು ಕೇಳಿರುವೆನು. ತಾವು ನನ್ನ ಭಿಕ್ಷೆಯನ್ನು ಮನ್ನಿಸಿ, ತಮ್ಮ ವಿಶಾಲಹೃದಯವನ್ನು ತೋರಿಸಬೇಕು!" ಎಂದು ಪುನಃ ಅಮಾತ್ಯನಂದಿನಿಯು ಯಾಚಿಸಿದಳು.

ಅಮಾತ್ಯನು ಇದುವರೆಗೆ ಮಾಯವಾಗಿದ್ದ ತನ್ನ ಪುತ್ರಿಯು ತನ್ನ ಪ್ರಾಣರಕ್ಷಣೆಗಾಗಿ ಬಂದುದನ್ನು ಕಂಡು ಆಶ್ಚರ್ಯದಿಂದ ಸ್ತಂಭೀಭೂತನಾಗಿ ಹೋದನು. "ವಿಷಯಾ, ನಾನು ದ್ರೋಹಿಯು! ನನ್ನ ಅತಿಕಾಂಕ್ಷೆಯನ್ನು ಪೂರ್ತಿಗೊಳಿಸುವದಕ್ಕಾಗಿ ಅನ್ಯಾಯ, ಅಧರ್ಮ ಇವುಗಳಿಂದ ನಿಬಿಡವಾದ ಭಯಂಕರ ದಾರಿಯನ್ನು ಅವಲಂಬಿಸಿದೆನು. ನನಗೆ ಉಪ್ಪನ್ನು ನೀಡಿದ ಸ್ವಾಮಿಗೆ ದ್ರೋಹವನ್ನು ಬಗೆದೆನು. ನನ್ನ ಪಾಪ ಪರಿಪೂರ್ಣವಾದ ಬದುಕನ್ನು ಮುಂದಕ್ಕೆ ಎಳೆದೊಯ್ಯಲು ಪ್ರಯತ್ನಿಸಬೇಡ! ಅಂತ್ಯದ ವರೆಗೆ ಒಬ್ಬ ಶೂರನಂತೆ ಜೀವಿಸಿ ಮಡಿಯುವೆನು!"

ಅಮಾತ್ಯನಂದಿನಿಯು ತನ್ನ ತಂದೆಯ ಚರಣತಲಗಳಲ್ಲಿ ತನ್ನ ಶಿರಸ್ಸನ್ನಿಟ್ಟು ಅವನ ಪಾದಗಳನ್ನು ಬಾಷ್ಪಜಲದಿಂದ ಪ್ರಕ್ಷಾಲಿಸಿದಳು. ಅನಂತರ

ಅವಳು: "ಪೂಜ್ಯ ತಂದೆಯೇ! ತಮ್ಮ ಇಷ್ಟಕ್ಕೆ ವಿಪರೀತವಾಗಿ ನಾನು ವರ್ತಿಸಿದೆನು. ನನ್ನ ಅಪರಾಧವನ್ನು ಕ್ಷಮಿಸಿರಿ! ಈ ಆಪತ್ಕಷ್ಟದಲ್ಲಿ ತಮ್ಮ ಪ್ರಾಣವನ್ನು ರಕ್ಷಿಸುವದಕ್ಕಾಗಿ ಬಂದಿರುವೆನು! ತಂದೆಯೇ ನನ್ನನ್ನು ಮನ್ನಿಸಿರಿ!"

ಮಗಳ ಮಾತುಗಳನ್ನು ಕೇಳಿ ತನ್ನ ಕರದಲ್ಲಿರುವ ಖಡ್ಗವನ್ನು ಬಿಸುಟು, ಅಮಾತ್ಯನು: "ಕುಮಾರಿ, ವಿಷಯಾ! ನಾನು ನಿನಗೆ ದ್ರೋಹವನ್ನು ಬಗೆದೆನು! ನಿನ್ನ ಅತಿಕಾಂಕ್ಷೆಯನ್ನು ಪೂರ್ತಿಗೊಳಿಸಲು ನಿನ್ನನ್ನು ಬಲಿಯಾಗಿ ನೀಡಲು ಮುಂದೆ ಬಂದೆನು!" ಎಂದು ಚಿಕ್ಕ ಮಕ್ಕಳ ಹಾಗೆ ಅಳುತ್ತ, ತನ್ನ ಮಗಳನ್ನು ಅಪ್ಪಿಕೊಂಡನು. ತನ್ನ ಕುಮಾರಿಯ ದರ್ಶನವನ್ನು ಪಡೆದೊಡನೆಯೇ ಶಿಲೆಯಂತೆ ಕಠಿಣವಾಗಿದ್ದ ಅವನ ಹೃದಯವು ಮೃದುವಾಯಿತು. ಪುತ್ರೀಪ್ರೇಮದ ಸುಧೆಯು ಅವನ ಹೃದಯವನ್ನು ಕೋಮಲವಾಗುವಂತೆ ಮಾಡಿತು.

ಈ ದೃಶ್ಯವನ್ನು ಕಂಡು, ಚಂದ್ರಹಾಸನ ಹಾಗೂ ಕುಂತಳೇಂದ್ರನ ಹೃದಯಗಳು ಕರಗಿ ನೀರಾದುವು. ಚಂದ್ರಹಾಸನು ತನ್ನ ಕರದಲ್ಲಿರುವ ಖಡ್ಗವನ್ನು ಬಿಸುಟನು. ಅನಂತರ ಅವನು ಅಮಾತ್ಯನಂದಿನಿಯ ಕಡೆಗೆ ತಿರುಗಿ: "ಅಮಾತ್ಯನಂದಿನಿ! ನಿನ್ನ ಅಭೀಷ್ಟದಂತೆಯೇ ಆಗಲಿ! ಹೆಂಗಸಿನ ಭಿಕ್ಷೆಯನ್ನು ಮನ್ನಿಸದ ಪಾಪಿಯು ನಾನಲ್ಲ! ಅಮಾತ್ಯರೇ, ನೀವೆಷ್ಟು ಕುಟಿಲ ಹೃದಯರಾದರೂ, ತಮ್ಮ ಪುತ್ರಿಯು ವನಿತೆಯರಲ್ಲಿ ಅತ್ಯಂತ ಶ್ರೇಷ್ಠಳಾಗಿರುವಳು! ಅವಳ ನುಡಿಗಳನ್ನು ಮನ್ನಿಸಿ ನಿಮ್ಮ ಜೀವಹಾನಿಯನ್ನು ಮಾಡುವ ಉದ್ಯಮವನ್ನು ನಿಲ್ಲಿಸಿರುವೆನು! ನೀವು ಸ್ವತಂತ್ರರು; ಇಷ್ಟವಾದಲ್ಲಿಗೆ ತೆರಳಬಹುದು!" ಎಂದು ನುಡಿದನು.

ಈ ಚಿತ್ರವನ್ನೆಲ್ಲ ಮೌನದಲ್ಲಿ ನೋಡುತ್ತಿದ್ದ ಕುಂತಳೇಂದ್ರನು ತನ್ನ ಮೌನವನ್ನು ಭಂಜಿಸಿ ಹೀಗೆ ಹೇಳಿದನು: "ಕುಳಿಂದಕುಮಾರ! ನೀನು ಶೂರನಿರುವಂತೆ, ಉದಾರಹೃದಯನೂ ಆಗಿರುವೆ! ನಿನ್ನ ಕೀರ್ತಿಲತೆಯು ಭಾರತವರ್ಷದಲ್ಲೆಲ್ಲ ಪಸರಿಸಲಿ!"

"ಮಹಾರಾಜರೇ! ತಮ್ಮ ಆಶೀರ್ವಾದಗಳು ಫಲಕಾರಿಯಾಗಲಿ ಎಂಬುದೇ ನನ್ನ ಹಾರೈಕೆಯು!"

"ಕುಂತಳೇಂದ್ರ ಮಹಾರಾಜರಿಗೆ ಜಯವಾಗಲಿ!" ಎಂಬ ನಿನಾದವು ಆಕಾಶದಲ್ಲಿ ಹರಡಿತು. ಎಲ್ಲರೂ ತಿರುಗಿ ನೋಡಿದರು. ರಾಜಧಾನಿಯಿಂದ ವೃದ್ಧಸೇನಾಪತಿ ಮಾರ್ತಂಡವರ್ಮ, ಕುಂತಳದ ವೀರಕೇಸರಿ ಭುವನವಿಕ್ರಮವರ್ಮ, ಚಾಣಾಕ್ಷಬುದ್ಧಿಯಾದ ನಾಗರಾಜ ಎಂಬಿತ್ಯಾದಿ ಪ್ರಧಾನಿ

ಗಳು ಸೇನಾಸಮೇತರಾಗಿ ಅಲ್ಲಿಗೆ ಬರುತ್ತಿರುವದು ಗೋಚರವಾಯಿತು. ಆ ಪ್ರಧಾನಿಗಳೆಲ್ಲರೂ ಮಹಾರಾಜನಿಗೆ ಭಕ್ತಿಪೂರ್ವಕವಾಗಿ ವಂದಿಸಿದರು. ದುಷ್ಟ ಬುದ್ಧಿಯನ್ನು ಅವರೆಲ್ಲರೂ ನಿಂದ್ಯದೃಷ್ಟಿಯಲ್ಲಿ ನೋಡಿದರೆಂಬುದನ್ನು ಇಲ್ಲಿ ಹೇಳಬೇಕಾದುದಿಲ್ಲವಷ್ಟೆ?

ವೃದ್ಧಸೇನಾಪತಿಯಾದ ಮಾರ್ತಾಂಡವರ್ಮನು ಮುಂದೆ ಬಂದು ಹೀಗೆ ಹೇಳಿದನು: “ಮಹಾಪ್ರಭುಗಳೇ! ನಮ್ಮಿಂದ ಯಾವದಾದರೂ ಅಪರಾಧವು ಘಟಿಸಿದ್ದರೆ ಕ್ಷಮಿಸಿರಿ! ಇಲ್ಲಿ ನಿಂದಿರುವ ಪ್ರತಿಯೊಬ್ಬನೂ ತಮ್ಮನ್ನೂ, ಸಿಂಹಾಸನವನ್ನೂ ರಕ್ಷಿಸುವದಕ್ಕಾಗಿ ಪ್ರಯತ್ನಿಸಿರುತ್ತಾನೆ! ಅಮಾತ್ಯರ ಕಾರಸ್ಥಾನದಿಂದ ತಮ್ಮನ್ನು ರಕ್ಷಿಸುವದಕ್ಕಾಗಿ ಗಂಡಸರು ಮಾತ್ರವಲ್ಲ; ಅಬಲೆಯರೆಂದು ಹೆಸರನ್ನು ಸಂಪಾದಿಸುವ ಹೆಂಗಸರೂ ಮುಂದೆ ಬಂದು, ತಾವು ಬಲಹೀನೆಯರಲ್ಲವೆಂಬುದನ್ನು ತೋರಿಸಿರುತ್ತಾರೆ! ಯಾವ ಫಲವನ್ನೂ ಕಾಂಕ್ಷಿಸದೆ, ಸ್ವಾಮಿನಿಷ್ಠೆಯಲ್ಲಿ ಎಲ್ಲರೂ ಹೋರಾಡಿರುತ್ತಾರೆ!’

“ಸೇನಾಪತಿಗಳೇ, ತಮ್ಮಗಳೆಲ್ಲರ ಸ್ವಾಮಿನಿಷ್ಠೆಯನ್ನೂ, ಸಿಂಹಾಸನವನ್ನು ಪರಿಪಾಲಿಸಲು ತಾವು ನಿರಂತರ ಪರಿಶ್ರಮಿಸಿದುದನ್ನೂ ಕಂಡು ನಾನು ಸಂತುಷ್ಟನಾದೆನು. ಮಾರ್ತಾಂಡವರ್ಮರೇ, ಈ ಎಲ್ಲಾ ಅನರ್ಥಗಳಿಗೆ ಕಾರಣಭೂತನು ನಾನಾಗಿದ್ದೇನೆ ಎಂದರೆ ತಪ್ಪಾಗಲಾರದು. ಅಂದು ನಾನು ನಿಮ್ಮ ಉಪದೇಶದಂತೆ ರಾಜಕಾರಣದ ಚಲನಸೂತ್ರವನ್ನು ಸಂಪೂರ್ಣವಾಗಿ ಅಮಾತ್ಯರ ಕರಗಳಿಗೆ ವಹಿಸದೆ ಇದ್ದಿದ್ದರೆ, ಈ ವಿಪತ್ತುಗಳು ಬರುತ್ತಿರಲಿಲ್ಲ.”

“ಮಹಾಸ್ವಾಮಿಯವರು ಗತಿಸಿದುದನ್ನು ಕುರಿತು ಚಿಂತಿಸಿ ಫಲವಿಲ್ಲ. ತಮ್ಮ ಸಿಂಹಾಸನವು ಧರ್ಮಾಸನವಾಗಿರುವದರಿಂದ ನಮಗೆ ವಿಜಯವು ಲಭಿಸಿತು. ಕುಂತಳೇಂದ್ರರ ಕೀರ್ತಿಯ ಮಕುಟವು ಮತ್ತೆ ಎತ್ತಲ್ಪಟ್ಟಿತು. ಈ ಸಿಂಹಾಸನವನ್ನು ರಕ್ಷಿಸುವದಕ್ಕಾಗಿ ಕುಳಿಂದ ರಾಜಕುಮಾರರು ಮಾಡಿದ ಸಾಹಸವು ಅಸಾಮಾನ್ಯವಾದುದು! ಅವರು ತಮ್ಮ ಅಸಾಧಾರಣವಾದ ಕೌಶಲ್ಯವನ್ನು ಪ್ರಯೋಗಿಸಿ, ಆಯುಧಶಾಲೆಯ ಆಕ್ರಮಣದಲ್ಲಿ ವಿಜಯವನ್ನು ಸಂಪಾದಿಸದಿದ್ದರೆ, ನಮ್ಮ ಉದ್ಯಮಗಳು ಪರಾಜಯದಲ್ಲಿ ಗಣಿಸಲ್ಪಡುತ್ತಲಿದ್ದುವು!”

“ಚಂದ್ರಹಾಸನು ನೀಡಿದ ಅಮೂಲ್ಯ ಸಹಾಯವನ್ನು ನಾನು ಮರೆಯಲಾರೆನು. ಯಾವ ರೀತಿಯಿಂದ ಆ ಸಾಲವನ್ನು ತೀರಿಸಬೇಕೆಂಬುದು ಹೊಳೆಯುವದಿಲ್ಲ. ನನ್ನ ಗೆಳೆಯನಾದ ಕುಳಿಂದಕನಂತೆ ಅವನ ಮಗನಾದರೂ ನರಕೇಸರಿಯೇ ಆಗಿರುವನು. ಎಂದಿಗಾದರೂ ‘ಸಿಂಗದುದರದಲಿ

ಜಂಬೂಕ ಜನಿಸುವದೇ?" ಎಂದು ಚಂದ್ರಹಾಸನ ಶೌರ್ಯ-ಸಾಹಸಗಳನ್ನು ಅಭಿನಂದಿಸುತ್ತ ಕುಂತಳೇಂದ್ರನು ನುಡಿದನು.

"ಮಹಾರಾಜರು ಕೆಳಿಂದ ಕುಲಶೇಖರನ ಸಾಲವನ್ನು ಯಾವ ರೀತಿಯಿಂದ ತೀರಿಸಬೇಕೆಂದು ಬಹಳ ವಿಚಾರಮಗ್ನರಾಗಬೇಕಾದುದಿಲ್ಲ. ತಮ್ಮ ಭಂಡಾರದಲ್ಲಿ ಬೆಳಗುತ್ತಿರುವ ಒಂದು ರತ್ನವನ್ನು ನೀಡಿದರೆ, ಅವರು ಸಂತುಷ್ಟರಾಗುವರು!" ಎಂದು ಮಾರ್ತಂಡವರ್ಮನು ಅರ್ಥಗರ್ಭಿತವಾದ ನುಡಿಗಳಲ್ಲಿ ಹೇಳಿದನು.

"ಆದರೆ ಚಂದ್ರಹಾಸನ ಶೌರ್ಯ-ಸಾಹಸಗಳಿಗೆ ಅನುಪಮವಾದ ಯಾವ ರತ್ನವು ತಾನೇ ನನ್ನ ಕೋಶದಲ್ಲಿರುವುದು?"

"ಮಹಾಪ್ರಭೂ!" ಎಂದು ಮಂದಹಾಸವನ್ನು ಬೀರುತ್ತ ಮಾರ್ತಂಡವರ್ಮನು:—"ಯಾವ ಹೂವಿನ ಸುವಾಸನೆಯು ಭಾರತವರ್ಷದಲ್ಲೆಲ್ಲ ವ್ಯಾಪಿಸಿರುವುದೋ, ಆ ಸುಂದರ ಸುಮದಿಂದ ಚಂದ್ರಹಾಸರು ಸಂತೃಪ್ತರಾಗುವರು."

ಮಾರ್ತಂಡವರ್ಮನ ನುಡಿಗಳನ್ನು ಆಶ್ರಾವಿಸಲು ಚಂದ್ರಹಾಸನ ವದನವು ಲಜ್ಜೆಯಿಂದ ಕೆಂಬಣ್ಣವನ್ನು ತಾಳಿತು; ಅವನು ವೃದ್ಧಸೇನಾಪತಿಯ ಮಾತುಗಳಲ್ಲಿ ಅಡಗಿರುವ ರಹಸ್ಯವನ್ನು ಅರಿತುಕೊಂಡನು. ಸೇನಾಪತಿಯ ಮಾತುಗಳನ್ನು ಆಶ್ರಾವಿಸಲು, ಅಮಾತ್ಯನಂದಿಯ ನೇತ್ರಗಳಲ್ಲಿ ಅಸೂಯೆಯ ನೆರಳು ಒಮ್ಮೆ ಕಾಣಿಸಿಕೊಂಡಿತು! ಅದು ಹೃದಯಾಂತರಾಳವನ್ನು ಭೇದಿಸಿಕೊಂಡು ಅವಳ ಮುಖದಲ್ಲಿ ಮೂಡಿ ಮಾಯವಾಯಿತು!

"ಸೇನಾಪತಿಗಳೇ! ನಿಮ್ಮ ಮಾತುಗಳ ಅರ್ಥವು ಹೊಳೆಯುವದಿಲ್ಲವಲ್ಲ!" ಎಂದನು ಅರಸನು. "ನೀವು ನುಡಿಯುತ್ತಿರುವ ಹೂವು ಯಾವುದು?"

"ಅರಮನೆಯಲ್ಲಿ ಬಾಡದೆ ವಿಕಸಿತವಾಗಿ ನಿಂತಿರುವ ಆ ದಿವ್ಯಸುಂದರ ಸುಮವು!" ಎಂದನು ಮಾರ್ತಂಡವರ್ಮನು: "ರಾಜನಂದಿನಿಯಾದ ಚಂಪಕಮಾಲಿನಿಯು!"

"ಚಂದ್ರಹಾಸನಂಥ ವೀರಕೇಸರಿಯು ನನ್ನ ಮಗಳ ಕರವನ್ನು ಗ್ರಹಿಸುವುದಾದರೆ ನಾನು ಧನ್ಯನಾದೆನು!" ಎಂದು ಕುಂತಳೇಂದ್ರನು ಸಂತೋಷಭರಿತನಾಗಿ ಹೇಳಿದನು. ಈ ಮಾತುಗಳನ್ನು ಕೇಳುತ್ತಲೆ ಚಂದ್ರಹಾಸನ ಹೃದಯವು ಹರ್ಷದಿಂದ ತುಂಬಿಹೋಯಿತು.

"ಮಹಾರಾಜರೇ, ನಾನು ವೃದ್ಧನು; ತಮ್ಮ ಸೇವೆಯಲ್ಲಿ ನನ್ನ ಬಾಳಿನ ಅಧಿಕ ಭಾಗವನ್ನು ಕಳೆದಿರುವೆನು. ಈ ಅವಕಾಶದ ಮೇರೆಗೆ ತಮ್ಮೊಡನೆ

ನಾಲ್ಕು ಮಾತಾಡಲು ಸ್ವಾತಂತ್ರ್ಯವನ್ನು ಪಡೆದು, ತಮ್ಮ ಸಿಂಹಾಸನವನ್ನು ಕಾಯಲು ಪ್ರಯತ್ನಿಸಿದ ಕೆಲವು ಮಂದಿ ವೀರರ ಹಾಗು ವೀರ ಲಲನೆಯರ ಪರಿಚಯವನ್ನು ತಮಗೆ ಮಾಡಿಕೊಡಬೇಕೆಂದಿರುವೆನು.''

''ಅವಶ್ಯವಾಗಿ ಹೇಳಿರಿ! ಸೇನಾಪತಿಗಳೇ, ನನ್ನಲ್ಲಿ ಅಕೃತ್ರಿಮ ಭಕ್ತಿಯನ್ನೂ ಪ್ರೇಮವನ್ನೂ ತೋರಿಸಿದ ಮಾನ್ಯರ ಹಾಗು ಮಹಿಳೆಯರ ಪರಿಚಯವನ್ನು ಪಡೆದು, ಅವರಿಗೆ ನನ್ನ ಕೃತಜ್ಞತೆಯನ್ನು ಅರ್ಪಿಸುವುದು ನನ್ನ ಕರ್ತವ್ಯವಾಗಿದೆ!''

''ಇಲ್ಲಿ ನಿಂತಿರುವ ನಾಗರಾಜಶರ್ಮರು ಬಹಳ ಬುದ್ಧಿಶಾಲಿಗಳು! ಕರದಲ್ಲಿ ಕತ್ತಿಯನ್ನು ಹಿಡಿದು ಕಾದಾಡುವ ಎದೆಗಾರಿಕೆಯು ಇವರಲ್ಲಿ ಇಲ್ಲದಿದ್ದರೂ, ಇವರು ಬಹು ತಂತ್ರಜ್ಞರು! ಇವರು ರಾಜಕಾರಣದಲ್ಲಿ ಪ್ರವೇಶಿಸಿದರೆ, ನಮ್ಮ ಅಮಾತ್ಯರಿಗಿಂತಲೂ ಮಿಗಿಲಾದ ರಾಜಕಾರಣಪಟುಗಳಾಗುವುದರಲ್ಲಿ ಸಂದೇಹವಿಲ್ಲ. ಅಮಾತ್ಯನಂದನನ ಬಂಧನದಿಂದ ಅರಸುಕುಮಾರಿಯನ್ನು ರಕ್ಷಿಸಲು ತಂತ್ರವನ್ನು ಪ್ರಯೋಗಿಸಿದವರು ನಾಗರಾಜರಾಗಿರುತ್ತಾರೆ. ನನ್ನ ಪುತ್ರಿಯಾದ ಮಾಲಿನಿಯೂ, ಈ ನಗರದಲ್ಲಿರುವ ಓರ್ವ ಅನ್ನವಿಕ್ರಯಿನಿಯೂ ಹೂವಾಡಿಗರ ವೇಷವನ್ನು ಧರಿಸಿಕೊಂಡು ದೇವಾಲಯಕ್ಕೆ ತೆರಳಿದರು. ಅಲ್ಲಿ ಅವರು ತಮ್ಮ ವಸ್ತ್ರಾಭರಣಗಳನ್ನು ಅರಸುಕುಮಾರಿಗೂ, ಮಹಾರಾಣಿಯವರಿಗೂ ಕೊಟ್ಟು, ಆ ವಿಪತ್ತಿನಿಂದ ಪಾರು ಮಾಡಿದರು. ನಾಗರಾಜರ ತಂತ್ರವು ಇದು ಮಾತ್ರವಲ್ಲ, ನಗರವನ್ನು ಶರಣಗತ ಮಾಡಿಕೊಳ್ಳಲು ಪ್ರಯೋಗಿಸಿದ ಮಾರ್ಗವಾದರೂ ಅವರ ಬುದ್ಧಿಯಿಂದ ಹೊರಬಿದ್ದ ಕೌಶಲ್ಯವೇ ಆಗಿದೆ. ನಾಲ್ಕು ತಿಂಗಳು ಮುತ್ತಿಗೆ ಹಾಕಿದರೂ ಕೈವಶಪಡಿಸಿಕೊಳ್ಳಲು ಅಸಾಧ್ಯವಾಗಿದ್ದ ನಗರವು, ಅವರ ನಿರ್ದೇಶದಂತೆ ವರ್ತಿಸಲು, ಕೆಲವು ತಾಸುಗಳಲ್ಲಿಯೇ ನಮ್ಮ ಅಧೀನವಾಯಿತು!''

''ನಾಗರಾಜರೇ, ನಾನು ಎಂದಿಗೂ ನಿಮ್ಮನ್ನು ಮರೆಯಲಾರೆನ; ಆ ದಿನ ನೀವು ಯುದ್ಧರಂಗಕ್ಕೆ ತೆರಳುವಾಗ, ಅಮಾತ್ಯರ ಕೃಷ್ಣಕಾರಸ್ಥಾನವನ್ನು ಕುರಿತು ನೀವು ನೀಡಿದ ಸೂಚನೆಗಳನ್ನು ನಾನು ಮರೆತಿಲ್ಲ. ನಿಮ್ಮನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ'' ಎಂದು ಅರಸನು ನಾಗರಾಜನಿಗೆ ತನ್ನ ಕೃತಜ್ಞತೆಯನ್ನು ಪ್ರಕಟಿಸಿದನು.

''ಇವರೆಲ್ಲರಿಗಿಂತಲೂ ತಮ್ಮನ್ನು ರಕ್ಷಿಸುವದರಲ್ಲಿ ಹೆಚ್ಚಿಗೆ ಪ್ರಯತ್ನಿಸಿದ ವ್ಯಕ್ತಿಯು ಬೇರೊಂದಿದೆ ಮಹಾಪ್ರಭು! ನಮ್ಮೆಲ್ಲರ ಪ್ರಯತ್ನಗಳು ಆ ವ್ಯಕ್ತಿಯ ಉದ್ಯಮಗಳಲ್ಲಿ ನೂರರಲ್ಲಿ ಒಂದಂಶವು ಸಹ ಇಲ್ಲ!''

“ಅದಾರು? ಆ ಮಹಾನುಭಾವನಾರು?” ಎಂದು ವಿಷಯೆ ಮತ್ತು ದುಷ್ಟಬುದ್ಧಿ ಇವರಿಬ್ಬರನ್ನುಳಿದು, ಇತರರೆಲ್ಲರೂ ಏಕಕಾಲದಲ್ಲಿ ಪ್ರಶ್ನಿಸಿದರು.

“ಆ ಸಾಹಸಿನಿಯನ್ನು ನಾನೀಗ ನಿಮಗೆಲ್ಲರಿಗೂ ತೋರಿಸುತ್ತೇನೆ!” ಎಂದು ತನ್ನ ದೃಷ್ಟಿಯನ್ನು ಅಮಾತ್ಯನಂದಿನಿಯ ಕಡೆಗೆ ಬೀರುತ್ತ ಮಾರ್ತಂಡ ವರ್ಮನು ನುಡಿದನು: “ಅವಳೇ ನಿಮ್ಮ ಮುಂದೆ ನಿಂತಿರುವ ಅಮಾತ್ಯನಂದಿನಿಯು!”

“ಅಮಾತ್ಯನಂದಿನಿಯೇ!” ಎಂದು ಆಶ್ಚರ್ಯಚಕಿತನಾಗಿ ಅರಸನು ಪ್ರಶ್ನಿಸಿದನು.

“ಹೌದು; ಮಹಾರಾಜರನ್ನು ರಕ್ಷಿಸಲು ಅವಳು ಅನನ್ಯಸಾಧಾರಣ ವಾದ ಸಾಹಸಗಳನ್ನು ಹೂಡಿದಳು” ಎಂದು ಮಾರ್ತಂಡವರ್ಮನು ಮುಂದು ವರಿಸಿದನು: “ನನ್ನ ಮಾಲಿನಿಯಿಂದ ಎಲ್ಲ ಸಂಭವಗಳನ್ನೂ ನಾನು ತಿಳಿದು ಕೊಂಡೆನು. ಅವನ್ನೆಲ್ಲಾ ವಿವರಿಸಬೇಕಾದರೆ ಸ್ವಲ್ಪ ಹೊತ್ತು ಬೇಕಾಗುತ್ತದೆ.”

“ಚಿಂತೆಯಿಲ್ಲ ನುಡಿಯಿರಿ!”

“ಹಾಗಾದರೆ ಹೇಳುತ್ತೇನೆ; ಒಂದು ವೇಳೆ ಮಹಾರಾಜರು ತಿಳಿದಿರ ಬಹುದು, ಅಮಾತ್ಯರು ವಿಷಯಾದೇವಿಯನ್ನು ಶಶಾಂಕಶೇಖರನೆಂಬ ಕುರೂ ಪಿಗೆ ಹಣದಾಶೆಯಿಂದ ಬಲಿ ನೀಡಲು ಮಾಡಿದ ನಿರ್ಧಾರವನ್ನು. ಈ ತರದ ಒಂದು ಪೈಶಾಚಿಕ ವಿವಾಹಬಂಧನಕ್ಕೊಳಗಾಗಲು ಅಮಾತ್ಯನಂದಿನಿಗೆ ಇಷ್ಟ ವಿರಲಿಲ್ಲ. ಅವಳು ಅತ್ಯಂತ ದೈನ್ಯದಿಂದ ತನ್ನ ಅಣ್ಣನನ್ನೂ ತಂದೆಯನ್ನೂ ಪ್ರಾರ್ಥಿಸಿದಳು; ಆದರೆ ಅಮಾತ್ಯರಿಗಾಗಲೀ ಮದನಕುಮಾರನಿಗಾಗಲೀ ಇವರು ಶಶಾಂಕನ ವ್ಯಾಮೋಹದಿಂದ ಆವೃತರಾಗಿದ್ದುದರಿಂದ, ಅಮಾತ್ಯ ನಂದಿನಿಯ ನ್ಯಾಯವಾದ ಪ್ರಾರ್ಥನೆಯನ್ನು ಮನ್ನಿಸುವ ಹೃದಯ ವಿಶಾ ಲತೆಯುಂಟಾಗಲಿಲ್ಲ.”

ಮಾರ್ತಂಡವರ್ಮನ ನುಡಿಗಳನ್ನು ಕೇಳಿ ಅಮಾತ್ಯನ ಬಾಗಿದ್ದ ಶಿರವು ಇನ್ನಿಷ್ಟು ತಗ್ಗಿತು ತನ್ನ ಮೋರೆಯನ್ನು ಸಪ್ಪಗೆ ಮಾಡಿ ನಿಂತುಕೊಂಡನು. ವಿಷಯಾಕುಮಾರಿಯ ವದನಮಂಡಲದಲ್ಲಿ ಭಯ, ಲಜ್ಜೆ ಎಂಬಿತ್ಯಾದಿ ವಿವಿಧ ವಿಕಾರಗಳು ಮಿನುಗುತ್ತಿದ್ದುವು. ತನ್ನ ಕಡೆಗೆ ದೃಷ್ಟಿಯನ್ನು ಬೀರಿದ್ದ ಜನ ವೃಂದದ ಕಡೆಯಿಂದ ಅವಳು ತನ್ನ ಮೊಗವನ್ನು ತಿರುಗಿಸಿಕೊಂಡಳು.

“ಅಮಾತ್ಯನಂದಿನಿಯ ಇಷ್ಟಕ್ಕೆ ವಿಪರೀತವಾಗಿ ವಿವಾಹಕ್ಕಿರುವ ಸನ್ನದ್ಧತೆಗಳನ್ನು ಅಮಾತ್ಯರು ಒದಗಿಸಿದರು” ಎಂದು ಮಾರ್ತಂಡವರ್ಮನು ತನ್ನ ವೃತ್ತಾಂತವನ್ನು ಮುಂದುವರಿಸಿದನು: “ಅಮಾತ್ಯನಂದಿನಿಗೆ ಆ ವಿಪತ್ತಿ

ನಿಂದ ಪಾರಾಗಲು ಯಾವ ದಾರಿಯೂ ಹೊಳೆಯಲಿಲ್ಲ. ಈ ಸಂದರ್ಭದಲ್ಲಿ ಅವಳ ಗೆಳತಿಯಾದ ಮಾಲಿನಿಯು ಸಹಾಯವನ್ನು ನೀಡಿದಳು. ಮಾಲಿನಿಯ ಉಪದೇಶದಂತೆ ಶಶಾಂಕಶೇಖರನೊಡನೆ ನಡೆಯಿಸಲು ನಿಶ್ಚಯಿಸಿದ ವಿವಾಹಕ್ಕೆ ತಾನು ಒಪ್ಪಿದಂತೆ ನಟಿಸಿದಳು. ಅಮಾತ್ಯನಂದಿನಿಯ ಈ ನಟನೆಯನ್ನು ಅಮಾತ್ಯರು ನಂಬಿದರು. ವಿವಾಹಮುಹೂರ್ತದ ದಿನ ಮಾಲಿನಿಯು ಪುರುಷವೇಷವನ್ನು ಧರಿಸಿಕೊಂಡು ವಿವಾಹಗೃಹಕ್ಕೆ ಬಂದಳು. ಅಲ್ಲಿ ಅನೇಕ ಮಂದಿ ನೆರೆದದ್ದರಿಂದ ಈ ಬಂದ ಪುರುಷನು ವೇಷಧಾರಿಣಿಯಾದ ಹೆಂಗಸೆಂಬ ಸಂಶಯವು ಯಾರಲ್ಲಿಯೂ ಉಂಟಾಗಲಿಲ್ಲ ಮಾಲಿನಿಯು ಪುರುಷವೇಷದಲ್ಲಿ ವಿಷಯಾಕುಮಾರಿಯ ವಸತಿಗೆ ತೆರಳಿದಳು. ಮೊದಲು ಹೂಡಿದ್ದ ಹಂಚಿಕೆಯಂತೆ ಅಮಾತ್ಯನಂದಿನಿಯಾದರೂ ಮಾಲಿನಿಯು ಬಂದೊಡನೆಯೇ ಮಾಲಿನಿಯು ಧರಿಸಿದ್ದ ವಸ್ತ್ರಗಳನ್ನು ತಾನು ತೆಗೆದುಕೊಂಡು ಪುರುಷವೇಷವನ್ನು ಧರಿಸಿಕೊಂಡಳು ತಾನು ಈ ವಿವಾಹಕ್ಕೆ ಇಷ್ಟಪಡದುದರಿಂದ ಗೃಹವನ್ನು ತ್ಯಜಿಸಿರುವೆನೆಂಬ ಒಂದು ಓಲೆಯನ್ನು ಬರೆದು ತನ್ನ ಕೋಣೆಯಲ್ಲಿಟ್ಟು, ಅಮಾತ್ಯನಂದಿನಿಯು ತನ್ನ ಗೃಹವನ್ನು ತ್ಯಜಿಸಿದಳು. ಅವಳು ಪುರುಷವೇಷದಲ್ಲಿ ಹೊರಬಿದ್ದುದರಿಂದ, ಅವಳೇ ಅಮಾತ್ಯನಂದಿನಿಯಿರುವಳೆಂಬ ಸಂಶಯವು ಯಾರಲ್ಲಿಯೂ ಹುಟ್ಟಲಿಲ್ಲ ಈ ರೀತಿ ತಂದೆಯ ಗೃಹದಿಂದ ಹೊರಬಿದ್ದು, ಅವಳು ಮಾಲಿನಿಯ ಗೃಹವನ್ನು ಸೇರಿದಳು. ಮಾಲಿನಿಯು ತನ್ನ ನಿತ್ಯದ ಉಡಿಗೆ-ತೊಡಿಗೆಗಳನ್ನು ಧರಿಸಿಕೊಂಡು ಅಮಾತ್ಯನಂದಿನಿಯ ಕೋಣೆಯಿಂದ ಹೊರಬಿದ್ದಳು. ಅವಳು ವಿಷಯಾಕುಮಾರಿಯ ಗೆಳತಿಯಿದ್ದುದರಿಂದ ಅವಳನ್ನು ಕುರಿತು ಯಾರೂ ಸಂದೇಹವನ್ನು ತಾಳಲಿಲ್ಲ.

"ತನ್ನ ತಂದೆಯ ಗೃಹದಿಂದ ಪಾರಾದ ಅನಂತರ ಅಮಾತ್ಯನಂದಿನಿಯು ಪುರುಷ ವೇಷವನ್ನು ಧರಿಸಿ "ವಿಶ್ವಜಿತ್ತು" ಎಂಬ ಹೆಸರಿನಲ್ಲಿ ಜೀವಿಸತೊಡಗಿದಳು ಮಹಾರಾಜರೇ! ತಮಗೆ ಚಂಡಿಕಾಲಯಕ್ಕೆ ತೆರಳಿದರೆ ಬಂದೊದಗಬಹುದಾದ ವಿಪತ್ತಿನ ಸೂಚನೆಯನ್ನು ಕೊಟ್ಟವಳು ವಿಶ್ವಜಿತ್ತು ಎಂಬ ಹೆಸರಿನಲ್ಲಿ ಬೆಳಗಿದ ಅಮಾತ್ಯನಂದಿನಿಯಾಗಿದ್ದಳು. ತಮ್ಮನ್ನು ಸೆರೆಹಿಡಿಯುವ ಸಂಗತಿಯನ್ನು ಕುರಿತು ಅಮಾತ್ಯರೂ ಮದನಕುಮಾರನೂ ರಹಸ್ಯವಾದ ಮಾತು-ಕತೆಗಳನ್ನು ನಡೆಸುತ್ತಿರುವಾಗ, ಅದನ್ನು ಹೊಂಚುಹಾಕಿ ಕೇಳಿದ ತರುಣನೂ, ಅಮಾತ್ಯನಂದನನನ್ನು ಎದುರಿಸಿದವನೂ ಈ ವಿಶ್ವಜಿತ್ತುವೇ ಆಗಿದ್ದಾನೆ. ಅಮಾತ್ಯನಂದಿನಿಯು ವಿಶ್ವಜಿತ್ತುವಾಗಿ, ದುಷ್ಟಬುದ್ಧಿಯ ಕಾರಸ್ಥಾನದ ರಹಸ್ಯಗಳನ್ನು ತಿಳಿದುಕೊಂಡು, ಆಗಾಗ ಆವಶ್ಯವಿರುವ ಸೂಚನೆ

ಗಳನ್ನು ಮಾಲಿನಿಗೆ ನೀಡುತ್ತಿದ್ದಳು. ನಾಗರಾಜರು ಚಂದ್ರಹಾಸನ ನಿರ್ದೇಶದಂತೆ ರಾಜಧಾನಿಗೆ ಬರಲು, ಅಮಾತ್ಯರ ಕಾರಸ್ಥಾನವನ್ನು ಬಯಲಿಗೆಳೆಯುವುದು ಸುಲಭ ಸಾಧ್ಯವಾಗಿ ಪರಿಣಮಿಸಿತು. ವಿಶ್ವಜಿತ್ತುವಿನ ಈ ಪ್ರಯತ್ನಗಳ ಮೂಲಕ ಸಿಂಹಾಸನಕ್ಕೆ ಪ್ರಾಪ್ತವಾದ ಗಂಡಾಂತರವು ಮಾಲಿನಿಗೆ ತಿಳಿಯಲು, ಅವಳು ಯುದ್ಧರಂಗದಲ್ಲಿರುವ ನಮಗೆ ಆ ಸಂಭವವನ್ನು ತಿಳಿಸಿದಳು. ಇದರಂತೆಯೇ ಚಂದ್ರಹಾಸನನ್ನು ಬಂಧನಸ್ಥನನ್ನಾಗಿ ಮಾಡಬೇಕೆಂಬ ಅಮಾತ್ಯನ ನಿರ್ಧರವು ವಿಶ್ವಜಿತ್ತುವಿಗೆ ತಿಳಿಯಲು, ಅವನನ್ನು ರಕ್ಷಿಸುವದಕ್ಕಾಗಿ ನಾವು ಯುದ್ಧರಂಗದಿಂದ ಹಿಂದಿರುಗುವ ದಾರಿಯಲ್ಲಿ ಪಾಳಯಗಳನ್ನು ಹೂಡಿದಲ್ಲಿಗೆ ಆತನು ಬಂದನು; ಆದರೆ ಅವನು ಬರಲು ಸ್ವಲ್ಪ ವಿಳಂಬವಾದುದರಿಂದ, ಕುಳಿಂದ ರಾಜಪುತ್ರನು ಬಂಧನಕ್ಕೆ ಒಳಗಾಗಬೇಕಾಗಿ ಬಂದಿತು. ಆದರೂ ಅಮಾತ್ಯನಂದಿನಿಯು ಹತಾಶಳಾಗದೆ, ಓರ್ವ ಭಿಕ್ಷುಕಿಯ ವೇಷವನ್ನು ಧರಿಸಿ, ಚಂದ್ರಹಾಸನು ಎಲ್ಲಿ ಬಂಧನದಲ್ಲಿರುವನೆಂಬುದನ್ನು ತಿಳಿದು, ಅಲ್ಲಿರುವ ಪಹರೆಯವನನ್ನು ವಂಚಿಸಿ ಚಂದ್ರಹಾಸನನ್ನು ವಿಮುಕ್ತನನ್ನಾಗಿ ಮಾಡಿದಳು. ತಾವು ಅಂಬಿಕಾಗ್ರಾಮದಲ್ಲಿ ಬಂಧನಸ್ಥರಾಗಿರುವ ಸಂಗತಿಯನ್ನು ನಮಗೆ ಅವಳೇ ಅರುಹಿದವಳು. ಮಹಾರಾಜರೇ, ಇಷ್ಟೆಲ್ಲ ಸಾಹಸಗಳನ್ನು ಗೈದ ಅಮಾತ್ಯನಂದಿನಿಯ ಪ್ರಯತ್ನಗಳ ಮುಂದೆ ನಮ್ಮ ಉದ್ಯಮಗಳು ಮಹತ್ವವಾದವುಗಳಲ್ಲ!''

''ಧನ್ಯ! ಧನ್ಯ! ಅಮಾತ್ಯನಂದಿನಿ, ನೀನು ಭಾರತವರ್ಷದ ವನಿತೆಯರಿಗೆ ಆದರ್ಶಸ್ವರೂಪಳಿರುವೆ!'' ಎಂದು ಮುಕ್ತಕಂಠನಾಗಿ ಅರಸನು ಮಾರ್ತಂಡವರ್ಮನು ಅಮಾತ್ಯನಂದಿನಿಯ ವೃತ್ತಾಂತವನ್ನು ಸಮಾಪ್ತಿಗೊಳಿಸಿದನಂತರ ಅವಳನ್ನು ಹೊಗಳಿದನು. ಮಹಾರಾಜನು ಶಿಲಾಪ್ರತಿಮೆಯಂತೆ ನಿಂತಿದ್ದ ಅಮಾತ್ಯನನ್ನು ನೋಡಿ:—''ಅಮಾತ್ಯರೇ, ನೀವೆಷ್ಟು ಭಯಂಕರವಾದ ಅಪರಾಧಗಳನ್ನು ಗೈದಿದ್ದರೂ, ನೀವು ಸ್ವಾಮಿದ್ರೋಹಿಗಳಾಗಿದ್ದರೂ ನಿಮ್ಮ ನಂದಿನಿಯ ರಾಜನಿಷ್ಠೆಯನ್ನೂ ಸತ್ಯತತ್ಪರತೆಯನ್ನೂ ಸ್ಮರಿಸಿ, ನಾನು ನಿಮ್ಮ ಸಮಸ್ತ ಅಪರಾಧಗಳನ್ನೂ ಕ್ಷಮಿಸಿರುತ್ತೇನೆ.''

ಮಹಾರಾಜನ ವಿಶಾಲವಾದ ಹೃದಯದಿಂದ ಹೊರಬಿದ್ದ ಅಮೃತವಾಣಿಯು ಅಮಾತ್ಯನ ಹೃದಯದಲ್ಲಿ ಮಹತ್ತಾದ ಪರಿವರ್ತನೆಯನ್ನುಂಟುಮಾಡಿತು. ಅವನ ಕಠೋರ ಹೃದಯವು ಕರಗಿತು. ತಾನು ಗೈದ ಒಂದೊಂದು ಭಯಂಕರದ ಚಿತ್ರವು ಅವನ ಮನಸ್ಸಿನಲ್ಲಿ ಹೊಳೆಯತೊಡಗಿತು. ಅವನು ಕಂಬನಿ ತುಂಬಿದ ಕಣ್ಣುಗಳಿಂದ:—''ಮಹಾರಾಜರೇ, ನಾನು

ಪಾತಕಿಯು! ತಮ್ಮ ಮಗಳಿಗೆ ದ್ರೋಹವನ್ನು ಬಗೆದೆನು. ನರಕುಲ ಸುಧಾಂಶುವಾದ ಚಂದ್ರಹಾಸನನ್ನು ವಧಿಸಲು ಯತ್ನಿಸಿದೆನು! ಈ ಪಾಪಿಯ ಮನಸ್ಸಿಗೆ ಆ ವಿಶ್ವವ್ಯಾಪಿಯು ಶಾಂತಿಯನ್ನು ನಿಡಲಿ! ಇನ್ನು ಯಾವದೂ ನನಗೆ ಆವಶ್ಯಕವಿಲ್ಲ. ಇದುವರೆಗೆ ನಾನು ಗೈದ ಪಾಪಕೃತ್ಯಗಳಿಂದ ನಿವಾರಣೆಯನ್ನು ಹೊಂದಲು ಸಂನ್ಯಾಸವನ್ನು ಸ್ವೀಕರಿಸಿ, ಅಧ್ಯಾತ್ಮಿಕ ಸಾಧನಗಳಲ್ಲಿ ನಿರತನಾಗುವೆನು.'' ಎಂದು ಪಶ್ಚಾತ್ತಾಪಭರಿತನಾಗಿ ನುಡಿದನು.

ಅನಂತರ ಅವನು ತನ್ನ ಮಗಳನ್ನು ಅಪ್ಪಿಕೊಂಡು:—''ವಿಷಯಾ, ನಿನಗೆ ದ್ರೋಹವನ್ನು ಬಗೆದ ಪಾಪಿಯು ನಾನು! ಧನಕ್ಕೆ ಮೋಹಿಸಿ, ನಿನ್ನನ್ನು ಶಶಾಂಕಶೇಖರನಿಗೆ ಬಲಿಯಾಗರ್ಪಿಸಲು ಹೊರಟ ಘಾತುಕಿಯು ನಾನು! ನನ್ನನ್ನು ಕ್ಷಮಿಸು.''

o o o o o o

ಉಪವನ. ಬೆಳದಿಂಗಳು ಚೆಲ್ಲಿದೆ; ಅರಳಿದ ಹೂಗಳು ಚಂದ್ರಿಕೆಯಲ್ಲಿ ಅತ್ಯಂತ ರಮ್ಯವಾಗಿ ತೋರುತ್ತಿರುವುವು! ಎಲ್ಲವೂ ಸೌಂದರ್ಯದಿಂದ ತುಂಬಿ ತುಳುಕಾಡುತ್ತಿರುವುವು. ರಾಜನಂದಿನಿಯು ಹರ್ಷವನ್ನು ಹೊರಚೆಲ್ಲುತ್ತ ತನ್ನ ಇನಿಯನ ಆಗಮನವನ್ನು ನಿರೀಕ್ಷಿಸುತ್ತಿರುವಳು. ಪ್ರತಿಕ್ಷಣವೂ ತಾನು ಕುಳಿತಿರುವ ಆಸನದಿಂದ ಎದ್ದು ಚಂದ್ರಹಾಸನ ಪ್ರಫುಲ್ಲವದನಮಂಡಲವು ಗೋಚರವಾಗುತ್ತಿದೆಯೋ, ಎಂದು ನಿರೀಕ್ಷಿಸುತ್ತಲಿದ್ದಳು.

ಕುಳಿಂದ ರಾಜಕುಮಾರನು ಬಂದನು; ಒಂದು ಬಾರಿ ತನ್ನ ಲೋಚನಗಳನ್ನು ತೆರೆದು ರಾಜನಂದಿನಿಯ ವಿಶಾಲವಾದ ವದನಮಂಡಲವನ್ನು ಅವಲೋಕಿಸಿದನು. ಆ ಹರಿಣಾಕ್ಷಿಯಲ್ಲಿ ಅನುರಾಗವು ನದಿಯಾಗಿ ಹರಿಯುತ್ತಿರುವುದನ್ನು ಕಂಡು ಅವನ ಹೃದಯವು ಅವಳಲ್ಲಿ ಮಿಲನವನ್ನು ಹೊಂದಿತು.

''ರಾಜನಂದಿನಿ!''

''ಕುಳಿಂದ ರಾಜಕುಮಾರರೆ! ಈ ದಾಸಿಯು ತಮಗೆ ತನ್ನ ಭಕ್ತಿಪೂರ್ವಕ ಪ್ರಣಾಮಗಳನ್ನು ಅರ್ಪಿಸುತ್ತಿರುವಳು!''

''ನೀನು ಅಮಾತ್ಯನಂದನನ ಕ್ಲೇಶಭರಿತವಾದ ಯಾತನೆಗಳನ್ನು ಅನುಭವಿಸಿದುದನ್ನು ಕಂಡು ಮರುಗುವೆನು''

''ಈಶ್ವರ ಕಾರುಣ್ಯದಿಂದ, ತಮ್ಮ ಅಸಾಮಾನ್ಯ ಪರಾಕ್ರಮದಿಂದ ಆ ವಿಪತ್ತುಗಳೆಲ್ಲವೂ ಹೋದುವಷ್ಟೆ!''

''ಸತ್ಯಕ್ಕೆ ಜಯವು ಶಾಶ್ವತವಾದುದಲ್ಲವೇ?''

"ಕುಳಿಂದಕುಲ ಪ್ರದೀಪಕರೇ! ತಮ್ಮಲ್ಲಿ ನನ್ನದೊಂದು ಭಿಕ್ಷೆಯಿದೆ!"

"ಈ ನಿನ್ನ ದಾಸನಿಗೆ ಯಾವ ಆಜ್ಞೆಯನ್ನು ನೀಡುತ್ತಿರುವೆ?"

"ಆಜ್ಞೆಯಲ್ಲ,-ಬೇಡಿಕೆಯು."

"ಏನದು?"

"ತಮ್ಮ ಹೃದಯದಿಂದ ಹೊರಸೂಸುತ್ತಿರುವ ಪ್ರೇಮವಾರಿಧಿಯನ್ನು ನಾನೊಬ್ಬಳೇ ಹೀರಲು ಅಶಕ್ಯಳು. ನಾನು ಒಬ್ಬ ಸಹಭಾಗಿನಿಯನ್ನು ಬಯಸುತ್ತಿರುವೆನು."

"ಅಂದರೆ?"

"ಅಮಾತ್ಯನಂದಿನಿಯನ್ನು ತಾವು ಅರಿತಿರಬಹುದು; ಅವಳು ನನ್ನ ಗೆಳತಿಯು. ಅವಳು ತಮ್ಮಲ್ಲಿ ಅನುರಕ್ತಳಾಗಿರುವಳು. ಅವಳ ಪ್ರೇಮ ಭಿಕ್ಷೆಯನ್ನು ತಿರಸ್ಕರಿಸಬಾರದೆಂಬುದೇ ನನ್ನ ಪ್ರಾರ್ಥನೆಯು!"

"ನನ್ನ ಹೃದಯಸಿಂಹಾಸನದ ರಾಣಿಯು ನೀನು! ಆ ಉಜ್ವಲವಾದ ಸ್ಥಾನವನ್ನು ನಾನು ಇನ್ನೊಬ್ಬಳಿಗೆ ಹೇಗೆ ನೀಡಲಿ?"

"ತಮ್ಮ ಬಲವನ್ನೆಲ್ಲ ನಾನೊಬ್ಬಳೇ ಹೀರಬೇಕೆಂದು ಬಯಸುವವಳಲ್ಲ ನಿಜವಾಗಿ ನೋಡಿದರೆ, ತಮ್ಮ ಸಹಧರ್ಮಿಣಿಯಾಗಲು ನನಗಿಂತಲೂ ಹೆಚ್ಚು ಶ್ರೇಷ್ಠಳು ಅಮಾತ್ಯನಂದಿನಿಯೇ ಆಗಿರುವಳು. ಅವಳು ವಿಶ್ವಜಿತ್ತು ಎಂಬ ಪುರುಷನ ವೇಷದಲ್ಲಿ ತಮ್ಮನ್ನು ವಿಪತ್ತುಗಳಿಂದ ಹೇಗೆ ರಕ್ಷಿಸಿದಳೆಂಬುದನ್ನು ತಾವು ಬಲ್ಲಿರಷ್ಟೆ! ಆದುದರಿಂದ ನನ್ನ ಬೇಡಿಕೆಯನ್ನು ತಿರಸ್ಕರಿಸಬೇಡಿರಿ"

"ರಾಜನಂದಿನಿ, ನಿನ್ನ ಹೃದಯವು ಇಷ್ಟು ವಿಶಾಲವಾಗಿದೆ ಎಂಬುದನ್ನು ನಾನು ತಿಳಿದಿರಲಿಲ್ಲ. ನಿನ್ನ ಬೇಡಿಕೆಯನ್ನು-ಅಲ್ಲ, ಶಾಸನವನ್ನು-ತಿರಸ್ಕರಿಸಲು ನನಗೆಲ್ಲಿದೆ ಚೈತನ್ಯವು?"

ಈ ನುಡಿಗಳನ್ನು ಆಶ್ರಾವಿಸಲು ರಾಜನಂದಿನಿಯ ವದನದಲ್ಲಿ ಒಂದು ಮಿಂಚು ಮಿನುಗಿತು. ಅವಳ ಮೈಯೆಲ್ಲ ಪುಳಕವನ್ನು ಹೊಂದಿತು!

"ಅಮಾತ್ಯನಂದಿನಿಗೆ ತಮ್ಮ ದರ್ಶನವನ್ನು ನೀಡಿರಿ. ನಾನು ಅವಳನ್ನು ಇತ್ತ ಕಡೆಗೆ ಕಳುಹಿಸುತ್ತೇನೆ." ಎಂದು ನುಡಿದು ರಾಜನಂದಿನಿಯು ತೆರಳಿದಳು.

ಅಮಾತ್ಯನಂದಿನಿಯು ಜಲಾಶಯದಲ್ಲಿ ಸಂಚರಿಸುತ್ತಿರುವ ಹಂಸದಂತೆ ಉಪವನದಲ್ಲಿ ಪ್ರವೇಶಿಸಿದಳು. ಅವಳ ವದನಮಂಡಲದಲ್ಲಿ ಪರಿಶುದ್ಧವಾದ ಒಂದು ತೇಜಸ್ಸು ಬೆಳಗುತ್ತಲಿದ್ದಿತು. ಅವಳು ಬಂದು ಕುಳಿಂದ ರಾಜಕುಮಾರನ ಚರಣಗಳಲ್ಲಿ ಸಾಷ್ಟಾಂಗಪ್ರಣಾಮಗಳನ್ನು ಅರ್ಪಿಸಿದಳು.

"ಅಮಾತ್ಯನಂದಿನಿ! ಈ ಸಾಪರಕನ ಚರಣಗಳಲ್ಲೇಕೆ ನಮಸ್ಕರಿಸುತ್ತಿರುವೆ? ನಿನ್ನಲ್ಲಿರುವ ಯೋಗ್ಯತೆಯು ತಿಲಾಂಶದಷ್ಟೂ ನನ್ನಲ್ಲಿ ಇಲ್ಲ!"

"ಕುಳಿಂದಕುಲಚಕ್ರಭಾನು! ತಮ್ಮಲ್ಲಿ ನಾನು ಲಲನಾಸಹಜವಾದ ಲಜ್ಜೆಯನ್ನು ತೊರೆದು ಯಾಚಿಸುತ್ತಿರುವೆನು; ತಮ್ಮ ಸುಖ-ದುಃಖಗಳಲ್ಲಿ ಸಮಭಾಗವನ್ನು ವಹಿಸುವ ಅಧಿಕಾರವನ್ನು ನೀಡಬೇಕೆಂದು! ತಮ್ಮ ಚರಣಗಳನ್ನು ಆರಾಧಿಸುವ ಅವಕಾಶವನ್ನು ನನಗೆ ದಯಪಾಲಿಸಬೇಕೆಂದು!" ಎಂದು ಹಸುಳೆಯಂತೆ ಅನುರಕ್ತ ಅಮಾತ್ಯನಂದಿನಿಯು ಯಾಚಿಸಿದಳು.

ಅಮಾತ್ಯನಂದಿನಿಯು ತನ್ನಲ್ಲಿ ಇಟ್ಟಿರುವ ಅಗಾಧ ಪ್ರೇಮವನ್ನು ವೀಕ್ಷಿಸಿ ಚಂದ್ರಹಾಸನ ಹೃದಯವು ದ್ರವಿಸಿತು. ತನಗಾಗಿ ವಿವಿಧ ಸಂತಾಪಗಳನ್ನು ಅವಳು ಅನುಭವಿಸಿದಳೆಂಬುದನ್ನು ವಿಚಾರಿಸಲು ಅವನ ಮನವು ಕರಗಿತು.

"ಅಮಾತ್ಯನಂದಿನಿ! ನಿನ್ನ ಪ್ರಯತ್ನಗಳ ಫಲವಾಗಿ ನನ್ನ ಜೀವವು ಉಳಿದಿತು. ಆ ಮಹದುಪಕಾರವನ್ನು ಹೇಗೆ ತೀರಿಸಲಿ? ಅದನ್ನು ನಾನು 'ನಿನ್ನವನಾಗಿ' ತೀರಿಸಲು ಯತ್ನಿಸುತ್ತೇನೆ!"

ಅನಂತರ ಅವರಿಬ್ಬರೂ ಮಾತಾಡಲಿಲ್ಲ; ಅಥವಾ ಮಾತಾಡುವದಕ್ಕೆ ಪ್ರಯತ್ನಿಸಲಿಲ್ಲ. ಒಂದು ಹೃದಯವು ಇನ್ನೊಂದು ಹೃದಯವನ್ನು ತಿಳಿದುಕೊಂಡಿತು. ಎರಡು ಎದೆಗಳಲ್ಲಿ ಹರಿಯುತ್ತಿರುವ ಪ್ರಣಯಪ್ರವಾಹಗಳು ಪರಸ್ಪರ ಸಂಗಮವನ್ನು ಹೊಂದಿದುವು. ಪರಸ್ಪರ ಬಾಹುಗಳ ಬಂಧನದಲ್ಲಿ ಸಿಲುಕಿ, ಅನುರಾಗದ ಸಿಹಿ ಜೇನನ್ನು ಕುಡಿಯಲು ಆ ತರುಣ-ತರುಣಿಯರು ಪ್ರಯತ್ನಿಸಿದರು!



## ಉಪಸಂಹಾರ

೨೦೦ ದಿನ ಅಧ್ಯಾಯದಲ್ಲಿ ಹೇಳಿದಂತೆ, ತಾನು ಗೈದ ಪಾಪಕೃತ್ಯಗಳನ್ನು ನೆನೆದು ಅಮಾತ್ಯನು ಪಶ್ಚಾತ್ತಾಪಭರಿತನಾದನು ಅವನು ಲೌಕಿಕ ಜೀವನ ದಲ್ಲಿ ಅಸಹ್ಯತೆಯನ್ನು ಹೊಂದಿ, ಸಂನ್ಯಾಸವನ್ನು ಸ್ವೀಕರಿಸಿ ಆಧ್ಯಾತ್ಮಿಕ ಸಾಧನೆಗಳಿಗಾಗಿ ವಿಪಿನಾಂತರಕ್ಕೆ ತೆರಳಿದನು. ಸೆರೆಮನೆಯಲ್ಲಿರುವ ಮದನ ಕುಮಾರನಾದರೂ ಚಂದ್ರಹಾಸನ ಉದಾರಬುದ್ಧಿಯ ಫಲವಾಗಿ ಕಾರಾ ಗೃಹ ವಿಮುಕ್ತನಾದನು; ಆದರೆ ಅವನು ಸ್ವದೇಶದಲ್ಲಿ ಜೀವಿಸಲು ಬಯಸ ಲಿಲ್ಲ ತನ್ನ ಕೃತ್ಯಗಳನ್ನು ನೆನೆದು ಲಜ್ಜಿತನಾಗಿ, ಅವನು ದೇಶಾಂತರ ವಾಸ ವನ್ನು ಸ್ವೀಕರಿಸಿದನು

ಶ್ರೀ ನಾರದಮಹರ್ಷಿಗಳು ತಮ್ಮ ದಿವ್ಯಜ್ಞಾನದಿಂದ ಚಂದ್ರಹಾಸನ ಪೂರ್ವವೃತ್ತಾಂತವನ್ನು ತಿಳಿದು ಕುಂತಳೇಂದ್ರನಿಗೆ ತಿಳಿಸಿದರು. ಅವನು ಕೇರಳದೇಶದ ನೃಪವರ್ಯನಾದ ಸುಧಾರ್ಮಿಕನ ಮಗನೆಂದೂ, ಶತ್ರು ಗಳ ಬಾಧೆಯಿಂದ ಸುಧಾರ್ಮಿಕನು ಮೃತನಾಗಲು, ರಾಜನಿಷ್ಠಳಾದ ಓರ್ವ ದಾಸಿಯು ರಾಜಕುಮಾರನನ್ನು ಕುಂತಳದೇಶಕ್ಕೆ ಕೊಂಡು ಬಂದು ಪರಿಪಾಲಿಸಿದಳೆಂದೂ ನಾರದರು ಕುಂತಳೇಂದ್ರನಿಗೆ ತಿಳಿಸಿದರು. ಹೀಗಿರಲು, ಆ ವೃದ್ಧದಾಸಿಯು ಮೃತಳಾಗಲು ಚಂದ್ರಹಾಸನು ತಿರುಪೆಯಿಂದ ಜೀವಿಸ ಬೇಕಾಗಿ ಬಂದಿತು. ಚಂದ್ರಹಾಸನು ಒಮ್ಮೆ ಬೀದಿಯ ಬಾಲಕರೊಡನೆ ಅಮಾತ್ಯಗೃಹದ ಮುಂದೆ ಆಡುತ್ತಿರಲು, ಒಬ್ಬ ಜ್ಯೋತಿಷ್ಕನು ಈ ಬಾಲ ಕನು ಕುಂತಳದ ಅರಸನಾಗುವನೆಂದು ಭವಿಷ್ಯವನ್ನು ಅಮಾತ್ಯನೊಡನೆ ನುಡಿದನು. ಸಿಂಹಾಸನದಲ್ಲಿ ದೃಷ್ಟಿಯನ್ನಿಟ್ಟಿದ್ದ ಅಮಾತ್ಯನು ಚಂಡಾಲ ರಿಂದ ಈ ಬಾಲಕನನ್ನು ವಧಿಸಲು ಪ್ರಯತ್ನಿಸಿದನು; ಆದರೆ ದೈವೇಚ್ಛೆ ಯಿಂದ ಬಾಲಕನ ಮಾತುಗಳನ್ನು ಕೇಳಿ, ಕರುಣಾಭರಿತರಾಗಿ, ಬಾಲಕನನ್ನು ಕೊಲ್ಲದೆ ಅವನ ಎಡಗಾಲಿನ ಬೆರಳನ್ನು ಕತ್ತರಿಸಿ, ಆ ಚಾಂಡಾಲರು ಬಾಲಕ ನನ್ನು ಕಾಡಿನಲ್ಲಿ ಬಿಟ್ಟರು. ಕಾಡಿಗೆ ಬೇಟೆಗಾಗಿ ತೆರಳಿದ್ದ ಕುಳಿಂದಕನು ಚಂದ್ರಹಾಸನನ್ನು ಕಂಡು ಹೇಗೆ ರಕ್ಷಿಸಿದನೆಂಬುದೂ, ಅವನನ್ನು ತನ್ನ ವಂಶದ ಅಧಿಕಾರಿಯನ್ನಾಗಿ ಹೇಗೆ ಮಾಡಿದನೆಂಬುದೂ ನಮಗೆ ತಿಳಿದೇ ಇವೆ

* * * * *

ಬಹು ಸಂಭ್ರಮದಲ್ಲಿ ಅಮಾತ್ಯನಂದಿನಿ ಹಾಗು ರಾಜನಂದಿನಿ ಇವರೊಡನೆ ಚಂದ್ರಹಾಸನ ವಿವಾಹಮಹೋತ್ಸವವು ಜರುಗಿತು. ಪುತ್ರನ ಮದುವೆಯನ್ನು ಕಂಡು ಕುಳಿಂದಕನು ಹರ್ಷಭರಿತನಾದನು. ಆ ಇಬ್ಬರು ವನಿತಾಮಣಿಗಳು ಶ್ರೀವಿಷ್ಣುವಿಗೆ ಭೂದೇವಿ-ಶ್ರೀದೇವಿಗಳಿರುವಂತೆ ಚಂದ್ರಹಾಸನ ಎಡ-ಬಲಗಳಲ್ಲಿ ಶೋಭಿಸಿದರು!

ಮದುವೆಯ ಅನಂತರ ಕುಂತಳೇಂದ್ರನು ತನ್ನ ಸಿಂಹಾಸನವನ್ನು ಅಳಿಯನಾದ ಚಂದ್ರಹಾಸನಿಗೆ ಕೊಟ್ಟು, ವೃದ್ಧ ಸೇನಾಪತಿಯಾದ ಮಾರ್ತಂಡವರ್ಮನೊಡನೆ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ, ಆಧ್ಯಾತ್ಮಿಕ ಸಾಧನೆಗಳಿಗಾಗಿ ವಿಪಿನಕ್ಕೆ ತೆರಳಿದನು.

ನಾಗರಾಜನು ಕುಂತಳ ಸಮ್ರಾಟನ ಅಮಾತ್ಯನಾಗಿಯೂ, ಭುವನವಿಕ್ರಮನು ಆ ನರಕೇಸರಿಯ ಪ್ರಧಾನ ಸೇನಾಪತಿಯಾಗಿಯೂ ರಾಜಿಸಿದರು. ತನ್ನ ತಂದೆಯಾದ ಸುಧಾರ್ಮಿಕನ ದೇಶವಾದ ಕೇರಳವನ್ನು ಚಂದ್ರಹಾಸನು ಶತ್ರುಗಳನ್ನು ಸೋಲಿಸಿ ವಶಪಡಿಸಿಕೊಂಡನು.

ಅಮಾತ್ಯನಂದಿನಿಯು ತನ್ನ ಪತಿದೇವನಿಗೆ ರಾಜಶಾಸನವನ್ನು ಕುರಿತು ಅಮೂಲ್ಯವಾದ ಸಲಹೆಗಳನ್ನು ನೀಡುತ್ತಿದ್ದಳು. ಚಂದ್ರಹಾಸನು ತನ್ನ ಮಡದಿಯ ಸಲಹೆಯಂತೆ ರಾಜ್ಯಭಾರವನ್ನು ನಡೆಯಿಸುತ್ತಿದ್ದನು.

ಚಂದ್ರಹಾಸನ ಕೀರ್ತಿಲತೆಯು ದಿಗಂತಪರ್ಯಂತ ವ್ಯಾಪಿಸಿತು. ಅವನ ಸಾಮ್ರಾಜ್ಯವು ನೀತಿ, ನ್ಯಾಯ, ಸತ್ಯ, ಧರ್ಮ ಇವುಗಳ ನೆಲೆವೀಡಾಗಿ ಪರಿಣಮಿಸಿತು. ವೃದ್ಧ ಕುಳಿಂದಕನು ತನ್ನ ಪಾಲಿತ ಪುತ್ರನ ಅಭ್ಯುನ್ನತಿಯನ್ನು ದರ್ಶಿಸಿ ಆನಂದತಲ್ಲೀನನಾಗಿ ಹೋದನು.

ಲೋಕಾಃಸಮಸ್ತಾಃಸುಖಿನೋಭವಂತು ।



# ಶ್ರೀ ಶೇಷಾಚಲ ಪ್ರೆಸ್ಸ,

## ಆನಂದವನ.





ಈ ಛಾಪಖಾನೆಯಲ್ಲಿ

ಎಲ್ಲ ಬಗೆಯ

ಪ್ರಿಂಟಿಂಗ, ಬಾಯಿಂಡಿಂಗ, ರೂಲಿಂಗ

ಮುಂತಾದ ಕೆಲಸಗಳು

ತೀವ್ರವಾಗಿಯೂ

ಮನೋಹರವಾಗಿಯೂ

ಮಾಡಿಕೊಡಲ್ಪಡುವವು.

## ದರಗಳು ಸುಲಭ.

**ಒಮ್ಮೆ ಕೆಲಸ ಕಳಿಸಿ ಅನುಭವ**

**ಪಡೆಯಿರಿ.**